# ನಿತ್ಯದ ಮನೆಕೆಲಸ ನಿಮಗೆ ಬೆನ್ನುನೋವು ಮತ್ತು ಕೀಲು ನೋವುಗಳನ್ನು ಉಂಟುಮಾಡಬಲ್ಲದು.



ನೀವಿನ್ನೂ ಎದ್ದೇ ಇಲ್ಲ, ಆಗಲೇ ನಿಮ್ಮ ಯಜಮಾನರು ಕಛೇರಿಗೆ, ಮಕ್ಕಳು ಶಾಲೆಗೆ ಹೊರಡುತ್ತಿದ್ದಾರೆ. ನೀವು ಸಮಯದೊಂದಿಗೆ ಪಂದ್ಯ ಕಟ್ಟಿ ಕೆಲಸ ಮಾಡುತ್ತೀರಿ. ಅಡಿಗೆ ಕೆಲಸವೆಲ್ಲ ಮುಗಿಯುವ ಹೊತ್ತಿಗೆ ನಿಮ್ಮ ಬೆನ್ನು ನೋಯುತ್ತಿರುತ್ತದೆ.



ನೀವು ಒಂದು ಕ್ಷಣ ಸಹ ವಿಶ್ರಾಂತಿ ತೆಗೆದುಕೊಳ್ಳಲು ಆಗುತ್ತಿಲ್ಲ. ರಾಶಿ ಬಟ್ಟೆಯನ್ನು ನೀವೇ ಒಗೆಯಬೇಕು. ಅದೆಲ್ಲಾ ಮುಗಿಯುವ ಹೊತ್ತಿಗೆ ಕೀಲುಗಳಲ್ಲಿ ನೋವು ಕಾಣಿಸಿಕೊಳ್ಳುತ್ತದೆ.

ವೈಜ್ಞಾನಿಕವಾಗಿ, ಸಂಯೋಜಿತವಾದ ಐಯೊಡೆಕ್ಸ್ ಬಾಧಿತ ಜಾಗಗಳಲ್ಲಿ ಆಳವಾಗಿ ಇಳಿದು ಬೆನ್ನು ನೋವು, ಸ್ನಾಯು ನೋವು ಮತ್ತು ಕೀಲುನೋವುಗಳಿಂದ ನಿಶ್ಚಿತ ಶಮನ ನೀಡುತ್ತದೆ.

# ಐಯೊಡೆಕ್ಸ್®

## ಪೂರ್ಣ ಶಮನಕ್ಕೆ

50 ವರ್ಷಗಳಿಂದ ಭಾರತದ ಅತ್ಯಧಿಕ ಮಾರಾಟವಾಗುತ್ತಿರುವ ನೋವು ಮುಲಾಮು






ಇದೊಂದು ಸ್ಮಿತ್ ಕ್ಲೈನ್ ಅಂಡ್ ಫ್ರೆಂಚ್ ತಯಾರಿಕೆ.

ASP-SKF-23 KAN

ಕಸ್ತೂರಿ

ಪ್ರಕಟನೆ :
ಪ್ರತಿ ತಿಂಗಳ ೧ ನೇ ದಿನಾಂಕ

ಸಂಪಾದಕರು :
ರಂಗನಾಥ ದಿವಾಕರ

ಸಹಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್ ಹುಬ್ಬಳ್ಳಿ

ಕಚೇರಿ :
ಕಸ್ತೂರಿ ಕಾರ್ಯಾಲಯ ಹುಬ್ಬಳ್ಳಿ

ಕಲೆ :
ಕೆ. ಬಿ. ಕುಲಕರ್ಣಿ

ಮುದ್ರಣ :
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಮುಖಚಿತ್ರ :
ಆವಳಿಗಳು
ಗುರುಮೂರ್ತಿ ಹೆಗ್ಡೆ

ಚಂದಾ ದರ

| | | |
|---|---|---|
| ೩ ವರ್ಷ (ಅಂಚೆ ಸೇರಿ) | | ರೂ. ೨೮-೦೦ |
| ೨ ವರ್ಷ | ,, | ರೂ. ೨೦-೦೦ |
| ೧ ವರ್ಷ | ,, | ರೂ. ೧೧-೦೦ |
| ಅರ್ಧ ವರ್ಷ | ,, | ರೂ. ೬-೦೦ |

KASTURI March 1973


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮುಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ ರೂಪಾಂತರ ಇವೆಲ್ಲ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖನಗಳನ್ನು ಕಳಿಸಿದರೆ ಅವುಗಳ ಬಗ್ಗೆ ಬೇಗ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನು ಕಳಿಸಿರಬೇಕು. "ಇದುವೇ ಜೀವ" ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು ಅಥವಾ ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳ ಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದುಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ, "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ, ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳ "ಕಸ್ತೂರಿ" ಆಯಾ ತಿಂಗಳ ೧ ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

| | | |
|---|---|---|
| ಸಹಚಿಂತನ ... | | ೩ |
| ವಿಜಯದಾಹ ... | | ೫ |
| ಆಫ್ರಿಕದ ಗುಡ್ಡಗಾಡು ಕಲೆ ... | | ೭ |
| ವೆನಿಸ್ ನಗರ ಕುಸಿಯುತ್ತಿದೆ ... | ಎಂ. ಆರ್. ಎಸ್. ರಾವ್ | ೧೧ |
| ಕಪ್ಪು ದ್ವೀಪ ಜಮೈಕಾ ... | ಶ್ರೀನಾಥ | ೧೬ |
| ಹಿಂಸೆಯಿಂದ ಅಹಿಂಸೆಗೆ ... | ರಂಗನಾಥ ದಿವಾಕರ | ೨೧ |
| ಗರ್ಭಪಾತ ಸಮಸ್ಯೆ ಸರಳವಾಗಿಲ್ಲ | ಡಾ. ಶ್ರೀಮತಿ ಎಸ್. ಎಂ. ಕಲ್ಯಾಣಪುರ | ೨೪ |
| ಮಗು...ಮಗು...ಮಗು... ... | ಕೀಥ್ ಡಿಗ್ಲ್ | ೨೭ |
| ಎನ್. ಐ. ವಾವಿಲೋವ್ ... | ಟಿ. ಆರ್. ಗೋವಿಂದರಾಜು | ೩೩ |
| ಕೊಡೆಗಳ ಕತೆ | ಕರಸುಳ್ಳಿ ಪರಮೇಶಮೇಶ್ವರ ಶರ್ಮ | ೪೦ |
| ನಾನು ಬಬೂನುಗಳನ್ನು ಕಂಡೆ ... | ಪಿ. ಜೆ. ಲೇರಿಚ್ | ೪೩ |
| ಜೈಲಿನಲ್ಲೊಂದು ರೋಮಾನ್ಸ್ ... | 'ಅಜ್ಞೇಯ' | ೪೮ |
| ಶ್ರೀಕೃಷ್ಣ ಆಲನಹಳ್ಳಿ | ಗುರುಮೂರ್ತಿ ಹೆಗಡೆ ಮತ್ತು ಕೆ. ಪಿ. ವಾಸುದೇವನ್ | ೫೦ |
| ತಂತೀ ಕಂಬದಲ್ಲಿ ದೇವರು ... | ಜಿ. ಆರ್. ಶಾನಭಾಗ | ೫೫ |
| ವಿಜ್ಞಾನ ಸ್ವಾರಸ್ಯ ... | ಸಂಗ್ರಹ : ತಿ. ನರಹರಿ | ೫೭ |
| ಮಂಗಳನಲ್ಲೇನಿದೆ? ... | ಶ್ರೀಕಾಂತ | ೬೦ |
| ಹಚ್ಚೆ (ಕಥೆ) ... | 'ಸಾಕಿ' | ೬೫ |
| ಕಪ್ಪು ಪರ್ವತದ ಮೇಲೆ ಭಗೀರತ ಪ್ರಯತ್ನ... | ಅಬ್ದುಲ್‌ವಹಾಬ್ ಚಾಂದಾ ಆಳಂದಕರ | ೬೯ |
| 'ಲೈಫ್' ಕಣ್ಣು ಮುಚ್ಚಿತು ... | ಬದರೀನಾಥ | ೭೩ |
| ಮನವೆಂಬ ಮರ್ಕಟ (ಕಥೆ) ... | ಗೀತಾ ದೇಸಾಯಿ | ೭೭ |
| ಲಾಹೋರಿನ ಆ ಶಾಲೆಯಲ್ಲಿ ... | ಎಂ. ಎಸ್. ಕಲ್ಯಾಣಸುಂದರಂ | ೮೧ |
| ನಗೆಮಲ್ಲಿಗೆ ... | | ೮೫ |
| ದೊಡ್ಡವರ ಸಣ್ಣ ಕತೆಗಳು ... | ಸಂಗ್ರಹ : ವಿ. ಎಸ್. ಜೋಶಿ | ೮೮ |
| ಇವರು ಗೆದ್ದು ಸೋತರು ... | ಜಯರಾಮಾಚಾರ್ಯ ಮಳಗಿ | ೮೯ |
| ಮೂರು ಮೊಗದವನು (ಕವನ) ... | ಶ್ರೀ ದೇವದತ್ತ | ೯೬ |
| ಇದುವೇ ಜೀವನ ಇದು ಜೀವನ ... | | ೯೮ |
| ಮೂಷಕ ವಿಷಗಳು ... | ಡಾ. ಎಂ. ಎಂ. ಭಟ್ಟ | ೧೦೦ |
| ಎಂ. ಜಿ. ರಾಮಚಂದ್ರನ್ ... | ಕೆ. ಟಿ. ವೇಣುಗೋಪಾಲ | ೧೦೪ |
| ಅಭಯ (ಕಥೆ) ... | ಕಾಮಾರ್ ನೀಲಕಂಠಪಿಳ್ಳೆ | ೧೧೦ |
| ಸ್ಮರಣಶಕ್ತಿಯನ್ನು ಹೇಗೆ ಹೆಚ್ಚಿಸಿಕೊಳ್ಳಬೇಕು ? | ರಾಧಾಕೃಷ್ಣರಾವ್ | ೧೨೧ |
| ಟರ್ಕಿಷ್ ಕನೆಕ್ಷನ್ ... | ನಾಗರಾಜ | ೧೨೫ |


**ಪುಸ್ತಕ ವಿಭಾಗ**


| | | |
|---|---|---|
| ಪತ್ನೀಪರೀಕ್ಷೆ | ಮೂಲ ಫ್ರೆಂಚ್ : 'ಪ್ಯಾರಿಸ್‌ನಗರದ ಸಜ್ಜನ' ಸಂಗ್ರಹ : ಶ್ರೀನಿವಾಸ ಹಾವನೂರ | ೧೨೯ |

ಫೆಬ್ರುವರಿ 'ಕಸ್ತೂರಿ'ಯಲ್ಲಿ ಶ್ರೀ ನರಸಿಂಹ ಗುಡಿಯವರು ಬರೆದ 'ಶಿಕ್ಷಣವನ್ನು ಶಿಕ್ಷಕನಿಗೇ ಬಿಡಿ' ಲೇಖನ ಸ್ವಾಗತಾರ್ಹ. ಇಂದಿನ ವಿಷಯ-ಕೇಂದ್ರಸ್ಥ ಶಿಕ್ಷಣದ ಬದಲು ಪ್ರಾಚೀನ ಗುರುಕುಲವನ್ನು ಹೋಲುವ ಶಿಕ್ಷಕಕೇಂದ್ರಸ್ಥ ಪದ್ಧತಿಯನ್ನು ಬಳಕೆಗೆ ತರುವುದರಿಂದ ಇಂದಿನ ಅನೇಕ ಅನಿಷ್ಟಗಳನ್ನು ತಡೆಗಟ್ಟಬಹುದು ಎಂದು ನಂಬಿರುವವರಲ್ಲಿ ನಾನೊಬ್ಬ. ಅದರಂತೆಯೆ ಗುರು-ಶಿಷ್ಯ ಅನುಪಾತವು ೧:೨೦ ಕ್ಕೆ ಹೆಚ್ಚದಂತಿರಬೇಕಾದದ್ದೂ ಅನಿವಾರ್ಯ. ಆದರೆ ಇದಕ್ಕೆ ಸಾಕಷ್ಟು ಪರಿಶ್ರಮವುಳ್ಳ ಶಿಕ್ಷಕರು ದೊರಕಬಹುದೆ ?

ಇಂದು ಕಡ್ಡಾಯವಾಗಿರುವ ಏಕಮುಖ ಶಿಕ್ಷಣ ವಿದ್ಯಾರ್ಥಿಗಳ ಬುದ್ಧಿಗೆ ಮಾತ್ರ ಕೊಡುವ ಪಾಠ್ಯಜ್ಞಾನ. ಇದರಿಂದ ಅನೇಕ ವಿದ್ಯಾರ್ಥಿಗಳಲ್ಲಿರುವ ಇತರ ಪ್ರತಿಭೆಗಳಿಗೆ ರೂಪು ಕೊಡುವುದಶಕ್ಯ. ಅದಕ್ಕಾಗಿ ಅನೇಕರಿಗೆ ವೃತ್ತಿಮೂಲ ಶಿಕ್ಷಣ ಕೊಡಬೇಕಿದೆ. ಈ ಹೊಣೆಯನ್ನು ಪೂರಯಿಸಲು ಶಿಕ್ಷಕ-ಕೇಂದ್ರಸ್ಥ ವ್ಯವಸ್ಥೆ ಎಷ್ಟು ಮಟ್ಟಿಗೆ ಸಮರ್ಥವಾದೀತೆಂಬುದು ವಿಚಾರ-ಯೋಗ್ಯ.

ಶಿಕ್ಷಣದ ವಿಕೇಂದ್ರೀಕರಣವನ್ನು ಕುರಿತು ಶ್ರೀ ಗುಡಿಯವರು ವ್ಯಕ್ತಪಡಿಸಿದ ವಿಚಾರ ಅತ್ಯಂತ ಮಹತ್ವದ್ದು. ದೇಶದ ಶಿಕ್ಷಣವೇತ್ತರು ಮತ್ತು ಸರಕಾರ ಇತ್ತ ಗಮನಿಸುವರೆಂದು ಆಶಿಸೋಣವೆ ?

ಭದ್ರಾವತಿ —ಕೆ. ಎಸ್. **ಕೃಷ್ಣಮೂರ್ತಿ**

ನಿಮ್ಮ ಫೆಬ್ರುವರಿ ಸಂಚಿಕೆಯಲ್ಲಿ 'ಶಿಕ್ಷಣವನ್ನು ಶಿಕ್ಷಕನಿಗೇ ಬಿಡಿ' ಲೇಖನದಲ್ಲಿ ಶ್ರೀ ನರಸಿಂಹ ಗುಡಿಯವರು ವ್ಯಕ್ತಪಡಿಸಿದ ಧ್ಯೇಯ ಉದಾತ್ತವಾದುದು. ಆದರೆ ಈಗಿನ ದಿನಮಾನದಲ್ಲಿ ಇದು ಸುಲಭ ಸಾಧ್ಯಮಾತಲ್ಲ.

ಶಿಕ್ಷಕ-ವಿದ್ಯಾರ್ಥಿ ಪ್ರಮಾಣವನ್ನು ೧:೨೦ ರಷ್ಟಿಟ್ಟುಕೊಳ್ಳಲು ಅರ್ಹ ಶಿಕ್ಷಕರ ಕೊರತೆ ನಿಜಕ್ಕೂ ಇದೆ. ಖಾಸಗಿ ಡಾಕ್ಟರರಿಗೂ ಸ್ವತಂತ್ರ ಶಿಕ್ಷಕರಿಗೂ ನೀಡಿದ ಹೋಲಿಕೆ ಸರಿಯಲ್ಲ. ಡಾಕ್ಟರನಿಗೆ ತಾನು ಒಂದಿಲ್ಲೊಂದು ದಿನ 'ಭಾರಿ ಕುಳ' ಆದೇನೆಂಬ ಭರವಸೆಯಿರುತ್ತದಾದರೆ ಶಿಕ್ಷಣ ವೃತ್ತಿಯಲ್ಲಿ ಅಂಥ ಯಾವ ಆಕರ್ಷಣೆಯೂ ಇಲ್ಲ. ವಿದ್ಯಾರ್ಥಿಗಳಿಂದ ಫೀ ತೆಗೆದುಕೊಂಡರಾಯಿತು, ಎನ್ನುತ್ತಾರೆ ಲೇಖಕರು. 'ಶುಲ್ಕದಿಂದ ಶಿಕ್ಷಣ' ಬಡ ಭಾರತೀಯನಿಗಿನ್ನೂ ಕೈಗೆಟುಕದ ಹಣ್ಣು.

ಮಾಧ್ಯಮಿಕ ಶಿಕ್ಷಣ ಬೇರೆ ಬೇರೆ ವಿಷಯಗಳನ್ನು ಕಲಿಸಲು ೪-೫ ಜನ ಶಿಕ್ಷಕರನ್ನಾದರೂ ಬೇಡುತ್ತದೆ. ಹೀಗಿರುವಾಗ ಒಬ್ಬನೇ ಶಿಕ್ಷಕ ಇವೆಲ್ಲವನ್ನೂ ಕಲಿಸಲು ಸಮರ್ಥನಾದಾನೆ ? ಖಾಸಗಿ ಶಿಕ್ಷಣದಿಂದ ಶಿಕ್ಷಣದಲ್ಲಿಯ ಏಕರೂಪತೆ ಇಲ್ಲವಾದೀತು. ಅದರಿಂದ ಯಾವುದಾದರೊಂದು ಹಂತಾದಲ್ಲಾಗುವ ಪರೀಕ್ಷೆಯಲ್ಲಿ ವಿದ್ಯಾರ್ಥಿಗೆ ತೊಂದರೆಯುಂಟಾಗುವುದು ಖಂಡಿತ. ಅಲ್ಲದೆ ಈ ಪದ್ಧತಿಯಲ್ಲಿಯ ಸ್ವಾತಂತ್ರ್ಯ ಸ್ವಚ್ಛಂದಕ್ಕೆಡೆಗೊಟ್ಟರೆ ?

ಸಮಾಜವಾದೀ ಸಿದ್ಧಾಂತಕ್ಕೆ ಕಟ್ಟುಬಿದ್ದಿರುವ ಸರಕಾರ, ನೈತಿಕವಾಗಿ ಅಸಮರ್ಥ ಶಿಕ್ಷಕವೃಂದ, ಸರಕಾರದ ಪ್ರತಿಯೊಂದು ಯೋಜನೆಯನ್ನೂ ಪವಿತ್ರವೆಂದೇ ಬಗೆಯುತ್ತ ತಮ್ಮ ವಿಚಾರ ಸ್ವಾತಂತ್ರ್ಯಕ್ಕೆರವಾಗಿರುವ ಜನ ಇರುವಾಗ ಈ ಉದಾತ್ತ ಶಿಕ್ಷಣ ಯೋಜನೆಯೂ 'ರಾಮರಾಜ್ಯ'ದಂತೆ ಒಂದು Utopia ಆಗಿ ಉಳಿದೀತು.

ರಾಣೇಬೆನ್ನೂರು **—ಕೆ. ಎಂ. ಕುಲ್ಕರ್ಣಿ**

ಶ್ರೀ ನರಸಿಂಹ ಗುಡಿಯವರು ಹೇಳುವಂತೆ ಶಿಕ್ಷಣವನ್ನು ಶಿಕ್ಷಕನಿಗೇ ಬಿಡಬೇಕು. ಇಂದಿನ ಶಿಕ್ಷಣದಲ್ಲಿ ವಿವೇಕ, ಜಾನ, ಶೀಲಗಳು ಲೋಪವಾಗಿರುವುದಕ್ಕೆ ಕಾರಣ ಸರಕಾರದ ಅಂದಾಜಿನ ಅಭ್ಯಾಸ ಪತ್ರಿಕೆ, ವಿದ್ಯಾರ್ಥಿಗಳ ವಯಸ್ಸು, ಶಿಕ್ಷಣದ ಅವಧಿ ಮತ್ತು ಅಸ್ವತಂತ್ರ ಶಿಕ್ಷಕರು ಕಾರಣ. ಆದರೆ ಇದೆಲ್ಲಕ್ಕಿಂತ ಹೆಚ್ಚಾಗಿ ಇಂದಿನ ಪದ್ಧತಿಯಲ್ಲಿ ಶಿಕ್ಷಣ ಉದ್ದೇಶಹೀನವಾಗಿದೆ. ಸಂಬಂಧಪಟ್ಟವರೆಲ್ಲರೂ ಬಯಸುವುದು ಪಾಸುಗಳನ್ನು ಮಾತ್ರವೇ ಹೊರತು ವಿವೇಕ, ಜ್ಞಾನ, ಶೀಲಗಳನ್ನಲ್ಲ.

ಯೋಗ್ಯ ಶಿಕ್ಷಕರ ಕೊರತೆಯಿದೆಯೆಂದು ನನಗನಿಸುವುದಿಲ್ಲ. ಇಂದು ಒಳ್ಳೆಯ ಶಿಕ್ಷಕರಾಗಬಲ್ಲವರನೇಕರು ಶಿಕ್ಷಣ ಇಲಾಖೆಯಲ್ಲಿ ಆಡಳಿತಾಧಿ

ಕಾರಿಗಳಾಗುತ್ತಿರುವುದರಿಂದ ಈ ಇಲಾಖೆ ಅನಾವಶ್ಯಕವಾಗಿ ಹಿಗ್ಗುತ್ತಿದೆ. ಈ ಇಲಾಖೆಯ ಸಿಬ್ಬಂದಿಯನ್ನು ಕಡಿಮೆಗೊಳಿಸಿದರೆ ಹೆಚ್ಚಿನ ಯಾವ ಆರ್ಥಿಕ ಭಾರವೂ ಇಲ್ಲದೆ ಅರ್ಹ ಶಿಕ್ಷಕರು ದೊರಕುತ್ತಾರೆ.

ಹೊಟ್ಟೆಯ ಪಾಡಿಗಾಗಿ ಶಿಕ್ಷಕ ವೃತ್ತಿಗಿಳಿಯುವವರನ್ನು ತಡೆಗಟ್ಟಿ ಶಿಕ್ಷಣದ ಬಗ್ಗೆ ನೈಜ ಪ್ರೇಮವಿರುವವರನ್ನೇ ಶಿಕ್ಷಕರನ್ನಾಗಿಸಿದರೆ ಸಮಸ್ಯೆ ಬಹಳ ಮಟ್ಟಿಗೆ ಪರಿಹಾರವಾದೀತು. ಇದೆಲ್ಲ ನಿಜವಾದರೂ ಇಂದಿನ ವಿಜ್ಞಾನಯುಗದಲ್ಲಿ ಸಾಧ್ಯವೇ ಎಂಬುದು ಸಂದೇಹಾಸ್ಪದ.

ಕಾಲವಾಡ —ರಾಮಯ್ಯ ಪಟಗಾರ

ನಮ್ಮ ಪ್ರಾಚ್ಯರು ರೂಢಿಯಲ್ಲಿರಿಸಿಕೊಂಡಿದ್ದ ಗುರುಕುಲ ಪದ್ಧತಿಯ ಶಿಕ್ಷಣವನ್ನು ಹೋಲುವ "ಶಿಕ್ಷಣವನ್ನು ಶಿಕ್ಷಕನಿಗೇ ಬಿಡಿ,' ಯೋಜನೆ ಸ್ವಾಗತಾರ್ಹ. ಪರೀಕ್ಷೆಗಳನ್ನೇ ಇದರಲ್ಲಿ ಹೊರತು ಪಡಿಸಿದೆಯಾಗಿ ಇದರಿಂದ ಶಿಕ್ಷಣಕ್ಷೇತ್ರದಲ್ಲಿ ಉತ್ಕ್ರಾಂತಿಯಾಗಲಿದೆ. ಯೋಜನೆಯಲ್ಲಿ ಪ್ರಸ್ತಾಪಮಾಡಲಾಗಿರುವ ಪ್ರತಿಯೊಂದು ಅಂಶವೂ ಅನುಷ್ಠಾನ ಯೋಗ್ಯ. ಈ ಬಗ್ಗೆ ಒಂದೆರಡು ಸಲಹೆಗಳು:

ಈ ಯೋಜನೆ ಯಶಸ್ವಿಯಾಗಬೇಕಾದರೆ ಮಕ್ಕಳ ಪಾಲಕರ ಸಹಕಾರ ಅತ್ಯಗತ್ಯ. ಕೊನೆಯ ಪಕ್ಷ ಮಕ್ಕಳ ಮುಂದಾದರೂ ಅವರ ಆಚಾರ–ವಿಚಾರಗಳಲ್ಲಿ ಸಾಮ್ಯ ಬೇಕು. ಯೋಜನೆಯ ಕಾರ್ಯವ್ಯಾಪ್ತಿಯಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳು ಮಾತ್ರವಲ್ಲ, ಶಿಶುವಿಹಾರಗಳೂ ಒಳಪಡಬೇಕು.

ನಮ್ಮ ಈಗಿನ ಶಿಕ್ಷಣ ಪದ್ಧತಿಯಲ್ಲಿ 'ನಮ್ಮತನ' ಮಾಯವಾಗಿದೆ. ಇದಕ್ಕೆ ಹೊರತಾಗಿ ಪ್ರಸ್ತುತ ಯೋಜನೆ 'ನಮ್ಮತನ'ಕ್ಕೆ ಸೀಮಿತವಾಗಿದೆ. ಜಾತ್ಯತೀತತೆಯ ಹೆಸರಿನಲ್ಲಿ ನಾವು ಈಗ ನಮ್ಮ ಸಂಸ್ಕೃತಿಯನ್ನೇ ಮರೆಯುತ್ತಿದ್ದೇವೆ. ಈ ಹೊಸ ಯೋಜನೆಯಲ್ಲಿ ಅದಕ್ಕೆ ಯೋಗ್ಯ ಸ್ಥಾನವಿರಬೇಕು.

ಯೋಜನೆ ಪ್ರೌಢಶಾಲೆಗಳ ಮಟ್ಟದಲ್ಲಿಯೂ ಯಶಸ್ಸನ್ನು ಕಂಡರೆ, ಅದನ್ನು ಕಾಲೇಜುಗಳ ಮಟ್ಟಕ್ಕೂ ವಿಸ್ತರಿಸಬಹುದು. ಈ ಯೋಜನೆಯಲ್ಲಿ ಅಧ್ಯಾಪನ ಮಾತೃಭಾಷೆಯಲ್ಲಿ ಜರುಗಲಿ.

ಅಂತಿಮವಾಗಿ ಒಂದು ಮಾತು. ಒಂದು 'ಕಕ್ಷ್ಯೆ'ದಲ್ಲಿರುವ ಶಿಷ್ಯರು ಒಂದೇ ಇಯತ್ತೆಯವರಾಗಲೀ, ಒಂದೇ ವಯಸ್ಸಿನವರಾಗಲೀ ಇರದೆ ಎರಡು ಅಥವಾ ಮೂರು ಮಟ್ಟದವರಿರಬೇಕು–ಎನ್ನುತ್ತಾರೆ ಲೇಖಕರು. ಈಗಿನ ತರಗತಿಗಳಲ್ಲಿ ಕಂಡುಬರುತ್ತಿರುವುದು 'ಅಸಮ' ಶಿಷ್ಯ ಮೇಳವೇ ಆದ್ದರಿಂದ ಈ ಸಲಹೆಯನ್ನು ಕಾರ್ಯರೂಪಕ್ಕಿಳಿಸುವುದರಿಂದ ಪ್ರಯೋಜನವೇನೂ ನನಗೆ ತೋರುತ್ತಿಲ್ಲ. Birds of a feather flock together. ತನ್ನಿಮಿತ್ತ ಈ 'ಕಕ್ಷ್ಯೆ'ಗಳಲ್ಲಿ ಸಮವಯಸ್ಕ ಶಿಷ್ಯರ ವೃಂದಗಳು ಯೋಗ್ಯ.

ಕೂಡ್ಲಿಗಿ —ಯಮ್. ಅನಂತೇಶರಾವ್

ಫೆಬ್ರುವರಿ 'ಕಸ್ತೂರಿ'ಯಲ್ಲಿ ಪ್ರಕಟವಾಗಿರುವ ನನ್ನ ಲೇಖನ 'ನಮ್ಮದೆಂಬುದು' ಬಗ್ಗೆ ನಿಮ್ಮ ಓದುಗರ ಸಲುವಾಗಿ ಕೆಲ ವಿವರಣೆಗಳು ಅಗತ್ಯವೆನಿಸುತ್ತದೆ. ಲೇಖನದೊಂದಿಗಿರುವ ಅಂಕಣದಲ್ಲಿ ಪ್ರಕಟವಾಗಿರುವಂತೆ ಜಿಡ್ಡು ಕೃಷ್ಣಮೂರ್ತಿಯವರ 'ಟೋಟಲ್ ಪ್ರೋಸೆಸ್' ಎಂಬ ಗ್ರಂಥದ ಸಾರವಲ್ಲ, ಈ ಲೇಖನ. ಆ ಹೆಸರಿನ ಗ್ರಂಥವನ್ನೇ ಕೃಷ್ಣಮೂರ್ತಿ ಬರೆದಿಲ್ಲ. ಟೋಟಲ್ ಪ್ರೋಸೆಸ್ ಅಥವ ಸಮಗ್ರ ಕ್ರಿಯೆಯೆಂಬುದು ವ್ಯಕ್ತಿ ಸೃಷ್ಟಿಯೊಂದಿಗೆ ಸರ್ವವಿಧದಲ್ಲಿ ತಾದಾತ್ಮ್ಯವನ್ನು ಅನುಭವಿಸುವ ಒಂದು ಅಖಂಡ ಅನುಭವ. ನನ್ನ ಲೇಖನ ಕೃಷ್ಣಮೂರ್ತಿಯವರ ಕೆಲವು ಪುಸ್ತಕಗಳ ಓದಿನ ಮತ್ತು ನನ್ನ ಸ್ವಂತ ಅನ್ವೇಷಣೆಯ ಫಲ.

ಬೆಂಗಳೂರು ಜಯಸುದರ್ಶನ

'ಕಸ್ತೂರಿ' ಜನವರಿ, ಅಕ್ಟೋಬರ್‌ಗಳಲ್ಲಿ 'ಗಾಂಧೀಗ್ರಹಣ'ದಿಂದಲೂ ಮೇ, ನವಂಬರ್‌ಗಳಲ್ಲಿ 'ನೆಹರು ಗ್ರಹಣ'ದಿಂದಲೂ ಬಿಡುಗಡೆಯಾಗುವುದು ಯಾವಾಗ ?

ಹೈದರಾಬಾದ್ ಆರ್. ಆರ್. ಕುಲಕರ್ಣಿ

[ಕೆಲವು ಪತ್ರಿಕೆಗಳಿಗೆ ವರ್ಷವಿಡೀ 'ಗ್ರಹಣ'ಗಳಿರುತ್ತವೆ. ಹೊಸ ರಾಹುಕೇತುಗಳು ದೊರೆತಾಗ 'ಕಸ್ತೂರಿ' ಈ ಗ್ರಹಣಗಳಿಂದ ಮುಕ್ತವಾದೀತು. -ಸಂ.]

ಸಂಚಿಕೆ : ೭ ವರ್ಷ : ೧೭

# ಕಸ್ತೂರಿ

ಮಾರ್ಚ್ ೧೯೭೩

## ವಿಜಯದಾಹ

ಪೈರಸ್ಸನ ಸೈನ್ಯ ಸನ್ನದ್ಧವಾಗಿ ನಿಂತಿತ್ತು. ಯುದ್ಧದಲ್ಲಿ ಜಯ ಕಟ್ಟಿಟ್ಟದ್ದೆಂಬ ಭಾವ ಆತನ ಮುಖದಲ್ಲಿ ವ್ಯಕ್ತವಾಗುತ್ತಿತ್ತು. ಇನ್ನೇನು, ಸೈನ್ಯ ಇಟಲಿಯತ್ತ ವಿಜಯಯಾತ್ರೆ ಪ್ರಾರಂಭಿಸುತ್ತದೆ ಎಂದಾಗ ಮಿತ್ರ ಸೈನೆಸ್ ಪೈರಸ್ಸನನ್ನು, "ಸಮ್ರಾಟ್, ಎತ್ತ ಕಡೆ ಪ್ರಯಾಣ ?" ಎಂದು ಕೇಳಿಯೇಬಿಟ್ಟ.

"ರೋಮ್ ಪಟ್ಟಣದ ಕಡೆಗೆ. ಅಲ್ಲಿ ತುಂಬಾ ಶೂರ ಜನ ಇದ್ದಾರೆ; ಅದೊಂದು ಯೋಧರ ಪಟ್ಟಣ ಎಂದು ಕೇಳಿದ್ದೇನೆ. ಅವರೆಲ್ಲರನ್ನೂ ಸದೆಬಡಿದು ಅಲ್ಲಿ ನನ್ನ ಪ್ರಭುತ್ವವನ್ನು ಸ್ಥಾಪಿಸಿಯೇ ಬಿಡುತ್ತೇನೆ," ಎಂದು ಪೈರಸ್ ವಿಜಯೋತ್ಸಾಹದಿಂದ ಖಡ್ಗ ಝಳಪಿಸುತ್ತಾ

ಹೇಳಿದ.

"ಅನಂತರ ಏನು ಮಾಡುವಿ?"

"ಸಮಸ್ತ ಇಟಲಿಯನ್ನು ಪಾದಾಕ್ರಾಂತ ಮಾಡುತ್ತೇನೆ."

"ಅದು ಸರಿ. ಇಟಲಿಯನ್ನು ಗೆದ್ದ ನಂತರ ಏನು ಮಾಡಬೇಕೆಂದಿದ್ದೀ?"

"ಮೆಸಿಡೋಸಿಯ, ಆಫ್ರಿಕ, ಗ್ರೀಸ್ ಹಾಗೂ ಸಿರಿಯಗಳನ್ನೂ ಗೆದ್ದುಬಿಡುತ್ತೇನೆ."

"ಇದರಲ್ಲೇನೂ ಆಶ್ಚರ್ಯವಿಲ್ಲ. ಇಂಥಾ ಬಲಶಾಲಿಯಾದ ಸೈನ್ಯವನ್ನು ಹೊಂದಿದ ನೀನು ಈ ದೇಶಗಳನ್ನೆಲ್ಲ ಗೆದೆಯುವುದರಲ್ಲೇನೂ ಸಂಶಯವಿಲ್ಲ. ನೀನು ಮನಸ್ಸು ಮಾಡಿದರೆ ಸಮಸ್ತ ಪೃಥ್ವಿಯನ್ನೇ ಜಯಿಸಿಬಿಡಬಹುದು ಬಿಡು. ಆದರೆ ನೀನು ಇಷ್ಟೆಲ್ಲಾ ಜನರ ಜೀವಗಳನ್ನು ಪಣಕ್ಕೊಡ್ಡಿ ದೇಶಗಳನ್ನು ಗೆದೆಯುವುದೇಕೆ ಎಂಬುದನ್ನು ನನಗೆ ಹೇಳುವಿಯಾ?"

"ಓಹೋ! ಅದಕ್ಕೇನು? ಎಲ್ಲಾ ದೇಶಗಳ ಜನರು ಶಾಂತಿ–ಸಮಾಧಾನಗಳಿಂದ ಇರುವಂತೆ ನೋಡಿಕೊಳ್ಳಲೆಂದೇ ನಾನು ಭೂಖಂಡಗಳನ್ನೆಲ್ಲ ಗೆದೆಯಲು ಯೋಜನೆ ಹಾಕಿಕೊಂಡಿರುವುದು."

ಸೈನಸ್ ಮುಗುಳ್ನಕ್ಕು ಪೈರಸ್ಸನಿಗೆ ಹೇಳಿದ: "ಮಿತ್ರಾ, ಎಲ್ಲಾ ದೇಶಗಳಲ್ಲಿಯೂ ಜನರು ಈಗಾಗಲೇ ಶಾಂತಿ–ಸಮಾಧಾನಗಳಿಂದ ಜೀವನ ನಡೆಸುತ್ತಿದ್ದಾರಲ್ಲಾ. ಅಂಥಾದ್ದರಲ್ಲಿ ಇಷ್ಟೆಲ್ಲಾ ಜನರ ಜೀವಗಳನ್ನು ಆಪತ್ತಿಗೆ ಒಡ್ಡಿ, ರಕ್ತಪಾತ ಮಾಡಿ ಅನಂತರ ಜನರು ಸುಖದಿಂದ ಇರುವಂತೆ ಪ್ರಯತ್ನಿಸುವುದು ವ್ಯರ್ಥವಲ್ಲವೇ?"

ಪೈರಸ್ಸನ ಜ್ಞಾನಚಕ್ಷು ತೆರೆಯಿತು. ✡

## ಆತ್ಮತೃಪ್ತಿ

ಈಸ್ಟ್ ಇಂಡಿಯಾ ಕಂಪನಿ ಅಧಿಕಾರ ನಡೆಸುತ್ತಿದ್ದ ಕಾಲವದು. 'ಚಾರು ಚಿಂತಾಮಣಿ'ಯನ್ನು ರಚಿಸಿದ ರಾಮನಾಥ ತರ್ಕಸಿದ್ಧಾಂತನು ನವದ್ವೀಪ ನಗರದ ಹೊರವಲಯದಲ್ಲಿ ಗುಡಿಸಲನ್ನು ಕಟ್ಟಿಕೊಂಡು ಅತ್ಯಂತ ಬಡತನದಿಂದ ಜೀವಿಸುತ್ತಿದ್ದ. ಲಕ್ಷ್ಮಿಯ ಕೃಪಾಕಟಾಕ್ಷವಿಲ್ಲದಿದ್ದರೂ ಸರಸ್ವತಿಯ ಕೃಪಾಕಟಾಕ್ಷ ಅವನ ಮೇಲೆ ಇದ್ದೇ ಇತ್ತು. ಹೀಗಾಗಿ ಅವನ ಸಾಹಿತ್ಯಸೇವೆ ಅವಿತರವಾಗಿ ನಡೆದಿತ್ತು. ರಾಮನಾಥನ ಪತ್ನಿ ಹುಣಸೇಗಿಡದ ಚಿಗುರುಗಳನ್ನು ಕಿತ್ತಿ ತಂದು ಅದರಿಂದಲೆ ಅಡಿಗೆ ಮಾಡಿ ಬಡಿಸಿದರೂ ಆತ ಸಂತುಷ್ಟನಾಗಿರುತ್ತಿದ್ದ.

ಒಂದು ದಿನ ಕೃಷ್ಣನಗರದ ಅರಸ ಆನೆಯನ್ನೇರಿ ರಾಮನಾಥನ ಗುಡಿಸಲಿನೆದುರಿಗೆ ಬಂದಾಗ ಅವನನ್ನು ನೋಡಿ, ಪಂಡಿತರೆ, "ಏನಾದರೂ ಬೇಕೆ? ಏನು ಬೇಕಿದ್ದರೂ ಅನುಮಾನವಿಲ್ಲದೆ ಹೇಳಿ, ನಾನದನ್ನು ಕೊಡುತ್ತೇನೆ," ಎಂದು ಹೇಳಿದ. ಇದನ್ನು ಕೇಳಿ, ರಾಮನಾಥ ಮುಗುಳ್ನಕ್ಕು ತನ್ನ ಹೆಂಡತಿಯ ಕಡೆ ಬೊಟ್ಟು ಮಾಡಿ ತೋರಿಸಿದ. ಅರಸ ಅವಳಿಗೂ ಅದೇ ಪ್ರಶ್ನೆ ಕೇಳಿದಾಗ ಆಕೆ ಉತ್ತರಿಸಿದಳು: "ನನ್ನ ವಸ್ತ್ರ ಗಟ್ಟಿಯಾಗಿದೆ. ನೀರು ತುಂಬುವ ಮಡಿಕೆಯೂ ಗಟ್ಟಿಯಾಗಿದೆ, ಒಡೆದಿಲ್ಲ. ಮಂಚವೂ ಸುಸ್ಥಿತಿಯಲ್ಲಿದೆ. ಹೀಗಾಗಿ ನಮಗೆ ಏನೂ ಬೇಕಿಲ್ಲ. ನಿಜ ಹೇಳಬೇಕೆಂದರೆ, ನನ್ನ ಕೊರಳಲ್ಲಿ ಮಂಗಳಸೂತ್ರವಿರುವವರೆಗೆ ಹಾಗೂ ನನ್ನ ಪತಿಯ ಕೈಯಲ್ಲಿ ಲೆಕ್ಕಣಿಕೆಯಿರುವವರೆಗೆ ನಮಗೆ ಯಾವ ವಸ್ತುವಿನ ಅಭಾವವೂ ಇದ್ದಂತೆನಿಸುವುದಿಲ್ಲ."

ಆತ್ಮತೃಪ್ತಿಯ ಮುಂದೆ ತನ್ನ ಸಂಪತ್ತು ಎಷ್ಟು ಕ್ಷುದ್ರವಾಗಿ ಕಾಣಿಸುತ್ತದೆಂಬುದು ರಾಜಾ ಶಿವಚಂದ್ರನ ಗಮನಕ್ಕೆ ಬಂತು. ಆತ ಆನೆಯಿಂದಿಳಿದವನೆ ಆ ಸಾಧ್ವೀಮಣಿಗೆ ನಮೋ ಎಂದ.

ಕಪ್ಪು ಖಂಡದವರ ಈ ಕಲೆ
ಚೈತನ್ಯದ ಚಿಲುಮೆಯಾಗಿದೆ

# ಆಫ್ರಿಕದ ಗುಡ್ಡಗಾಡು ಕಲೆ

ಆಫ್ರಿಕದ ಗುಡ್ಡಗಾಡು ಕಲೆಯೆಂದೊಡನೆಯೇ ಕಣ್ಣೆದುರು ಮೊದಲು ಬರುವುದು ಅಲ್ಲಿಯ ಪುರಾತನರ ಕಾಷ್ಠಶಿಲ್ಪ ಮತ್ತು ಲೋಹಶಿಲ್ಪ, ಅವುಗಳಲ್ಲಿ ವ್ಯಕ್ತವಾಗುವ ಒಂದು ಬಗೆಯ 'ಕಾಡು' ಸೌಂದರ್ಯ ಪ್ರಜ್ಞೆ. ಆದರೆ ಈಗಿಲ್ಲಿ ಆಯ್ದುಕೊಂಡಿರುವುದು ಹೆಚ್ಚು ಕಡಿಮೆ ಅರ್ವಾಚೀನವೆನ್ನಬಹುದಾದ ಲೋಹಶಿಲ್ಪ–ಆಫ್ರಿಕದ ಒಂದು ದೇಶಕ್ಕೆ ಮಾತ್ರ ಸಂಬಂಧಪಟ್ಟುದು. ಈ ದೇಶ ದಾಹೋಮೆ, ಬಹುಕಾಲ ಫ್ರೆಂಚ್ ಪಶ್ಚಿಮ ಆಫ್ರಿಕದ ಭಾಗವಾಗಿದ್ದು, ಈಗ ಸ್ವತಂತ್ರವಾಗಿರುವ ದೇಶ. ಈ ದೇಶದ ಮೂರ್ತಿಶಿಲ್ಪಿಗಳು ಕಳೆದ ಶತಮಾನದಲ್ಲಿ ನಿರ್ಮಿಸಿದ ಕೆಲವು ಕಲಾಕೃತಿಗಳನ್ನು ಮಾತ್ರ ಇಲ್ಲಿ ಆಯ್ದುಕೊಳ್ಳಲಾಗಿದೆ.

ನಾವು 'ಕಾಡು', 'ಅನಾಗರಿಕ' ಎಂದು ತುಸು ತಾತ್ಸಾರದಿಂದ ಕರೆಯುವ ಜನಗಳಲ್ಲಿಯ ಕಲಾಪ್ರಜ್ಞೆಗೂ ನಮ್ಮ 'ನಾಗರಿಕ' ಕಲಾಪ್ರಜ್ಞೆಗೂ ದೃಷ್ಟಿಕೋನದಲ್ಲೇ ಮೂಲಭೂತ ವ್ಯತ್ಯಾಸವಿರಬಹುದಾಗಿದೆ. ಜಗತ್ತಿನ ಯಾವುದೇ ಭಾಗದಲ್ಲಿಯ ಕಾಡು ಜನರಂತೆಯೇ ಆಫ್ರಿಕದ ಜನ ಸಹ ಸಾವಿರಾರು ವರ್ಷ ಹಳೆಯವಾದ ರೂಢಿ–ಸಂಪ್ರದಾಯಗಳನ್ನೂ ಶ್ರದ್ಧೆ-ನಂಬಿಕೆಗಳನ್ನೂ ಉಳಿಸಿಕೊಂಡು ಬಂದಿದ್ದಾರೆ. ಅಂತೆಯೇ ಅವರ ವೈಯುಕ್ತಿಕ ಹಾಗು ಸಾಮಾಜಿಕ ಜೀವನದಲ್ಲಿ ಧಾರ್ಮಿಕ ವಿಧಿ ವಿಧಾನಗಳಿಗೆ ತುಂಬ ಮಹತ್ವದ ಸ್ಥಾನವಿದೆ. ಆಫ್ರಿಕನ್ನರ ಕಲೆ ಮುಖ್ಯತಃ ಈ ವಿಧಿ ವಿಧಾನಗಳ, ಆವಶ್ಯಕತೆಗಳನ್ನು ಪೂರಯಿಸಿಕೊಳ್ಳುವುದಕ್ಕಾಗಿಯೇ ಇರುತ್ತದೆ. ಸೌಂದರ್ಯಕ್ಕೆ ನಂತರದ ಸ್ಥಾನ. ಈ ದೃಷ್ಟಿಯಿಂದ ಇಲ್ಲಿ ಆಯ್ದುಕೊಳ್ಳಲಾದ ೧೯ನೆಯ ಶತಮಾನದ ಈ ಮಾದರಿಗಳು ಭಿನ್ನವಾಗಿವೆ. ಧಾರ್ಮಿಕ ವಿಧಿಗಳಿಗೂ ಇವಕ್ಕೂ ಯಾವುದೇ ನೇರ ಸಂಬಂಧವಂತೂ ಕಂಡುಬರುತ್ತಿಲ್ಲ. ಈ ಪ್ರತಿಮೆಗಳನ್ನು ನಿರ್ಮಿಸಿದ್ದು ಒಬ್ಬ ಅರಸನ ಸಂತೋಷಕ್ಕಾಗಿ. ಆಬೋಮೆ ಎಂಬಲ್ಲಿದ್ದ ಅವನ ಅರಮನೆಯನ್ನು ಸಿಂಗರಿಸಿದ್ದ ವಸ್ತುಗಳಿವು. ಅಂತೆಯೆ, ಇವುಗಳಲ್ಲಿ ಕಾಡು ಆಫ್ರಿಕನ್ನರಿಗೆ ಸಹಜವಲ್ಲದ್ದೆಂದು ನಾವು ಬಗೆಯುವ ಹೊಸತನವನ್ನು ಕಾಣಬಹುದಾಗಿದೆ. ಗ್ರೀಕ್ ಮತ್ತು ರೋಮನ್ ಶಿಲ್ಪಿಗಳು ಮನುಷ್ಯನ ಪ್ರತಿಬಿಂಬವನ್ನು ತದ್ವತ್ ಚಿತ್ರಿಸು

# ಆಫ್ರಿಕದ ಗುಡ್ಡಗಾಡು ಕಲೆ












ವಲ್ಲಿಯೆ ಸಾರ್ಥಕ್ಯವನ್ನು ಕಂಡರು. ಆದರೆ ಈ ಆಫ್ರಿಕನ್ ಕಲಾವಿದರು ತಮ್ಮ ಕಲಾಮಾಧ್ಯಮವನ್ನು ಸಾಂಕೇತಿಕ ಅರ್ಥದಲ್ಲಿ ಬದಲಿಸಿಕೊಂಡರು. ಅವರ ಭಾವನೆಗಳ ವ್ಯಕ್ತರೂಪವೇ ಕಲೆ. ನಿಸರ್ಗವೇ ಈ ಕಾಡು ಜನಗಳಿಗೆ ಮನೆಯಾಗಿರುವುದರಿಂದ ನೈಸರ್ಗಿಕವಾದ ಯಾವುದೇ ಸಜೀವ, ನಿರ್ಜೀವ ವಸ್ತುವಿನಲ್ಲೂ ಅವರು ಒಂದೊಂದು ಅರ್ಥವನ್ನು ಕಾಣುತ್ತಾರೆ. ಕೆಲವು ಅವರ ಭಯಕ್ಕೆ ಕಾರಣವಾದರೆ ಮತ್ತೆ ಕೆಲವು ಆದರಕ್ಕೆ, ಪೂಜೆಗೆ ಅರ್ಹವಾಗಿವೆ. ಕೆಲವು ಸಾವನ್ನು ಸಂಕೇತಿಸಿದರೆ ಮತ್ತೆ ಹಲವು ಜೀವನ-ಚೈತನ್ಯಕ್ಕೆ ಸಂಕೇತವಾಗಿವೆ.

ಚಿತ್ರ ೧ ರಲ್ಲಿ ಹಿತ್ತಾಳೆಯಲ್ಲಿ ಕೆತ್ತಲಾದ ಮೊಸಳೆಯ ಜಾತಿಯ ಒಂದು ಚಿಕ್ಕ ಪ್ರಾಣಿಯನ್ನು ಕಾಣಬಹುದು. ಇದನ್ನು ನಾವು ನೆಗಳು ಎಂದು ಕರೆಯೋಣ. ಇದು ಈ ಜನರಲ್ಲಿ ತುಂಬ ಗೌರವಕ್ಕೆ ಪಾತ್ರವಾಗಿದೆ. ಅಂತೆಯೆ, ಈ ಮೂರ್ತಿಯು ತನ್ನ ಬೆನ್ನ ಮೇಲೆ ದೀಪವೊಂದನ್ನು ಹೊತ್ತಿದೆ. ಇದುವೇ ಆಶಾಜ್ಯೋತಿ. ಚಿತ್ರ ೨ ರಲ್ಲಿರುವುದು ಭತ್ತ ಕುಟ್ಟುವ ಗೃಹಿಣಿಯ ಪ್ರತಿಮೆ. ಇದನ್ನು ಅಲ್ಯುಮಿನಿಯಂನಲ್ಲಿ ತಯಾರಿಸಲಾಗಿದೆ. ಈ ಜನಗಳಲ್ಲಿ ಇಂಥ ಒರಳಿನಲ್ಲಿ ಒನಕೆಯಿಂದ ಭತ್ತ ಕುಟ್ಟುವುದು ಸಾಮಾನ್ಯ ನೋಟ. ಚಿತ್ರ ೩ ರಲ್ಲಿರುವುದು ಅಲ್ಯುಮಿನಿಯಮ್ಮಿನ ಆಡು. ಈ ಜನಾಂಗ ಆಡು ಸಿರಿವಂತಿಕೆಯ ಸಂಕೇತವೆಂದು ಭಾವಿಸುತ್ತದೆ. ಆದ್ದರಿಂದಲೇ ಅದು ಪವಿತ್ರವೂ ಅಹುದು. ಚಿತ್ರ ೪ರಲ್ಲಿದ್ದುದು ಕೂಡ ಅಲ್ಯುಮಿನಿಯಂ ವಿಗ್ರಹವೇ. ಇದು ದಾಹೋಮೆಯಲ್ಲಿ ಅತ್ಯಂತ ಜನಪ್ರಿಯವಾಗಿರುವ ಪುಂಜ. ಈ ಜಂಭದ ಕೋಳಿ ಅವರಿಗೆ ಶುಭದ ಹರಿಕಾರ. ಚಿತ್ರ ೫ ರಲ್ಲಿದ್ದುದು ಹಿತ್ತಾಳೆಯಲ್ಲಿ ಮಾಡಿದ ದಾಹೋಮಿಯನ್ ಬೇಟೆಗಾರ. ಕುದುರೆ ಏರಿದ ಅವನು ಕೋವಿ ಹಿಡಿದು ಗುರಿ ಹೊಡೆಯುತ್ತಿದ್ದಾನೆ. ೬ನೆಯ ಚಿತ್ರ ಇನ್ನೊಂದು ಹಿತ್ತಾಳೆಯ ಪ್ರತಿಮೆಯದು. ಸಮಾಜದ ಹಿರಿಯನಾದ ಇವನು ಅನುಭವದ ಹೊರೆಯಿಂದ ಬಾಗಿಬಿಟ್ಟಿದ್ದಾನೆ. ಚಿತ್ರ ೭ಮತ್ತು ೮ ರಲ್ಲಿರುವುದು ಯೋಧ ಮತ್ತು ಬೇಟೆಗಾರನ ಪ್ರತಿಮೆಗಳು. ಇವರಿಬ್ಬರೂ ಧನುರ್ಧಾರಿಗಳು. ಇವೆರಡೂ ಅಲ್ಯುಮಿನಿಯಂ ವಿಗ್ರಹಗಳು.

ಆಫ್ರಿಕದ ಗುಡ್ಡಗಾಡು ಜನರ ಮಟ್ಟಿಗೆ ಜೀವನವೆಂದರೆ ವಿಶಿಷ್ಟ ಹೇತುಗಳಿಗಾಗಿ ನಿರ್ದಿಷ್ಟ ಸಮಯಗಳಲ್ಲಿ ಮಾಡುವ ವಿವಿಧ ಕ್ರಿಯೆಗಳ ಒಂದು ಕಟ್ಟಲ್ಲ; ಅರ್ಥಾತ್ ಜೀವನವನ್ನವರು ಬಿಡಿ ಬಿಡಿಯಾಗಿ ನೋಡುವುದಿಲ್ಲ, ಇಡಿಯಾಗಿ ಕಾಣುತ್ತಾರೆ. ಅಂತೆಯೆ, ಜೀವನದಲ್ಲಿ ಸಂಭವಿಸುವ ಯಾವ ಘಟನೆಯೂ ಅವರ ಮಟ್ಟಿಗೆ ಕನಿಷ್ಠವಲ್ಲವೆಂಬ ಅಂಶವು ಈ ಕಲಾಕಾರರು ಆಯ್ದುಕೊಂಡ ವಸ್ತುಗಳಿಂದ ಸ್ಪಷ್ಟಪಡುತ್ತದೆ.

ಫ್ರೆಂಚರು ತಮ್ಮ ಆಳಿಕೆಯಲ್ಲಿ ಈ ಮೂರ್ತಿಶಿಲ್ಪವನ್ನು ಪ್ರೋತ್ಸಾಹಿಸಿ ಇದು ಪ್ರವಾಸೋದ್ಯಮದ ಪ್ರಮುಖ ಆಕರ್ಷಣೆಯಾಗುವಂತೆ ಮಾಡಿದರು. ಇದರಿಂದ ಇದಕ್ಕೊಂದು ಬಗೆಯ ವ್ಯಾಪಾರಿ ಮಹತ್ವ ಪ್ರಾಪ್ತವಾಗಿದೆಯಾದರೂ ಈ ಕಲೆ ಈಗಲೂ ಆಫ್ರಿಕನ್ ಸಂಸ್ಕೃತಿಯ ವಿಶ್ವಸನೀಯವಾದ ವ್ಯಕ್ತರೂಪವಾಗಿ ಉಳಿದಿದೆಯೆಂಬುದು ಮಾತ್ರ ನಿಸ್ಸಂಶಯ. ✡

ಇದು ನೋಡು, ಊಹೆ ಸತ್ಯದ ಸ್ಥಾನವನ್ನೆಂದೂ ತುಂಬಲಾರದು. —ಕುರಾನ್

**ಇಡೀ ಜಗತ್ತೇ ಇಲ್ಲಿನ ಕಲಾಪ್ರಪಂಚದ
ರಕ್ಷಣೆಗೆ ಸಹಕರಿಸುತ್ತಿದೆ**

# ವೆನಿಸ್ ನಗರ ಕುಸಿಯುತ್ತಿದೆ

ಎಂ. ಆರ್. ಎಸ್. ರಾವ್

ವೆನಿಸ್ ಸ್ವಾತಂತ್ರ್ಯದ ಹಿರಿಯ ಪುತ್ರಿ ಎಂದೊಮ್ಮೆ ವರ್ಡ್ಸ್‌ವರ್ತ್ ಹೇಳಿದ್ದ. ಹೌದು. ಅದು ಹುಟ್ಟಿಕೊಂಡಿದ್ದೇ ಅದಕ್ಕಾಗಿ. ಕ್ರಿ. ಶ. ೫ ನೇ ಶತಮಾನದಲ್ಲಿ ರೋಮನ್ ಸಾಮ್ರಾಜ್ಯ ಅನಾಗರಿಕ ಜನಾಂಗಗಳಿಂದ ಪತನಗೊಂಡು ರೋಮ್ ನಗರದ ಜನರ ಸ್ವಾತಂತ್ರ್ಯಕ್ಕೇ ಸಂಚಕಾರ ಬಂದಾಗ ಅವರು ಓಡಿಬಂದು ಈ ದ್ವೀಪವನ್ನಾಶ್ರಯಿಸಿದರು. ಇಟಲಿಯ ಆಡ್ರಿಯಾಟಿಕ್ ಸಮುದ್ರತೀರದಿಂದ ಎರಡೂವರೆ ಮೈಲು ದೂರವಿರುವ ಈ ದ್ವೀಪ ಸಸ್ಯಶಾಮಲವಾಗಿ ನಯನಮನೋಹರವಾಗಿದ್ದುದಕ್ಕಿಂತಲೂ ಅದು ಶತ್ರುಗಳಿಗೆ ಅಭೇದ್ಯವಾಗಿದ್ದುದೇ ರೋಮನ್ನರನ್ನು ಆಕರ್ಷಿಸಲು ಕಾರಣವಾಗಿರಬೇಕು. ಅವರ ನೌಕಾಬಲ, ವಾಣಿಜ್ಯಕೌಶಲಗಳು ಆ ನಗರವನ್ನು ಅನೇಕ ಶತಮಾನಗಳ ವರೆಗೆ ವಣಿಕ್‌ಸಾಮ್ರಾಜ್ಯದ ಸಮ್ರಾಟನನ್ನಾಗಿಸಿದವು. ವಾಣಿಜ್ಯದೊಂದಿಗೆ ಕಲಾಭಿರುಚಿಯೂ ಬೆಳೆದುಕೊಂಡುಬಂದು ಒಂದು ಸಾವಿರ ವರ್ಷದ ಅವರ ವೈಭವೋನ್ನತಿಕಾಲದಲ್ಲಿ ಅದನ್ನು ಜಗತ್ತಿನ ಪ್ರಮುಖ ಕಲಾಕೇಂದ್ರವಾಗಿರಿಸಿತು. ಸಾವಿರ ವರ್ಷಗಳ ವೈಭವ ಕಾಲದಲ್ಲಿ ವೆನಿಸ್ ನಗರದ ವಣಿಕ್ ಶ್ರೇಷ್ಠರು ಕೋಟಿಗಟ್ಟಳೆಯಲ್ಲಿ ಹಣ ಸುರಿದು ಅದ್ಭುತ ಕಲಾಪ್ರಪಂಚವನ್ನೇ ನಿರ್ಮಿಸಿದರು. ತತ್ಪರಿಣಾಮವಾಗಿಯೇ ನಾವಿಂದು ಸಾನ್ ಮಾರ್ಕೊದಲ್ಲಿ ವಜ್ರಖಚಿತವಾದ ಮೊಜೈಕ್ ಚಿತ್ರಗಳನ್ನು ಕಾಣುತ್ತೇವೆ. ಅಲ್ಲಿನ ಮ್ಯೂಜಿಯಂನಲ್ಲಿ ವೆನಿಸಿನ ಗತವೈಭವವನ್ನು ಪ್ರತಿಬಿಂಬಿಸುವ ಹದಿಮೂರು, ಹದಿನಾಲ್ಕನೆಯ ಶತಮಾನಗಳ ಚಿತ್ರಗಳಿವೆ. ಬೆಲ್ಲಿನಿ, ಟೈಟಿಯನ್, ಜಿಯೋವನಿ, ಕನಲೆಟೋ, ವಿರೋನಿಯಸ್ಸರಂತಹ ಮಹಾ ಪ್ರಭೃತಿಗಳು ಕಲಾತಪಸ್ಸಿನಲ್ಲಿ ತಮ್ಮ ಜೀವನದ ಮಹತ್ವದ ಭಾಗವನ್ನು ತೇಯ್ದದ್ದು ಈ ನಗರದಲ್ಲಿಯೆ. ವೆಂಟೆರೆಟೋ ಎಂಬಾತನ ೩೦×೯ ಅಡಿ ಗಾತ್ರದ 'ಸ್ವರ್ಗ'ವೆಂಬ ಚಿತ್ರವನ್ನು ಇಲ್ಲಿನ ಡೋಗೆ ಅರಮನೆಯಲ್ಲಿ ಕಾಣುತ್ತೇವೆ. ಅವರಲ್ಲಿ ಎಂಟುನೂರು ಮಾನವ ರೂಪಗಳನ್ನು ಒಳ್ಳೇ ಕಲಾತ್ಮಕವಾಗಿ ನೈಜವಾಗಿ ಚಿತ್ರಿಸಲಾಗಿದ್ದು ಶತಮಾನಗಳ ನಂತರವೂ ಅದು ಜಗತ್ತಿನ ಮೂಲೆ ಮೂಲೆಗಳಿಂದ ಕಲಾಪ್ರೇಮಿಗಳನ್ನು ಆಕರ್ಷಿಸುತ್ತಿದೆ.

ಅಂಥ ವೆನಿಸ್ ನಗರಕ್ಕೀಗ ಅಪಾಯ ಬಂದಿದೆ. ಅದನ್ನು ಕೊನೆಗಾಣಿಸದೇ ಹೋದರೆ ಅದರ ಹೆಸರು ಇತಿಹಾಸ–ಸಾಹಿತ್ಯಗಳಲ್ಲಿ ಮಾತ್ರ ಉಳಿಯಬಹುದು. ಅಂದರೆ ಅದಕ್ಕೆ ಶತ್ರುಗಳಿಂದ ಅಪಾಯ ಬಂದಿದೆಯೇ ? ಇಲ್ಲ. ನಿಸರ್ಗದಿಂದ ಅಲ್ಲಿನ ಕಲಾಪ್ರಪಂಚದ ಅಸ್ತಿತ್ವಕ್ಕೇ ಧಕ್ಕೆ ಬಂದಿದೆ. ವೆನಿಸಿನವರು ಕಠಿಣ ಪರಿಶ್ರಮದಿಂದ ನಿರ್ಮಿಸಿದ ಕಲಾಪೂರ್ಣ ಕಟ್ಟಡಗಳು ಕುಸಿಯುತ್ತಿವೆ. ಇದರೊಡನೆ ನಿಸರ್ಗದ ಇನ್ನೂ ಅನೇಕ ಶತ್ರುಗಳು ಸೇರಿ ಕಲಾಪ್ರಪಂಚವನ್ನು ಉಧ್ವಸ್ತಗೊಳಿಸುತ್ತಿ-

ಲಿವೆ.

ಒಂದಿಲ್ಲೊಂದು ದಿನ ತಾವು ನಿರ್ಮಿಸಿದ ಈ ಸುಂದರ ನಗರದ ಬಹುಭಾಗ ಭೂಮಿಯಲ್ಲಿ ಕುಸಿದುಹೋಗುವುದೆಂಬುದು ವೆನೀಸಿಯನ್ನರಿಗೆ ಅನೇಕ ಶತಮಾನಗಳ ಹಿಂದೆಯೇ ಗೊತ್ತಿತ್ತು. ಏಕೆಂದರೆ ಗಟ್ಟಿ ನೆಲವಿಲ್ಲದ ವೆನಿಸಿನಲ್ಲಿ ಕಟ್ಟಡಗಳನ್ನು ಕಟ್ಟಿದಾಗ ಅವು ಕುಸಿಯುತ್ತಿದ್ದವು. ಇದನ್ನು ತಪ್ಪಿಸುವುದಕ್ಕೋಸ್ಕರ ಅವರು ನೆಲವನ್ನು ತೋಡಿ ಮರದ ಕಂಬಿಗಳನ್ನು ನಿಲ್ಲಿಸಿ ಅದರ ಮೇಲೆ ದಿಮ್ಮಿಗಳನ್ನು ಒಟ್ಟಿದ ನಂತರ ಕಟ್ಟಡವನ್ನು ಪ್ರಾರಂಭಿಸುತ್ತಿದ್ದರು. ಹೀಗೆ ಮಾಡುವುದರಿಂದ ಕಟ್ಟಡದ ಭಾರವೆಲ್ಲ ತಳಪಾಯದ ಮೇಲೆ ಸರಿಯಾಗಿ ಹಂಚಿಹೋಗಿ ಕಟ್ಟಡದ ಎಲ್ಲ ಭಾಗಗಳು ಸಮವಾಗಿ ಕುಸಿಯುವವು; ಹೀಗಾಗಿ ಕಟ್ಟಡಗಳಲ್ಲಿ ಬಿರುಕುಂಟಾಗುವುದಿಲ್ಲ. ಈ ಕುಸಿತ ಅತ್ಯಲ್ಪ ಪ್ರಮಾಣದ್ದಾಗಿರುವುದರಿಂದ ಕಟ್ಟಡದ ಬಹುಭಾಗ ನೆಲದಲ್ಲಿ ಹೂಳಿಹೋಗುವ ಭಯ ಅನೇಕ ಶತಮಾನಗಳ ವರೆಗೆ ಬರುವುದಿಲ್ಲ– ಎಂಬುದು ಅವರ ಲೆಕ್ಕಾಚಾರವಾಗಿತ್ತು. ಆದರೆ ಅವರೆಣಿಸಿದ ಪ್ರಮಾಣಕ್ಕಿಂತಲೂ ಹೆಚ್ಚಾಗಿ ಭೂಮಿ ಕುಸಿಯುತ್ತಿದ್ದುದು ವೆನೀಸಿಯನ್ನರನ್ನು ಗಾಬರಿಗೀಡುಮಾಡಿತು. ಅವರು ಪರಿಹಾರೋಪಾಯಗಳನ್ನು ಕೈಕೊಂಡರೂ ವಿಶೇಷ ಫಲಕಾರಿಯಾಗಲಿಲ್ಲ.

**ವೆನಿಸಿನ ಸುಂದರತಮ ಕಟ್ಟಡಗಳಲ್ಲೊಂದು: ಪಲಾಜೋ ಪೆಸಾರೋ**



ಈಗ ವೆನಿಸಿನ ಕಟ್ಟಡಗಳು ಮೊದಲಿಗಿಂತಲೂ ಹೆಚ್ಚು ವೇಗವಾಗಿ, ಎಂದರೆ, ವರ್ಷಕ್ಕೆ ೦.೧೬೧ ಇಂಚುಗಳಂತೆ ಕುಸಿಯುತ್ತಿವೆ. ಧ್ರುವ ಪ್ರದೇಶಗಳಲ್ಲಿನ ಬರ್ಫ ಈ ಶತಮಾನದಲ್ಲಿ ಹೆಚ್ಚು ಪ್ರಮಾಣದಲ್ಲಿ ಕರಗತೊಡಗಿದ್ದರಿಂದ ಜಗತ್ತಿನಾದ್ಯಂತ ಮಹಾಸಾಗರಗಳ ಮಟ್ಟ ಏರುತ್ತಿದೆ. ಇದರ ಬಿಸಿ ವೆನಿಸಿಗೂ ತಟ್ಟಿದೆ. ಸಮುದ್ರದ ತೆರೆಗಳು ವೆನಿಸ್ ನಗರದ ಮೇಲೆ

ವುದರಿಂದ ಅಲ್ಲಿನ ಉಸುಕು ನೆಲದ ಒಂದು ಪಾಲು ಕ್ರಮೇಣ ಸಮುದ್ರದ ಗರ್ಭವನ್ನು ಸೇರುತ್ತಿದೆ. ಸಮುದ್ರ ಈಗಾಗಲೇ ಸಾಕಷ್ಟು ಭೂಮಿಯನ್ನು ಕಬಳಿಸಿದ್ದರಿಂದ ಇಟಾಲಿಯನ್ ಸರಕಾರ ಅಲ್ಲಿ ಡೈಕುಗಳನ್ನು (Dykes) ನಿರ್ಮಿಸುವ ಮೂಲಕ ಸಮುದ್ರರಾಜನ 'ಆಕ್ರಮಣ'ವನ್ನು ತಡೆಯುತ್ತಲಿದೆ.

ಆದರೆ ಸಮುದ್ರರಾಜ ಇದರಿಂದ ಸೋಲೊಪ್ಪಿದಂತೆ ಕಾಣುವುದಿಲ್ಲ. ಸಮುದ್ರದ ನೀರು ನೆಲದೊಳಗೆ ತೂರಿಕೊಂಡು ಹೋಗಿ ಕಟ್ಟಡಗಳ ತಳಪಾಯವನ್ನು ಸಡಿಲಿಸುತ್ತಿದೆ. ಅದು ತಳಪಾಯದಲ್ಲಿ ಉಪಯೋಗಿಸಲಾದ ದಿಮ್ಮಿಗಳನ್ನು ಲಡ್ಡು ಮಾಡಿ ಮಹಾಮಹಾ ಭವನಗಳನ್ನು ಉರುಳಿಸಿದರೇನು ಗತಿ? ಆ ಭವನಗಳು ಇಟಾಲಿಯನ್ ಸಂಸ್ಕೃತಿಯ ಕುರುಹಾದ ಶ್ರೇಷ್ಠತಮ ಶಿಲ್ಪಕಲಾಕೃತಿಗಳನ್ನೊಳಗೊಂಡಿದ್ದರಿಂದ ಅವು ಕಾಲದ ಗರ್ಭದಲ್ಲಿ ಅನ್ಯಾಯವಾಗಿ ಸಮಾಹಿತವಾಗಿ ಹೋಗುತ್ತ[illegible] ಅಲ್ಲಿನ ಜನ [illegible]ರೆ.

ವೆನಿಸ್ ಕಾಲುವೆಗಳ ನಗರ. ಒಂದು ಓಣಿಯಿಂದ

ವೆನಿಸಿನ ಸಂತ ಮಾರ್ಕ್ಸ್ ಚೌಕ ನೆರೆ ನೀರಿನಲ್ಲಿ ಪ್ರತಿಬಿಂಬಿತ. ಈ ಗೋಪುರ ೧೨ನೇ ಶತಮಾನದಲ್ಲಿ ನಿರ್ಮಿತವಾದದ್ದು. ೧೬ನೇ ಶತಮಾನದಲ್ಲಿ ಪುನರ್ನಿರ್ಮಿತವಾಗಿ ೧೯೦೨ರಲ್ಲಿ ಕುಸಿದು ೧೯೧೨ರಲ್ಲಿ ಮತ್ತೆ ನಿರ್ಮಿತವಾಯಿತು.



ಇನ್ನೊಂದು ಓಣಿಗೆ ಹೋಗಬೇಕೆಂದರೆ ಡೋಣಿಗಳ ಸಹಾಯ ಬೇಕೆನ್ನುವಷ್ಟು ಮಟ್ಟಿಗೆ ಅಲ್ಲಿ ಕಾಲುವೆಗಳಿವೆ. ಇದಕ್ಕೆ ಕಾರಣವೆಂದರೆ ಅದು ಒಂದೇ ದ್ವೀಪವಾಗಿರದೆ ೧೧೮ ಚಿಕ್ಕಪುಟ್ಟ ಉಸುಬಿನ ದ್ವೀಪಗಳ ಒಂದು ಸಮೂಹವಾಗಿದೆ. ಒತ್ತೊತ್ತಾಗಿದ್ದ ಈ ದ್ವೀಪಸ್ತೋಮದ ನಡುವಣ ಸಮುದ್ರ ಕಾಲುವೆಗಳನ್ನು ವೆನೀಸಿಯನ್ನರು ಪೂರ್ತಿ ತುಂಬದೆ ರಸ್ತೆಗಳ ಬದಲು ಅವುಗಳನ್ನು ಸಂಚಾರಕ್ಕೆ ಉಪಯೋಗಿಸಿದರು. ಮೋಟರುಗಳು ಇಲ್ಲದ ಆ ಯುಗದಲ್ಲಿ, ಸಮುದ್ರ ವ್ಯಾಪಾರವನ್ನೇ ಅವಲಂಬಿಸಿದ ವೆನಿಸ್ ನಗರದ ಸಮಾಜಕ್ಕೆ ಇದೇನೂ ಕೊರತೆಯೆನಿಸಲಿಲ್ಲ. ಬದಲಿಗೆ ಅಪರ ಪ್ರಿಯವೆನಿಸುವ ನಗರಕ್ಕೆ ಇದೊಂದು ಅದ್ವಿತೀಯವಾದ ವೈಶಿಷ್ಟ್ಯವನ್ನು ಕೊಟ್ಟಿತು. ಒಂದು ಸಾವಿರ ವರ್ಷದ ವೈಭವದ ಕಾಲದಲ್ಲಿ ಇಲ್ಲಿ ತಲೆಯೆತ್ತಿದ ಅಸಂಖ್ಯ ಸುಂದರ ಸೌಧಗಳೆಲ್ಲ "ತಮ್ಮ ಮುಖವನ್ನು ನೀರ್ಗನ್ನಡಿಯಲ್ಲಿ ತಾವೇ ನೋಡಿಕೊಂಡು ಮೋದಪಡುವ ಜಲಕನ್ನಿಕೆಯರಂತೆ" ಕಾಣಿಸುತ್ತವೆ.

ಆದರೆ ಸಮುದ್ರದ ಪಾತಳಿ ಏರಿದ್ದರಿಂದಲೂ ತೆರೆಗಳು ಹೆಚ್ಚು ಅಬ್ಬರದಿಂದ ಬರುವುದರಿಂದಲೂ ಕಾಲುವೆಗಳಲ್ಲಿ ಈಗ ನೀರಿನ ಮಟ್ಟ ಹೆಚ್ಚತೊಡಗಿದೆ. ಎತ್ತರ ಪ್ರದೇಶಗಳಲ್ಲಿನ ಕಾಲುವೆಗಳ ನೀರು ನೆಲದಲ್ಲಿ ಇಂಗಿ ಕಟ್ಟಡಗಳಲ್ಲಿ ಇಳಿದುಬರುತ್ತಿದೆ. ಪರಿಣಾಮವಾಗಿ ಪಿಯಾಝಾ ಸಾನ್ ಮಾರ್ಕೋ ಚರ್ಚಿನಲ್ಲಿನ ಭಿತ್ತಿಚಿತ್ರಗಳಿಗೆ ಈಗಾಗಲೇ ಸಾಕಷ್ಟು ನಷ್ಟವುಂಟಾಗಿದೆ. ಎಷ್ಟೋ ಕಡೆ ಸಂಗಮುರವರಿ ಕಲ್ಲಿನಲ್ಲಿ ಕಟ್ಟಿದ ಕಟ್ಟಡಗಳೂ ಅಂಶತಃ ಭಗ್ನವಾಗುತ್ತಿವೆ. ಮಹಾಪೂರವೂ ವೆನಿಸ್ ನಗರವನ್ನು ಗಾಸಿಗೊಳಿಸುತ್ತಿದೆ. ಕಳೆದ ಮೂವತ್ತೈದು ವರ್ಷಗಳ ಅವಧಿಯಲ್ಲಿ ನಲವತ್ತು ಸಲ ಮಹಾಸಾಗರ ಉಕ್ಕಿಬಂದು ಅಲ್ಲಿ ರಾದ್ಧಾಂತವನ್ನೇ ಉಂಟುಮಾಡಿದೆ. ಅಲ್ಲಿನ ಜನ ವೆನಿಸ್ಸನ್ನು ಯಾವ ಕಾರಣದಿಂದ ಬಿಡದಿದ್ದರೂ ಹಸಿಗಾಲಿನಲ್ಲಿ ನಡೆಯುವುದನ್ನು ತಪ್ಪಿಸಿಕೊಳ್ಳಲು ಬಿಡುತ್ತಿದ್ದಾರೆಂದು ಒಬ್ಬ ಲೇಖಕ ವಿನೋದಪೂರ್ಣವಾಗಿ ಹೇಳಿದ್ದಾನೆ.

ಇಂದಿನ ವೆನಿಸ್ ಪುರಾತನ ಕಾಲದ ವೆನಿಸ್ ಆಗಿ ಉಳಿದಿಲ್ಲ. ಇಪ್ಪತ್ತನೆಯ ಶತಮಾನದ ಗಾಳಿ ಅಲ್ಲಿಯೂ ಬೀಸುತ್ತಿದೆ. ಕಾರಖಾನೆಗಳು ದಿನಕ್ಕೊಂದರಂತೆ ತಲೆಯೆತ್ತತೊಡಗಿವೆ. ಸಮುದ್ರದ ನೀರನ್ನು ಶುದ್ಧೀಕರಿಸಿ ಉಪಯೋಗಿಸುವುದು ಹೆಚ್ಚು ವೆಚ್ಚದ್ದಾಗಿರುವುದರಿಂದ ಅವು ಆರ್ಟೀಶಿಯನ್ ಭಾವಿಗಳ ಮೂಲಕ ನೀರನ್ನೆತ್ತತೊಡಗಿವೆ. ಇದರಿಂದಾಗಿ ಭೂಗರ್ಭದ ನೀರಿನ ಮಟ್ಟ (water table) ಇಳಿದು ಕಟ್ಟಡಗಳು ಕುಸಿಯುವುದಕ್ಕೆ ಇನ್ನೊಂದು ಕಾರಣವಾಗುತ್ತಿದೆ. ಕಾರಖಾನೆಗಳ ಚಿಮಣಿಗಳಿಂದ ಹೊರಹೊಮ್ಮುವ ಗಂಧಕಾಮ್ಲಯುಕ್ತ ಹೊಗೆ ಪುರಾತನ ಕಟ್ಟಡಗಳಲ್ಲಿನ ಕಾಷ್ಠ ಪ್ರತಿಮೆಗಳನ್ನು ಭಗ್ನಗೊಳಿಸುವುದಕ್ಕೂ ಶಿಲ್ಪಕಲಾಕೃತಿಗಳನ್ನು ರೂಪುಗೆಡಿಸಿಸುವುದಕ್ಕೂ ಕಾರಣವಾಗಿದೆ. ಸಂತಾ ಮಾರಿಯಾ ಚರ್ಚಿನ ಕಲಾಕುಸುರನ್ನು ಈಗಾಗಲೇ ಕಾರಖಾನೆಗಳ ದೂಷಿತ ಹೊಗೆ ಅಂದಗೆಡಿಸಿದೆ. ಕಲ್ಲಿನಲ್ಲಿ ಕಟೆದ ಅನೇಕ ಉತ್ತುಂಗವಾದ ಮೂರ್ತಿಗಳನ್ನು ಈ ಹೊಗೆ ಈಗಾಗಲೇ ಗುರುತಿಸಲು ಬಾರದಷ್ಟು ವಿಕಾರಗೊಳಿಸಿದೆ. ಅವು ನೆಲಕ್ಕೆ ಉರುಳಿ ಹೋಗದಿರಲೆಂದು ಮೂರ್ತಿಗಳಿಗೆ ಕಬ್ಬಿಣ ಸಳಿಗಳ ಆಶ್ರಯಕೊಡಲಾಗಿದೆ. ಸಾನ್ ಮಾರ್ಕೋದ ವಿಶಾಲ ಚರ್ಚು ಕವಿ ಬೈರನ್ನನ್ನು ಆಕರ್ಷಿಸಿತ್ತು. ಸುಂದರ ಕೆತ್ತನೆಯುಳ್ಳ ೫೦೦ ಭವ್ಯ ಕಂಬಗಳೂ ಈಗ ಕಾರಖಾನೆಯ ದೂಷಿತ ಹೊಗೆಯ ಸಂಪರ್ಕದಿಂದ ಕ್ಷಯಗ್ರಸ್ತವಾಗಿರುವಂತೆ ಕಾಣುತ್ತದೆ. ಪ್ರತಿದಿನ ಮುಂಜಾನೆ ಹೊಗೆಯ ಪ್ರಭಾವದಿಂದ ಈ ಸ್ತಂಭಗಳ ಕೆಳಗೆ ಕಲ್ಲಿನ ಪುಡಿ ಉದುರಿ ಬಿದ್ದಿರುತ್ತದೆ.

ವೆನಿಸಿಗೆ ಬಂದ ಈ ಗಂಡಾಂತರವನ್ನು ಅನುಲಕ್ಷಿಸಿಯೆ ಆ ನಗರವನ್ನು ಉಳಿಸಲು ಯುನೆಸ್ಕೋ ಸಂಸ್ಥೆಯನ್ನು ಕೇಳಿಕೊಳ್ಳಲಾಯಿತು. ಯುನೆಸ್ಕೋ ತಜ್ಞರು ಇಟಾಲಿಯನ್

ಸರಕಾರದ ಸಹಕಾರದೊಂದಿಗೆ ಅಲ್ಲಿ ಪ್ರಾಥಮಿಕ ಪರೀಕ್ಷಣೆಯನ್ನು ಪೂರೈಸಿ ಬೃಹತ್ ವರದಿಯೊಂದನ್ನು ತಯಾರಿಸಿದರು. ಅದರೊಡನೆ ಹದಿನಾರು ಸಾವಿರ ಫೋಟೋಗಳನ್ನು ತೆಗೆದು ಪ್ರತಿಯೊಂದು ಕಲಾಕೃತಿಯನ್ನೂ ಹೇಗೆ ಉಳಿಸಬಹುದೆಂಬುದರ ಬಗೆಗೆ ಸಲಹೆ ನೀಡಿದರು. ಈಗ ತಜ್ಞರ ಅನೇಕ ತಂಡಗಳು ಸಮಸ್ಯೆಯ ವಿವಿಧ ಮುಖಗಳನ್ನು ಅಭ್ಯಸಿಸುತ್ತಿವೆ.

ಪ್ರಾಚೀನ ರೋಮನ್ನರ ಕಲಾಭಿರುಚಿಯನ್ನು ವ್ಯಕ್ತಪಡಿಸುವ ಐದು ಸಾವಿರ ಕಟ್ಟಡಗಳನ್ನು ಉಳಿಸಲು ಸುಮಾರು ಐದುನೂರು ಐವತ್ತು ಕೋಟಿ ರೂಪಾಯಿಗಳು ಹಿಡಿಯುವವೆಂದು ತಜ್ಞರು ಲೆಕ್ಕಹಾಕಿದ್ದಾರೆ. ಅಮೇರಿಕದ ಕೆಲ ಕಲಾಭಿಮಾನಿಗಳು ಸಮಿತಿಯೊಂದನ್ನು ರಚಿಸಿ ಹದಿನೈದು ಲಕ್ಷ ರೂಪಾಯಿ ಚಂದಾ ಎತ್ತಿ ಅದನ್ನು ಟಿಂಟೋರೆಟ್ಟೋ ರಚಿಸಿದ ಸುಪ್ರಸಿದ್ಧ ಚಿತ್ರಗಳನ್ನು ರಕ್ಷಿಸಲು ವಿನಿಯೋಗಿಸಬೇಕೆಂದು ನಿಶ್ಚಯಿಸಿದ್ದಾರೆ. ಅಲ್ಲಿನ ಐ. ಬಿ. ಎಮ್. ಹಾಗೂ ಎಮ್. ಐ. ಟಿ. ಸಂಸ್ಥೆಗಳೂ ತಜ್ಞರನ್ನು ಕಳಿಸಿ ವೆನಿಸಿನ ಕಟ್ಟಡಗಳು ಕುಸಿಯುವುದನ್ನು ಹೇಗೆ ತಪ್ಪಿಸಬೇಕೆಂಬುದನ್ನು ಕಂಡು ಹಿಡಿಯಲು ಕೇಳಿಕೊಂಡಿವೆ. ಜಗತ್ತಿನ ಸಾವಿರಾರು ಕಲಾಪ್ರೇಮಿಗಳೂ ವೆನಿಸಿನ ಕಲಾಸಂಪತ್ತನ್ನು ರಕ್ಷಿಸುವಲ್ಲಿ ಆಸ್ಥೆ ತಳೆದ ಸಂಸ್ಥೆಗಳೂ ಸೇರಿ, ಲಕ್ಷಗಟ್ಟಳೆ ಹಣ ಸುರಿದು, ಈಗಾಗಲೆ ಐತಿಹಾಸಿಕ ಮಹತ್ವದ ಮೂವತ್ತು ಭವನಗಳನ್ನು ಪುನರುತ್ಥಾನಗೊಳಿಸಿಯಲ್ಲದೆ ಕಾಲಪ್ರವಾಹದಲ್ಲಿ ಸಿಕ್ಕು ಭಗ್ನಗೊಳ್ಳುತ್ತಿರುವ ನಾಲ್ಕು ಸಾವಿರ ಚದುರ ಅಡಿಗಳಷ್ಟು ಭಿತ್ತಿ ಚಿತ್ರಗಳನ್ನೂ ಹದಿನೈದುನೂರು ತೈಲಚಿತ್ರಗಳನ್ನೂ ಸುಸ್ಥಿತಿಗೆ ತಂದಿವೆ. ನ್ಯೂಯಾರ್ಕ್ ವಿಶ್ವವಿದ್ಯಾಲಯದ ರಸಾಯನಶಾಸ್ತ್ರ ವಿಜ್ಞಾನಿಗಳೂ ಅಲ್ಲಿ ಕಾರ್ಯನಿರತರಾಗಿದ್ದಾರೆ. ದೂಷಿತ ಹವೆಯನ್ನು ತಡೆಯಲು ಇಟಾಲಿಯನ್ ಸರಕಾರ ಒಂದು ಆಜ್ಞೆ ಹೊರಡಿಸಿ ಎಣ್ಣೆಯನ್ನು ಇಂಧನವಾಗಿ ಉಪಯೋಗಿಸುವ ಬದಲು ಗ್ಯಾಸ್ ಉಪಯೋಗಿಸಬೇಕು; ಕಾರಖಾನೆಗಳು ಹೊಗೆಯನ್ನು ಫಿಲ್ಟರ್ ಮಾಡಿದ ನಂತರ ಮಾತ್ರ ಹೊರಗೆ ಬಿಡಬೇಕು ಎಂದು ಒತ್ತಾಯಿಸಿದೆ. ಆದರೆ ಅದಿನ್ನೂ ಕಾರ್ಯಗತವಾಗಿಲ್ಲ.

ವೆನಿಸ್ ನಗರವನ್ನು ಉಳಿಸುವ ಸಮಸ್ಯೆ ಅಷ್ಟು ಸುಲಭವಾಗಿಲ್ಲ. ಸಮುದ್ರದಿಂದ ಒದಗಿ ಬರುವ ಅಪಾಯವನ್ನು ತಡೆಗಟ್ಟಬೇಕೆಂದರೆ ಸಮುದ್ರವನ್ನೇ ಮಾನವನ ನಿಯಂತ್ರಣಕ್ಕೊಳಪಡಿಸಬೇಕು. ಅದು ಹೇಗೆಂಬುದೆ ಈಗಿರುವ ಪ್ರಶ್ನೆಯಾಗಿದೆ. ಪ್ರವಾಹ, ವಾತಾವರಣದಲ್ಲಿ ದೂಷಕಗಳ ಪ್ರಮಾಣ, ಗಾಳಿಯ ವೇಗ ಹಾಗೂ ದಿಕ್ಕು, ಲಗೂನುಗಳ ತಳಭಾಗದ ರಚನೆ ಮುಂತಾದವುಗಳನ್ನು ಅಭ್ಯಸಿಸಿದ ನಂತರವೇ ತಜ್ಞರು ಒಂದು ತೀರ್ಮಾನಕ್ಕೆ ಬರಬಹುದು.

ಇದರ ಅಂಗವಾಗಿ ವಿಜ್ಞಾನಿಗಳು ಹೊಸ ಹೊಸ ಸಂಶೋಧನೆಗಳನ್ನೇ ಕೈಕೊಳ್ಳಬೇಕಾಗುವುದು. ಉದಾಹರಣೆಗೆ, ಲಗೂನುಗಳಲ್ಲಿ ಉಸುಕು ಸಂಗ್ರಹವಾಗದ ಹಾಗೆ ನೀರು ಪ್ರವಹಿಸುವಂತೆ ಮಾಡುವುದು, ನೀರಿನಲ್ಲಿ ಕೀಟನಾಶಕಗಳನ್ನು ಬೆರೆಸದೆ ಮತ್ತಾವುದಾದರೂ ವಿಧಾನದಿಂದ ಅಲ್ಲಿನ ಕೀಟಾಣುಗಳನ್ನು ಕೊಲ್ಲುವುದು, ಬಿರುಗಾಳಿಯನ್ನು ಮಾನವನ ನಿಯಂತ್ರಣಕ್ಕೆ ಒಳಪಡಿಸುವುದು ಇತ್ಯಾದಿ. ಇವೆಲ್ಲವುಗಳನ್ನು ಸಾಧಿಸಲು ಅದ್ಭುತ ಹಾಗೂ ಅಪಾರ ಪರಿಶ್ರಮ, ಕೌಶಲ ಬೇಕು. ವೈಜ್ಞಾನಿಕವಾಗಿ ಮುಂದುವರಿದ ಇಪ್ಪತ್ತನೆಯ ಶತಮಾನ ಇವೆರಡನ್ನೂ ಹೊಂದಿದ ವಿಜ್ಞಾನಿಗಳನ್ನು ಈ ಮಹಾ ಕಾರ್ಯಕ್ಕೆ ಒದಗಿಸುವುದು ಎಂಬ ಭರವಸೆಯಿದೆ. ✡

---

**ಸೂಚನೆ :** ೯೬ನೆಯ ಪುಟದಲ್ಲಿರುವ 'ಮೂರು ಮೊಗದವನು' ಕವನದ ೪ನೆಯ ನುಡಿಯ ಮೂರನೆಯ ಸಾಲನ್ನು ದಯವಿಟ್ಟು, "ಪಕ್ಕ ಪೊಲಿಟೀಶಿಯನ್ ಇಂಡಿಯನ್ ವ್ವಿ ಆಯ್ ಪಿ" ಎಂದು ತಿದ್ದಿಕೊಂಡು ಓದಬೇಕು.

# ಕಪ್ಪು ದ್ವೀಪ ಜಮೈಕಾ

ಶ್ರೀನಾಥ

ಉತ್ತರ ಅಮೇರಿಕವು ದಕ್ಷಿಣ ಅಮೇರಿಕವನ್ನು ಕೂಡುವಲ್ಲಿರುವ ಅಟ್ಲಾಂಟಿಕ್ ಸಾಗರದ ಭಾಗಕ್ಕೆ ಕೆರೀಬಿಯನ್ ಸಮುದ್ರವೆಂದು ಹೆಸರು. ವಿಷುವವೃತ್ತದ ಉತ್ತರಕ್ಕೆ ಅಮೇರಿಕದ ಫ್ಲೋರಿಡಾದಿಂದ ದಕ್ಷಿಣದ ವೆನೆಜುಯೆಲಾ ವರೆಗೆ ನೂರಾರು ಚಿಕ್ಕ ದೊಡ್ಡ ದ್ವೀಪಗಳು ಹಬ್ಬಿಕೊಂಡಿವೆ. ಸ್ಥೂಲವಾಗಿ ಇವುಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗುತ್ತದೆ. ಉತ್ತರದ ಬಹಾಮಾ ದ್ವೀಪಗಳದು ಒಂದು ಗುಂಪಾದರೆ, ಕ್ಯೂಬಾ, ಜಮೈಕಾ, ಹಿಸ್ಪಾನಿಯೋಲಾ, ಪ್ಯುರ್ಟೋರಿಕೊಗಳಂಥ ದೊಡ್ಡ ದ್ವಿಪಗಳನ್ನೊಳಗೊಂಡ ಗ್ರೇಟರ್ ಆ್ಯಂಟಿಲಿಸ್ ಇನ್ನೊಂದು. ಅನಂತರ ಪ್ಯುರ್ಟೋರಿಕೊದ ಬದಿಯ ವರ್ಜಿನಿಯಾ ದ್ವೀಪಗಳಿಂದಾರಂಭಿಸಿ ವೆನೆಜುಯೆಲಾದ ನೈಋತ್ಯ ಕರಾವಳಿಯ ಸಮೀಪವಿರುವ ತ್ರಿನಿದಾದ್ ವರೆಗಿನ ಚಿಕ್ಕ ನಡುಗಡ್ಡೆಗಳ ಗುಂಪು,



ಲೆಸರ್ ಆ್ಯಂಟಿಲಿಸ್, ಮೂರನೆಯದು. ಬ್ರಿಟನ್, ಫ್ರಾನ್ಸ್, ಹಾಲೆಂಡ್, ಸ್ಪೇನ್, ಅಮೇರಿಕ ಮುಂತಾದ ಹಲವಾರು ದೇಶಗಳ ಒಡೆತನಕ್ಕೆ ಸೇರಿದ್ದ ದ್ವೀಪಗಳಿವು. ಕೋಲಂಬಸ್ ಹದಿನೈದನೆಯ ಶತಮಾನದ ಕೊನೆಯಲ್ಲಿ ಸ್ಪೇನಿನಿಂದ ಪಶ್ಚಿಮಕ್ಕೆ ಹೊರಟು ಈ ದ್ವೀಪಗಳನ್ನು ಅಕಸ್ಮಾತ್ ತಲುಪಿ ಇದೇ ಭಾರತವಿರಬೇಕೆಂದು ಭಾವಿಸಿದನಂತೆ. ಕೋಲಂಬಸ್ ಜಮೈಕಾದ ಮೇಲೆ ಅಡಿಯಿರಿಸಿದ್ದು ಮೇ ೩, ೧೪೯೪ ರಂದು. ಮುಂದೆ ೧೫೦೩–೦೪ ರಲ್ಲಿ ಅವನು ಎರಡನೆಯ ಸಲ ಇಲ್ಲಿಗೆ ಬಂದಾಗ ಜಮೈಕಾದ ಉತ್ತರ ಕರಾವಳಿಯಲ್ಲಿ ೧೨ ತಿಂಗಳು ಕಳೆಯಬೇಕಾಗಿ ಬಂತು. ೧೫೦೯ ರಲ್ಲಿ ಕೋಲಂಬಸನ ಮಗ ಡಿಯೆಗೊನು ಡಾನ್ ಜುವಾನ್ ಡಿ ಎಸ್ಕ್ವಿವೆಲ್ ಎಂಬವನನ್ನು ಇಲ್ಲಿಯ ಗವರ್ನರ್ ಎಂದು ನೇಮಿಸಿದಂದಿನಿಂದ ಇದು ಸ್ಪಾನಿಶ್ ವಸಾಹತಾಯಿತು. ೧೬೫೫ರಲ್ಲಿ ಇಂಗ್ಲೀಷರು ಸ್ಪಾನಿಯಾರ್ಡರನ್ನು ಪೂರ್ಣ ಸೋಲಿಸಿ ಹೊರಹಾಕುವವರೆಗೂ ಇದು ಅವರ ವಶದಲ್ಲೇ ಇತ್ತು. ಇವನ್ನೇ ಮುಂದೆ ವೆಸ್ಟ್ ಇಂಡೀಜ್ ದ್ವೀಪಗಳೆಂದು ಕರೆಯಲಾಯಿತು. ೧೯೫೮ ರಲ್ಲಿ ತನ್ನ ವಶದಲ್ಲಿದ್ದ ವೆಸ್ಟ್ ಇಂಡಿಯನ್ ದ್ವೀಪಗಳನ್ನು ಒಂದುಗೂಡಿಸಿ ಅವೆಲ್ಲವೂ ಸೇರಿ ಒಂದು ಗಣರಾಜ್ಯವಾಗುವಂತೆ ಬ್ರಿಟನ್ ಒಂದು ಸಂವಿಧಾನವನ್ನು ರಚಿಸಿಕೊಟ್ಟಿತು. ಆದರೆ ಜಮೈಕಾ ಮನಸ್ಸಿಲ್ಲದ ಮನಸ್ಸಿನಿಂದಲೇ ಈ ಒಕ್ಕೂಟವನ್ನು ಸೇರಿತ್ತು. ಆಗಸ್ಟ್ ೬, ೧೯೬೨ ರಂದು ಅದು ಅದರಿಂದ ಹೊರಬಿದ್ದು ಕಾಮನ್‌ವೆಲ್ತಿನ ಸ್ವತಂತ್ರ ಸದಸ್ಯ ರಾಷ್ಟ್ರವಾಯಿತು. ಅಂದು ೩೦೭ ವರ್ಷಗಳಷ್ಟು ಸುದೀರ್ಘ ಬ್ರಿಟಿಶ್ ಆಳಿಕೆ ಜಮೈಕಾದಲ್ಲಿ ಕೊನೆಗಂಡಂತಾಯಿತು. ಅಲ್ಲದೆ ಎರಡನೆಯ ಮಹಾಯುದ್ಧಾನಂತರ ಜಗತ್ತಿನ ಅನೇಕ ದೇಶಗಳು ಸ್ವಾತಂತ್ರ್ಯ ಪಡೆಯತೊಡಗಿದ್ದುವಾದರೂ ಪಶ್ಚಿಮ ಗೋಲಾರ್ಧದಲ್ಲಿ ಮಾತ್ರ ಆ ಗೌರವವನ್ನು ಮೊದಲು ಪಡೆದ ದೇಶ ಜಮೈಕಾವೇ. ೧೯೦೩ರಲ್ಲಿ ಪನಾಮಾ ಸ್ವತಂತ್ರವಾದ ನಂತರ ಜಮೈಕಾದಿಂದ ಬ್ರಿಟಿಶರು ಕಾಲ್ತೆಗೆಯುವ ವರೆಗೆ ಈ ಗೋಲಾರ್ಧದ ಮತ್ತೆಲ್ಲೂ ದಾಸ್ಯವಿಮುಕ್ತಿ ದೊರೆತಿರಲಿಲ್ಲ.

ಕ್ಯೂಬಾದ ದಕ್ಷಿಣ ತುದಿಯಿಂದ ಸುಮಾರು ೯೦ ಮೈಲು ದಕ್ಷಿಣಕ್ಕಿರುವ ಜಮೈಕಾ ಬರಿ ೧೪೪ ಮೈಲುದ್ದದ ಮತ್ತು ತೀರ ಅಗಲವಿರುವಲ್ಲಿ ೫೨ ಮೈಲು ಮಾತ್ರ ಅಗಲವಿರುವ ದ್ವೀಪ. ಇದರ ಒಟ್ಟು ಕ್ಷೇತ್ರಫಲ ೪,೪೧೧ ಚದರ ಮೈಲು. ಆದರೆ ಇದರ ಸುತ್ತಲಿನ ಚಿಕ್ಕ ಪುಟ್ಟ ನಡುಗಡ್ಡೆಗಳಾದ ಗ್ರ್ಯಾಂಡ್ ಕೇಮನ್, ಲಿಟ್ಲ ಕೇಮನ್, ಕೇಮನ್ ಬ್ರಾಕ್, ಪೆಡ್ರೊ ಕೇಜ್, ಮೇರಾಂಟ್ ಕೇಜ್ ಜಮೈಕಾದ ಭಾಗಗಳೆಂದೇ ಪರಿಗಣಿತವಾಗಿದ್ದು ಇವನ್ನೆಲ್ಲ ಸೇರಿಸಿದರೆ ಈ ದೇಶದ ಕ್ಷೇತ್ರಫಲ ೪,೪೭೦ ಚದರ ಮೈಲಾಗುವುದು.

ನಾಲ್ಕುನೂರು ವರ್ಷಗಳ ಹಿಂದೆ ಸ್ಪಾನಿಯಾರ್ಡರು ಜಮೈಕಾದಲ್ಲಿ ಕಾಲಿರಿಸಿದಾಗ ಅರಾವಾಕ್ ಮತ್ತು ಕೆರಿಬ್ ಎಂಬೆರಡು ಭಿನ್ನ ಜನಾಂಗಗಳು ಇಲ್ಲಿ ವಾಸವಾಗಿದ್ದುವು. ಅರಾವಾಕ್ ಜನ ಅತ್ಯಂತ ಸೌಮ್ಯರೂ ಶಾಂತಿಪ್ರಿಯರೂ ಆಗಿದ್ದರೆ ಕೆರಿಬ್ ಜನ ಮಾತ್ರ ಭಯಂಕರರಾಗಿದ್ದರು. ಇವರು ಕ್ರೂರ ಬೇಟೆಗಾರರಾಗಿದ್ದರಲ್ಲದೆ ನರಮಾಂಸ ಭಕ್ಷಕರೂ ಆಗಿದ್ದರಂತೆ. ಸ್ಪಾನಿಯಾರ್ಡರು ಅರ್ಧ ಶತಶತಮಾನದ ಅವಧಿಯಲ್ಲಿ ಅರಾವಾಕ್ ಜನರ ಅವಶೇಷವೂ ಉಳಿಯದಂತೆ ಅವರನ್ನು ನಿರ್ಮೂಲನಗೊಳಿಸಿದರು. ಜಗತ್ತಿನ ಇತಿಹಾಸದ ಅತ್ಯಂತ ಕ್ರೂರ ಅಧ್ಯಾಯಗಳಲ್ಲಿ ಇದೊಂದು ಎಂದು ಪರಿಗಣಿಸಲ್ಪಟ್ಟಿದೆ. ಈ ಎರಡೂ ಜನಾಂಗಗಳಲ್ಲಿ ಒಂದು ವಿಚಿತ್ರ ರೂಢಿ ಪ್ರಚಲಿತವಿತ್ತು. ಅದೇನೆಂದರೆ ಅವರು ತಮ್ಮ ಮಕ್ಕಳ ಎಳೆಯ ತಲೆಗಳನ್ನು ಹಿಚುಕಿ ಅವುಗಳ ಸ್ವಾಭಾವಿಕ ರೂಪವನ್ನು ಬದಲಿಸಿ ತಮಗೆ ಬೇಕಾದ ರೂಪಕ್ಕೆ ತರುತ್ತಿದ್ದರು. ಅರಾವಾಕರು ಹಣೆಯು ಸಪಾಟಾಗಿ ಅಗಲವಾಗಿರುವಂತೆ ಮಾಡುತ್ತಿದ್ದರಾದರೆ, ಕೆರಿಬರು ಹಣೆಯ ಎರಡೂ ಬದಿಗಳನ್ನು ಒತ್ತಿ ಹಣೆ ಎತ್ತರವಾಗಿ ಚಚೌಕಾಗುವಂತೆ ಮಾಡುತ್ತಿದ್ದರು. ಕೆರಿಬರು ಧನುರ್ಬಾಣಗಳಿಂದ ಕಾದುವಲ್ಲಿ ನಿಷ್ಣಾತರಾಗಿದ್ದರು. ಇವರು ಸ್ಪಾನಿಯರ್ಡರು, ಫ್ರೆಂಚರು, ಇಂಗ್ಲೀಷರು, ಡಚ್ಚರು ಹೀಗೆ ಒಬ್ಬರ ನಂತರ ಒಬ್ಬರಂತೆ ಎಲ್ಲ ವಿದೇಶೀ ಆಕ್ರಮಣಕಾರರ

ವಿರುದ್ಧವೂ ಕಾದಿದರು. ಅಲ್ಲದೆ ಸುಮಾರು ಎರಡು ನೂರು ವರ್ಷಕಾಲ ಕೆಲವು ಚಿಕ್ಕ ದ್ವೀಪಗಳನ್ನು ಹಿಡಿದುಕೊಂಡು ಬಾಳಿದರು. ಮುಂದೆ ಮಾತ್ರ ಈ ಜನಾಂಗವೂ ತನ್ನತನವನ್ನುಳಿಸಿಕೊಳ್ಳಲಾಗದೆಯೆ ಕರಗಿಹೋಯಿತು. ಇವರಿಂದಲೇ ಈ ದ್ವೀಪಗಳಿಗೆ ಕೆರೀಬಿಯನ್ ದ್ವೀಪಗಳೆಂದೂ ಸಮುದ್ರಕ್ಕೆ ಕೆರೀಬಿಯನ್ ಸಮುದ್ರವೆಂದೂ ಹೆಸರು ಬಂದಿದೆ.

ಇಲ್ಲಿನ ಮೂಲನಿವಾಸಿಗಳನ್ನು ಬಹು ಮಟ್ಟಿಗೆ ತೊಡೆದುಹಾಕಿದ ಸ್ಪಾನಿಯರ್ಡರು ಅವರ ಸ್ಥಾನ ತುಂಬಲು ಆಫ್ರಿಕದಿಂದ ನಿಗ್ರೊ ಗುಲಾಮರನ್ನು ತಂದು ನೆಲಸಿದರು. ಬ್ರಿಟಿಶರು ಇದನ್ನು ಗೆದ್ದುಕೊಂಡಾಗ ಈ ದ್ವೀಪದ ಜನಸಂಖ್ಯೆ ಬರಿ ೩,೦೦೦. ಇಲ್ಲಿಂದ ಸ್ಪಾನಿಯರ್ಡರು ಕಾಲ್ದೆಗೆದ ನಂತರ ಮೊದಲು ಬಂದಿದ್ದ ನಿಗ್ರೋಗಳಲ್ಲಿ ಹೆಚ್ಚಿನವರು ಗುಡ್ಡಗಾಡುಗಳಿಗೆ ಓಡಿ ಹೋಗಿ ತಮ್ಮ ಮಟ್ಟಿಗೆ ಒಕ್ಕಲುತನ ಮಾಡಿಕೊಂಡು ವಾಸಿಸತೊಡಗಿದರು. ೧೮ನೆಯ ಶತಮಾನದ ಕೊನೆಯ ವರೆಗೂ ಇವರು ತಮ್ಮ ಸ್ವಾತಂತ್ರ್ಯವನ್ನುಳಿಸಿಕೊಳ್ಳುವುದಕ್ಕೆಂದು ಆಗೀಗ ಬಂಡೇಳುತ್ತಿದ್ದರು. ಆದರೂ ಕೊನೆಗೆ 'ನಾಗರಿಕ' ಶಕ್ತಿಯೆದುರು ಅವರು ಮಣಿಯಬೇಕಾಯಿತು. ೧೬೭೨ರಲ್ಲಿ ರಾಯಲ್ ಆಫ್ರಿಕನ್ ಕಂಪನಿಯೆಂಬ ಗುಲಾಮ ವ್ಯಾಪಾರ ಸಂಸ್ಥೆಯೊಂದು ಇಂಗ್ಲಂಡಿನಲ್ಲಿ ಸ್ಥಾಪಿತವಾಯಿತು. ಆಫ್ರಿಕದಿಂದ ನಿಗ್ರೊ ಗುಲಾಮರನ್ನು ಕೊಂಡು ತಂದು ಜಮೈಕಾದಲ್ಲಿ ಮಾರಾಟ ಮಾಡುವ ಪೂರ್ಣ ಹಕ್ಕುಗಳನ್ನು ಈ ಸಂಸ್ಥೆಗೆ ಕೊಡಲಾಯಿತು. ಅಂದಿನಿಂದ ೧೮೦೭ರಲ್ಲಿ ಗುಲಾಮರವ್ಯಾಪಾರವನ್ನು ಶಾಸನ ಮೂಲಕ ನಿರ್ಮೂಲನಗೊಳಿಸುವವರೆಗೆ ಜಮೈಕಾ ಜಗತ್ತಿನಲ್ಲೇ ಬಹು ದೊಡ್ಡ ಗುಲಾಮರ ಪೇಟೆಯೆನಿಸಿತ್ತು. ಗುಲಾಮಗಿರಿ ಅಧಿಕೃತವಾಗಿ ಮುಕ್ತಾಯಗೊಳ್ಳುವ ಹೊತ್ತಿಗೆ ೩೦೦,೦೦೦ ಕ್ಕಿಂತಲೂ ಹೆಚ್ಚು ಜನ ಗುಲಾಮರು ಜಮೈಕಾದ ತೋಟಗಳಲ್ಲಿ ಮತ್ತು ಕಾರಖಾನೆಗಳಲ್ಲಿ ದುಡಿಯುತ್ತಿದ್ದರು. ೧೮೩೩ರಲ್ಲಿ ಅಲ್ಲಿಯ ಗುಲಾಮರೆಲ್ಲರನ್ನೂ ಒಂದು ಕಾಯುದೆಯ ಮೂಲಕ ಸ್ವತಂತ್ರ ನಾಗರಿಕರನ್ನಾಗಿಸಿದಾಗ ಅಲ್ಲಿ ೭೦ ಸಕ್ಕರೆ ಕಾರಖಾನೆಗಳು, ೬೦ ನೀಲಿ ಮತ್ತು ೬೦ ಕೋಕೋ ಕಾರಖಾನೆಗಳೂ ಇದ್ದುವು. ಈ ಹೊಸ ಕಾಯುದೆ ಜಾರಿಯಲ್ಲಿ ಬಂದ ನಂತರ ಮೊದಲು ಗುಲಾಮರಾಗಿ ದುಡಿಯುತ್ತಿದ್ದವರಲ್ಲಿ ಬಹು ಸಂಖ್ಯರು ಗುಡ್ಡಗಾಡುಗಳಿಗೆ ಹೋಗಿ ಕೃಷಿಯನ್ನು ತಮ್ಮ ಉಪಜೀವನದ ಮಾರ್ಗವಾಗಿ ಮಾಡಿಕೊಂಡು ವಾಸಿಸತೊಡಗಿದ್ದರಿಂದ ಬಹಳಷ್ಟು ಕಾರಖಾನೆಗಳಿಗೆ ಪೆಟ್ಟು ಬಿತ್ತು.

ಈ ಶತಮಾನದ ಪ್ರಾರಂಭದಲ್ಲಿ ಬಾಳೆ ಹಣ್ಣನ್ನು ದೊಡ್ಡ ಪ್ರಮಾಣದಲ್ಲಿ ಬೆಳೆಸುವುದಕ್ಕೆ ಇಲ್ಲಿ ಪ್ರಾರಂಭವಾಯಿತು. ಈಗ ಜಮೈಕಾದ ಮುಖ್ಯ ಬೆಳೆಗಳಲ್ಲಿ ಮತ್ತು ನಿರ್ಯಾತ ಸರಕುಗಳಲ್ಲಿ ಅದಕ್ಕೆ ಬಹು ಮುಖ್ಯ ಸ್ಥಾನ ದೊರೆತಿದೆ.

೧೬೯೨ರ ವರೆಗೂ ಪೋರ್ಟ್ ರಾಯಲ್ ಎಂಬ ಸ್ಪಾನಿಯರ್ಡರಿಂದ ಸ್ಥಾಪಿತವಾಗಿದ್ದ ಚಿಕ್ಕ ಊರು ಜಮೈಕಾದ ರಾಜಧಾನಿಯಾಗಿತ್ತು. ಆದರೆ ಆ ವರ್ಷ ಸಂಭವಿಸಿದ ಭಯಂಕರ ಭೂಕಂಪದಿಂದಾಗಿ ಈ ಊರು ಮುಕ್ಕಾಲುಪಾಲು ಮುಳುಗಿ ನಾಶವಾದುದರಿಂದ ಸಮೀಪದಲ್ಲೆ ಬ್ರಿಟಿಶರು ಕಿಂಗ್‌ಸ್ಟನ್ ಎಂಬ ಹೊಸ ರಾಜಧಾನಿಯನ್ನು ಸ್ಥಾಪಿಸಿದರು. ೧೯೦೭ರಲ್ಲಿ ಸಂಭವಿಸಿದ ಮತ್ತೊಂದು ಭಾರಿ ಭೂಕಂಪ ಕಿಂಗ್‌ಸ್ಟನ್, ಪೋರ್ಟ್ ರಾಯಲ್ ಮತ್ತು ಸೇಂಟ್ ಆ್ಯಂಡ್ರ್ಯೂ ನಗರಗಳನ್ನು ಹಾಳುಗೆಡವಿತು. ಸುಮಾರು ೮೦೦ ಜನ ಅಸು ನೀಗಿದರು. ಈ ಅವಕಾಶವನ್ನು ಉಪಯೋಗಿಸಿಕೊಂಡು ಬ್ರಿಟಿಶರು ಕಿಂಗ್‌ಸ್ಟನ್ನನ್ನು ಮೊದಗಿಂತಲೂ ಹೆಚ್ಚು ಸುಂದರ ನಗರವಾಗಿ ಪುನಾರಚಿಸಿದರು.

ಜಮೈಕಾದ ಜನಸಂಖ್ಯೆ ಇಂದು ಸುಮಾರು ೮೦ ಲಕ್ಷ. (ನಮ್ಮ ಕಲಕತ್ತೆ, ಮುಂಬಯಿಗಳ ಜನಸಂಖ್ಯೆ ಇದರ ಎರಡು ಪಟ್ಟು.) ಅವರಲ್ಲಿ ೭೭% ಜನ ನಿಗ್ರೋಗಳು, ೧೮% ಜನ ಭಾರತೀಯ ಮೂಲದವರನ್ನೊಳಗೊಂಡು ಬೇರೆ ಬೇರೆ ಮಿಶ್ರ ಜನ, ಹಾಗು ೨% ಬಿಳಿಯರು. ದೇಶದ ಅತಿ ದೊಡ್ಡ ನಗರವಾದ ಕಿಂಗ್‌ಸ್ಟನ್ನಿನ ಜನಸಂಖ್ಯೆ ೨ ಲಕ್ಷಕ್ಕೂ ಕಡಿಮೆ.

ಗುಲಾಮಗಿರಿಯ ನಿರ್ಮೂಲನದ ನಂತರ

ಇಲ್ಲಿ ಕಾರ್ಮಿಕರ ಕೊರತೆ ವಿಪರೀತವಾದ್ದರಿಂದ ಅಂದಿನ ಸರಕಾರ ಭಾರತದಿಂದಲೂ ಕೆಲವರನ್ನಿಲ್ಲಿ ತಂದು ನೆಲೆಗೊಳಿಸಿತು. ಕಳೆದ ಶತಮಾನದ ಮಧ್ಯದಲ್ಲಿ ಇಲ್ಲಿಗೆ ರೇಲ್ವೆ ಬಂತು. ಇದರಿಂದ ಪರಿಸ್ಥಿತಿ ತಕ್ಕ ಮಟ್ಟಿಗೆ ಸುಧಾರಿಸಿತು.

ಕೊಲಂಬಸ್ ಎರಡನೆಯ ಸಲ ಜಮೈಕಾಕ್ಕೆ ಬರುವ ಮುನ್ನವೇ ಕೆಲವು ಜನ ಯಹೂದ್ಯರು ಯುರೋಪಿನಿಂದ ಹೊರ ಬಿದ್ದು ಇಲ್ಲಿ ಬಂದು ನೆಲೆಸಿದರು. ಇಲ್ಲಿಯ ಮೂಲನಿವಾಸಿಗಳಾದ ಅರಾವಾಕ್ ಮತ್ತು ಕೆರಿಬರ ನಂತರ ಯಹೂದ್ಯರೇ ಇಲ್ಲಿ ತೀರ ಹಳೆಯ ನಿವಾಸಿಗಳು. ಇಂದಿಗೂ ಅವರ ಸಂಖ್ಯೆ ಒಟ್ಟು ೨೦ ಲಕ್ಷದಲ್ಲಿ ೬೦೦ಕ್ಕಿಂತ ಹೆಚ್ಚಿಲ್ಲವಾದರೂ ಇವರು ಅತ್ಯಂತ ಪ್ರಭಾವಿಯಾಗಿದ್ದಾರೆ. ಇವರು ಇಲ್ಲಿನ ವಿಧಾನ ಮಂಡಳದ ಸದಸ್ಯರಾಗಿದ್ದಾರೆ, ಪ್ರಿವೀ ಕೌನ್ಸಿಲಿನ ಸದಸ್ಯರಾಗಿದ್ದಾರೆ, ನಗರಗಳ ಮೇಯರರಾಗಿದ್ದಾರೆ. ವ್ಯಾಪಾರೋದ್ಯಮಗಳಲ್ಲೂ ಇವರೇ ಮುಂದು. ಮೊನ್ನೆ ಮೊನ್ನೆಯ ವರೆಗೂ ಸರ್ ನೆವಿಲ್ ಆಶನ್ಹೀಮ್ ಎಂಬ ಯಹೂದ್ಯನೇ ಅಮೇರಿಕದಲ್ಲಿ ಜಮೈಕಾದ ರಾಯಭಾರಿಯಾಗಿದ್ದ.

'ಗ್ಲೀನರ್' ಜಮೈಕಾದ ಏಕಮೇವ ದಿನಪತ್ರಿಕೆ. ಇದು ಸಹ ಯಹೂದಿ ಒಡೆತನಕ್ಕೆ ಸೇರಿದ್ದು. ೧೮೩೪ರಲ್ಲಿ ಇಬ್ಬರು ಯಹೂದಿ ಸೋದರರಿಂದ ಪ್ರಾರಂಭಿಸಲ್ಪಟ್ಟ ಇದಕ್ಕೆ ಪ್ರತಿಯಾಗಿ ಬೇರಾವುದೇ ಪತ್ರಿಕೆ ಇಂದಿಗೂ ಜಮೈಕಾದಲ್ಲಿ ಹುಟ್ಟಿಲ್ಲ. ಆದರೆ ಜಮೈಕನ್ನರಿಗೆ ಮಾತ್ರ ಯಾವ ಕೊರತೆಯೂ ಅನಿಸಿಲ್ಲವಷ್ಟೇ ಅಲ್ಲ, ಬೇರೆ ದೇಶಗಳಿಗೆ ಹೋದ ಜಮೈಕನ್ನರು ಪತ್ರಿಕೆ ಬೇಕಾದಾಗಲೆಲ್ಲ, "ಗ್ಲೀನರ್ ಕೊಡಿ" ಎಂದು ಕೇಳುವುದೇ ವಾಡಿಕೆಯಂತೆ. ಗ್ಲೀನರ್ ಶಬ್ದ ವೃತ್ತಪತ್ರಿಕೆಗೆ ತತ್ಸಮ ಎಂದಾಗಿಬಿಟ್ಟಿದೆ.

ಒಂದೊಮ್ಮೆ ಬ್ರಿಟಿಶ್ ಸಾಮ್ರಾಜ್ಯದ ಭಾಗವಾಗಿದ್ದ ಎರಡನೆಯ ಮಹಾಯುದ್ಧಾನಂತರ ಸ್ವಾತಂತ್ರ್ಯ ಪಡೆದ ದೇಶಗಳಿಗೆಲ್ಲ ಬ್ರಿಟಿಶರು ಪಾರ್ಲಿಮೆಂಟರಿ ಪ್ರಜಾಸತ್ತೆಯ ಆಡಳಿತ ಪದ್ಧತಿಯನ್ನು ಬಿಟ್ಟುಹೋದರು. ಆದರೆ ಬ್ರಿಟಿಶ್ ಅರ್ಥದಲ್ಲಿ ಈ ಪದ್ಧತಿ ಸಾಕಷ್ಟು ಸ್ಥಿರವಾಗಿ ಉಳಿದುದು ಮೂರೇ ಮೂರು ದೇಶಗಳಲ್ಲಿ—ಭಾರತ, ಮಾಲ್ಟಾ ಮತ್ತು ಜಮೈಕಾ. ಉಳಿದ ಕೆಲವೆಡೆಗಳಲ್ಲಿ ಬೇರೆ ಪದ್ಧತಿಗಳೇ ಅಸ್ತಿತ್ವದಲ್ಲಿ ಬಂದರೆ ಮತ್ತೆ ಹಲವೆಡೆಗಳಲ್ಲಿ ಇದು ರೂಪಗೆಟ್ಟು ಹಾಗೂ ಹೀಗೂ ಉಳಿದುಕೊಂಡಿದೆ. ಜಮೈಕಾದಲ್ಲಿ ಪಾರ್ಲಿಮೆಂಟರಿ ಪದ್ಧತಿಗೆ ಭಾರತದಲ್ಲಿಗಿಂತಲೂ ಹೆಚ್ಚು ಭದ್ರವಾದ ತಳಹದಿ ಇದೆಯೆಂದೆನಿಸುತ್ತಿದೆ. ಭಾರತದಲ್ಲಿ ಕಾಲು ಶತಮಾನದ ನಂತರವೂ ಪರಿಣಾಮಕಾರಿ ವಿರೋಧಿ ಪಕ್ಷವೆಂಬುದು ರಾಷ್ಟ್ರ ಮಟ್ಟದಲ್ಲಿ ಬೆಳೆದಿಲ್ಲ. ಹೀಗಾಗಿ ಹೆಚ್ಚು ಕಡಿಮೆ ಇಲ್ಲಿನದು 'ಏಕ ಪಕ್ಷೀಯ' ಪ್ರಜಾಸತ್ತೆಯಾಗಿಯೇ ಉಳಿದಿದೆ. ಆದರೆ ಜಮೈಕಾದಲ್ಲಿ ಮಾತ್ರ ಕಳೆದ ಸಾಮಾರು ೪೦ ವರ್ಷಗಳಿಂದಲೂ ಎರಡು ರಾಜಕೀಯ ಪಕ್ಷಗಳು ಸುಮಸುಮಾರು ಅಷ್ಟೇ ಪ್ರಬಲವಾಗಿ ಬೆಳೆದು ಬಂದಿವೆ. ಅದಕ್ಕೆ ಕಾರಣ ಇಬ್ಬರು ವ್ಯಕ್ತಿಗಳು—ಬುಸ್ತಾಮೆಂತೆ ಮತ್ತು ಮ್ಯಾನ್ಲೆ. ಅಲೆಕ್ಸಾಂಡರ್ ಬುಸ್ತಾಮೆಂತೆ ಈ ಶತಮಾನದ ಮೂರನೆಯ ದಶಕದಲ್ಲಿ ಜಮೈಕಾದಲ್ಲಿ ಮೊದಲ ಬಾರಿ ಕಾರ್ಮಿಕರ ಸಂಘಟನೆಯನ್ನು ಪ್ರಾರಂಭಿಸಿ ಜಮೈಕಾ ಲೇಬರ್ ಪಾರ್ಟಿಯನ್ನು ಸ್ಥಾಪಿಸಿದರು. ಅಂದಿನ ಬ್ರಿಟಿಶ್ ಸರಕಾರದ ಅವಕೃಪೆಗೆ ಗುರಿಯಾಗಿ ಇವರು ಹಲವು ಸಲ ಸೆರೆಮನೆಯನ್ನೂ ಕಂಡು ಬರಬೇಕಾಯಿತು. ಇವರು ಶ್ರೇಷ್ಠ ವಾಗ್ಮಿಯೆಂದೂ ಸಂಘಟನಾಚತುರರೆಂದೂ ಹೆಸರಾಗಿದ್ದರು ಮಾತ್ರವಲ್ಲ, ಜನತೆಯನ್ನು ವಿದೇಶೀಯರ ವಿರುದ್ಧ ಒಡಿದೆಬ್ಬಿಸುವಲ್ಲಿ ಮಹತ್ವದ ಪಾತ್ರವನ್ನಾಡಿದರು. ಸರದಾರ ಪಟೇಲರಂತೆಯೆ ಹೊರನೋಟಕ್ಕೆ ತುಸು ಒರಟಾಗಿ ಕಂಡರೂ ಬಲು ಗಟ್ಟಿಗ. ಮುಂದೆ ಇವರು ದೇಶದ ಪ್ರಧಾನಮಂತ್ರಿಯೂ ಆದರು.

ಇನ್ನೊಬ್ಬ ವ್ಯಕ್ತಿ ನಾರ್ಮನ್ ವಾಶಿಂಗ್ಟನ್ ಮ್ಯಾನ್ಲೆ. ಇವರು ಬುಸ್ತಾಮೆಂತೆಯ ಸಮೀಪದ ಸಂಬಂಧಿ. ಆದರೆ ಸ್ವಭಾವದಲ್ಲೂ ರೀತಿ ನೀತಿಗಳಲ್ಲೂ ಇವರು ಅವರಿಗೆ ತದ್ವಿರುದ್ಧ. ಇವರು ಆಕ್ಸ್‌ಫರ್ಡಿನಲ್ಲಿ ರ್ಹೋಡ್ಸ್ ಸ್ಕಾಲರ್, ಬ್ಯಾರಿಸ್ಟರ್, ಬುದ್ಧಿಪ್ರಧಾನಜೀವಿ. ಒಂದು ದೃಷ್ಟಿಯಿಂದ ಜಮೈಕಾದ ನೆಹರು ಎಂದು ಹೇಳ

ಬಹುದು. ಇವರದು ಪೀಪಲ್ಸ್ ಲೇಬರ್ ಪಾರ್ಟಿ. ಇಬ್ಬರೂ ಕಾರ್ಮಿಕರನ್ನೇ ಮುಖ್ಯವಾಗಿಟ್ಟುಕೊಂಡು ರಾಜಕೀಯ ಪಕ್ಷಗಳನ್ನು ಕಟ್ಟಿದವರು. ಆದರಿಂದಾಗಿ ಎರಡು ಸಮಾನ ಬಲದ ರಾಜಕೀಯ ಪಕ್ಷಗಳು ಬೆಳೆದುಬಂದು ಬ್ರಿಟಿಶ್ ಮಾದರಿಯ ಪಾರ್ಲಿಮೆಂಟರಿ ಪ್ರಜಾಸತ್ತೆ ಇಲ್ಲಿ ಬಲವಾಗಿ ಬೇರೂರುವುದಕ್ಕೆ ನೆರವಾಗಿದೆ.

ಈಗ ಜಮೈಕಾದಲ್ಲಿ ಅಧಿಕಾರದಲ್ಲಿರುವುದು ಪೀಪಲ್ಸ್ ಲೇಬರ್ ಪಾರ್ಟಿ. ನಾರ್ಮನ್ ಮ್ಯಾನ್ಲೆಯ ಮಗ ೪೮ ವರ್ಷದ ಮೈಕೇಲ್ ಮ್ಯಾನ್ಲೆ ಪ್ರಧಾನಮಂತ್ರಿ (ಭಾರತದಲ್ಲಿಯಂತೆಯೇ ತಂದೆಯಿಂದ ಮಗನಿಗೆ ?).

ಜಮೈಕಾ ಕೃಷ್ಣವರ್ಣೀಯರ ದೇಶವೆ. ಆದರೆ ಅಮೇರಿಕನ್ ನಿಗ್ರೋಗಳಲ್ಲಿ ಅಥವಾ ಇತ್ತೀಚೆ ಸ್ವತಂತ್ರವಾದ ಆಫ್ರಿಕದ ಕಪ್ಪು ದೇಶಗಳಲ್ಲಿ ಕಂಡುಬರುವ ವಿಪರೀತ ವರ್ಣದ್ವೇಷ ಮಾತ್ರ ಇಲ್ಲಿಲ್ಲ. ಆದರೂ 'ರಾಸ್ತಾಫರಿಯನ್' ಎಂಬ ಚಿಕ್ಕ ಗುಂಪೊಂದು ಜಮೈಕನ್ನರ ಮಾತೃದೇಶ ಇಥಿಯೋಪಿಯವೆಂದೂ ಹೇಲ್ ಸೆಲೆಸ್ಸಿ ತಮ್ಮ ಒಡೆಯನೆಂದೂ ಕೃಷ್ಣ ಜನಾಂಗವೇ ಶ್ರೇಷ್ಠವೆಂದೂ ಪ್ರಚಾರ ಮಾಡುತ್ತಿದೆ. ಆದರೆ ಇಲ್ಲಿನ ನಿಗ್ರೋಗಳಿಗೆ ಅವರ ಮೂಲ ಭಾಷೆಯಾಗಲಿ, ಧರ್ಮವಾಗಲಿ, ರೀತಿ ನೀತಿಗಳಾಗಲಿ ಎಂದೋ ಮರೆತುಹೋಗಿವೆಯಾದ್ದರಿಂದ ಸಾಮಾನ್ಯ ಜನ ಇದರಿಂದ ವಿಶೇಷ ಪ್ರಭಾವಿತವಾಗಿಲ್ಲ.

ಇಂದು ಸರಕಾರ ಎದುರಿಸುತ್ತಿರುವ ಎರಡು ಬಹುಮುಖ್ಯ ಸಮಸ್ಯೆಗಳೆಂದರೆ ಶಿಕ್ಷಣ ಮತ್ತು ನಿರುದ್ಯೋಗ ನಿವಾರಣೆ. ಹಳ್ಳಿಗಾಡಿನಲ್ಲೇ ಹೆಚ್ಚಾಗಿರುವ ಮತ್ತು ಮುಕ್ಕಾಲು ಪಾಲಿಗಿಂತಲೂ ಹೆಚ್ಚಾಗಿ ಬಡವರೇ ಆಗಿರುವವರನ್ನು ಶಾಲೆಗಳಿಗೆ ಆಕರ್ಷಿಸುವುದೇ ಸಮಸ್ಯೆಯಾಗಿದೆಯಂತೆ. ಹೊಸತಾಗಿ ಬಾಕ್ಸೈಟ್ ಅದಿರು ಈ ದೇಶದಲ್ಲಿ ವಿಪುಲವಾಗಿರುವುದನ್ನು ಕಂಡು ಅಮೇರಿಕದ ಕೆಲ ದೊಡ್ಡ ಕಂಪನಿಗಳು ಮುಂದಾಗಿ ಬಂದು ಇಲ್ಲಿ ಅಲ್ಯೂಮಿನಿಯಂ ಉದ್ಯಮವನ್ನಾರಂಭಿಸಿವೆ. ಆದರೆ ಈ ಬಗೆಯ ಔದ್ಯಮೀಕರಣ ತಮ್ಮ ಸಮಸ್ಯೆಗಳಿಗುತ್ತರವಲ್ಲ ಎನ್ನುತ್ತಾರೆ ಪ್ರಧಾನಿ ಮ್ಯಾನ್ಲೆ. ಅವರಿಗೆ ಸಹ ಭಾರತದಲ್ಲಿಯಂತೆಯೆ ಶಕ್ಯವಿದ್ದಷ್ಟು ಹೆಚ್ಚು ಜನರಿಗೆ ಉದ್ಯೋಗ ಒದಗಿಸುವಂಥ ಯೋಜನೆಗಳು ಬೇಕು.

ಜಮೈಕಾಕ್ಕೇ ವಿಶಿಷ್ಟವಾದ ಸಮಸ್ಯೆ ಜನಸಂಖ್ಯಾ ನಿಯಂತ್ರಣ. ಇಲ್ಲಿಯ ಸಮಾಜದಲ್ಲಿ ಹೆಣ್ಣು ಬೇರೆಲ್ಲಿಗಿಂತಲೂ ಹೆಚ್ಚು ಸ್ವತಂತ್ರಳು. ಅಂತೆಯೆ ಬಹುಶಃ ಜಗತ್ತಿನ ಇನ್ನಾವುದೇ ನಾಗರಿಕ ದೇಶಕ್ಕಿಂತಲೂ ಹೆಚ್ಚು ಲೈಂಗಿಕ ಸ್ವಾತಂತ್ರ್ಯವಿಲ್ಲಿದೆ. ಇಲ್ಲಿನ ೭೦% ಹೆಚ್ಚು ಜನ ತಂದೆ ಇಂಥವರೆ ಎಂದು ಗುರುತಿಸಲು ಬಾರದವರಂತೆ. ಸಾಧ್ಯವಾದಷ್ಟೂ ಹೆಚ್ಚು ಮಕ್ಕಳನ್ನು ಹೆರುವುದೇ ಶ್ರೇಷ್ಠತ್ವದ ಗುರುತೆಂದು ಇಲ್ಲಿಯ ಹೆಣ್ಣು ಭಾವಿಸುತ್ತಾಳಂತೆ. ✡



ಧಾರ್ಮಿಕ ಮನೋವೃತ್ತಿಯ ಶ್ರೀಮತಿಯುವರ ಮನೆಗೆಲಸದಾಕೆ ಆ ದಿನ ಬಹಳ ಕ್ಲೇಶದಲ್ಲಿದ್ದಂತೆ ತೋರುತ್ತಿದ್ದಳು. ಶ್ರೀಮತಿಯುವರು, "ಏನಮ್ಮ ಬಹಳ ಚಿಂತೆಯಲ್ಲಿದ್ದ ಹಾಗೆ ಕಾಣುತ್ತೆ," ಎಂದರು ದಯೆಯಿಂದ.

ಕೆಲಸದವಳು ತನ್ನ ಕಷ್ಟಗಳನ್ನು ಹೇಳಿಕೊಂಡಳು.

"ದೇವರು ಇಟ್ಟ ಹಾಗೆ ಇರಬೇಕಮ್ಮ. ಚಿಂತೆ ಹಚ್ಚಿಕೊಳ್ಳಬಾರದು," ಎಂದು ಶ್ರೀಮತಿಯುವರು ಉಪದೇಶಿಸಿದರು.

"ಅದು ಹೇಗಾಗುತ್ತೆ ತಾಯಿ," ಕೆಲಸದವಳು ಉತ್ತರಿಸಿದಳು, "ದೇವರು ನಮಗೆ ಕಷ್ಟಗಳನ್ನು ಕೊಡುತ್ತಿದ್ದರೆ ನಾವು ದುಃಖಪಡಬೇಕೆಂದೇ ಅಲ್ಲವೆ ಅವನ ಇಚ್ಛೆ?"

# ಹಿಂಸೆಯಿಂದ ಅಹಿಂಸೆಗೆ

ರಂಗನಾಥ ದಿವಾಕರ

ಹಿಂಸೆಯ ಮಧ್ಯೆ ಅಹಿಂಸೆ ಸಚೇತನವಾಗಿದೆ. ಹಿಂಸೆ, ದ್ವೇಷ ಮತ್ತು ಮನುಷ್ಯರನ್ನೂ ಸೊತ್ತನ್ನೂ ಧ್ವಂಸಮಾಡುವ ಪ್ರವೃತ್ತಿಗಳು ತಾವೇ ತಾವಾಗಿರುವಾಗಲೂ ಅಹಿಂಸೆ ಮತ್ತು ಶಾಂತಿಯ ಅಭಿಲಾಷೆ ಸದಾ ಜಾಗ್ರತವಾಗಿದೆ. ವ್ಯಕ್ತಿ ರೋಗಗ್ರಸ್ತನಾಗಿರಬಹುದು; ಆದರೆ ಆರೋಗ್ಯಕ್ಕಾಗಿ ಅವನಲ್ಲಿ ಹಂಬಲ ಇದ್ದೇ ಇರುತ್ತದೆ. ಆದ್ದರಿಂದ ಸ್ವಾರ್ಥಕ್ಕಾಗಿ ಹಿಂಸೆ ಮತ್ತು ಧ್ವಂಸ ಕೈಕೊಳ್ಳುವ ಪ್ರವೃತ್ತಿ ಒಂದು ಬಗೆಯಲ್ಲಿ ಮನಸ್ಸಿನ ಅಸ್ವಸ್ಥತೆಯ ಲಕ್ಷಣ ಎನ್ನಬೇಕಾಗುತ್ತದೆ.

ಮನುಷ್ಯ ನಿಸರ್ಗದಿಂದ ಸುತ್ತುವರಿಯಲ್ಪಟ್ಟಿದ್ದಾನೆ; ಮನುಷ್ಯರ ನಡುವೆ ಬದುಕುತ್ತಿದ್ದಾನೆ; ನಿಸರ್ಗನಿಯಮಗಳಿಂದ ಬದ್ಧನಾಗಿದ್ದಾನೆ. ಆದ್ದರಿಂದ ನಿಸರ್ಗನಿಯಮಗಳಿಂದ ಉದ್ಭೂತವಾಗುವ ಶಕ್ತಿಗಳನ್ನೂ ಘಟನೆಗಳನ್ನೂ ಅವನು ಎದುರಿಸಬೇಕಾಗುತ್ತದೆ.

ನಮ್ಮ ದೃಷ್ಟಿಯಿಂದ ಜೀವನ–ಮರಣ, ಆರೋಗ್ಯ–ಅನಾರೋಗ್ಯ, ರಾತ್ರಿ–ಹಗಲು, ವೃದ್ಧಿ–ಹ್ರಾಸ ಇವೆಲ್ಲ ಪರಸ್ಪರ ವಿರುದ್ಧವೆನಿಸಿದರೂ ನಿಸರ್ಗದಲ್ಲಿ ಇವೆಲ್ಲ ಸ್ವಾಭಾವಿಕವಾದವುಗಳೇ. ಸುಳಿಗಾಳಿ ಅತಿವೃಷ್ಟಿಗಳೂ ನಿಸರ್ಗಕ್ಕೆ ಹಿತವಾದ ಮಳೆಯಷ್ಟೇ ಸಹಜವಾಗಿವೆ. ಈ ದ್ವಂದ್ವಗಳ ವಿಷಯದಲ್ಲಿ ನಿಸರ್ಗ ತಟಸ್ಥವಾಗಿರುವಂತೆ ಕಾಣುತ್ತದೆ. ಹುಟ್ಟು, ಬೆಳವಣಿಗೆಗಳನ್ನು ಪ್ರೇರಿಸುವ ಶಕ್ತಿಗಳಷ್ಟೇ ನಾಶವನ್ನು ತರತಕ್ಕ ಶಕ್ತಿ

ಮತ್ತು ನಿಯಮಗಳೂ ನಿಸರ್ಗಕ್ಕೆ ಸ್ವಾಭಾವಿಕ ಪಾದಪುಗಳು.

ನಿಸರ್ಗದ ರೀತಿಯಲ್ಲಿ ಸೃಷ್ಟಿ-ಸಂಹಾರಗಳ ಅನಂತವಾದ ಸರಪಳಿ ಹಣೆದುಕೊಂಡಿದೆ. ಈ ಕ್ರಮವೂ ನಿರ್ಮಾಣ ವಿನಾಶಗಳೆಂದ ಕೂಡಿದ ಶಕ್ತಿಗಳೂ ಮನುಷ್ಯನನ್ನು ಸದಾ ಎದುರಿಸಿವೆ. ಹುಟ್ಟಿನೊಡನೆಯೇ ಮನುಷ್ಯನ ಸಾವೂ ಅಸ್ತಿತ್ವಕ್ಕೆ ಬಂದಿದೆ. ಅವನ ಆರೋಗ್ಯ ಅನಾರೋಗ್ಯಗಳೂ ಹಾಗೆಯೇ.

ಈ ನಿರ್ಮಾಣ ವಿನಾಶಗಳ ನಡುವೆ, ಅವುಗಳಿಗೆ ಅಧೀನನಾಗಿ, ಇದ್ದರೂ ಮನುಷ್ಯ ವಿಚಾರಶೀಲ ಜೀವಿಯಾಗಿರುವುದರಿಂದ ಈ ದ್ವಂದ್ವದಲ್ಲಿ ಒಂದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ ಅವನಿಗಿದ್ದರೆ ಅವನು ಯಾವ ಶಕ್ತಿಯನ್ನು ಬೆಂಬಲಿಸಬೇಕು? ನಿಸರ್ಗದ ನಿರ್ಮಾಣ ಶಕ್ತಿಗಳೊಡನೆ ಸೇರಬೇಕು ಎಂಬ ಉತ್ತರ ಸ್ಪಷ್ಟವೂ ನಿರ್ವಿವಾದವೂ ಆಗಿದೆ ತಾನೆ. ಅವನು ಬದುಕಿ ಬೆಳೆದು ಸಮೃದ್ಧಿ ಕಾಣಬೇಕಾದರೆ ನಿರ್ಮಾಣ ಮಾರ್ಗದಲ್ಲಿ ತನ್ನ ಯತ್ನಗಳನ್ನು ಸಾಗಿಸಬೇಕಲ್ಲವೇ? ಅವನು ಸಾವನ್ನಲ್ಲ ಜೀವನವನ್ನು, ರೋಗವನ್ನಲ್ಲ ಆರೋಗ್ಯವನ್ನು ಬೆಂಬಲಿಸಬೇಕು.

ಸ್ಥೂಲ ಶಾರೀರಿಕ ಮಟ್ಟದಲ್ಲೇ ಮನುಷ್ಯ ಆರೋಗ್ಯಕ್ಕೆ ಪೋಷಕನಾಗಬೇಕೆಂದಾಗ ಅದಕ್ಕೂ ಸೂಕ್ಷ್ಮವೂ ಉನ್ನತತರವೂ ಆದ ಮಾನಸಿಕ ಮಟ್ಟದಲ್ಲಿ ವಿಚಾರಗಳ, ಭಾವನೆಗಳ, ಇಚ್ಛೆಯ ಮಟ್ಟದಲ್ಲಿ ಕೂಡ ಅದೇ ಮಾರ್ಗವನ್ನನುಸರಿಸಬೇಕೆಂಬುದು ಹೆಚ್ಚು ಅವಶ್ಯವಾಗುತ್ತದೆ. ಒಳಿತು-ಕೆಡುಕುಗಳಲ್ಲಿ, ನ್ಯಾಯಾನ್ಯಾಯಗಳಲ್ಲಿ, ಅಹಿಂಸೆ ಹಿಂಸೆಗಳಲ್ಲಿ, ಪ್ರೀತಿ-ದ್ವೇಷಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗಿಬಂದಾಗ ಆರೋಗ್ಯವನ್ನು, ಹಿತವಾದ ಬದುಕನ್ನು, ಶಾಂತವಾದ ಪ್ರಗತಿಯನ್ನು, ಸೌಹಾರ್ದದ ಆವರಣವನ್ನು ನಿರ್ಮಿಸಲು ಪೋಷಕವಾದವನ್ನೇ ಆತ ಆರಿಸಿಕೊಳ್ಳುವುದು ಕ್ರಮಪ್ರಾಪ್ತವಾಗುತ್ತದೆ.

ಇತರರನ್ನು ನೋಯಿಸುವುದು ಅಥವಾ ನಾಶ ಮಾಡುವುದು, ಸೊತ್ತನ್ನು ಧ್ವಂಸ ಮಾಡುವುದು—ಇದೇ ಹಿಂಸೆ. ಮತ್ತಾವುದಕ್ಕಿಂತಲೂ ತನ್ನ ಹಿತವೇ ಮೇಲು ಎಂಬ ಮನೋವೃತ್ತಿ ಇದರ ಹಿಂದಿರುತ್ತದೆ. ದ್ವೇಷ, ಅಸೂಯೆಗಳು ಹಿಂಸಾಬುದ್ಧಿಯ ಅಂಶಗಳಾಗಿದ್ದು ಅವು ಒಂದು ವಿಧದ ಮಾನಸಿಕ, ನೈತಿಕ ರೋಗದ ಬಾಹ್ಯ ಲಕ್ಷಣಗಳಾಗಿವೆ. ಇದೊಂದು ರೋಗವೆಂದಮೇಲೆ ಅದರ ಮೂಲ ಶೋಧನೆ ಮಾಡಿ ರೋಗ ನಿದಾನವನ್ನು ಕೈಕೊಂಡು ರೋಗದ ಪರಿಹಾರೋಪಾಯವನ್ನು ಯೋಜಿಸಬೇಕಲ್ಲದೆ ಬರೇ ಲಕ್ಷಣಗಳ ಉಪಶಮನವನ್ನಲ್ಲ.

---

ನಾವು ನಮ್ಮ ಸಮಾಜವನ್ನು ಬುದ್ಧಿಪೂರ್ವಕವಾಗಿ ಅಹಿಂಸೆಯ ತಳಹದಿಯ ಮೇಲೆ ಕಟ್ಟದಿದ್ದರೂ ಇಂದಿಗೂ ಜಗತ್ತಿನಲ್ಲೆಲ್ಲ ಮಾನವಕುಲ ಜೀವಿಸಿರುವುದೂ ಮನುಷ್ಯನು ತನ್ನ ಸೊತ್ತು ಸಂಪತ್ತುಗಳನ್ನು ಉಳಿಸಿಕೊಂಡಿರುವುದೂ ಪರಸ್ಪರ ಸಹನೆಯಿಂದಲೇ ಎಂದು ನಾನು ಹೇಳುತ್ತೇನೆ. ಮನುಷ್ಯರು ಹೀಗೆ ಮಾಡಿರದಿದ್ದರೆ ಇಂದು ಅತ್ಯಂತ ಉಗ್ರರಾದ ಕೆಲ ಜನರಷ್ಟೇ ಭೂಮಿಯ ಮೇಲೆ ಉಳಿದಿರುತ್ತಿದ್ದರು. ಆದರೆ ಹಾಗಾಗಿಲ್ಲ. ಕುಟುಂಬಗಳು ಪ್ರೇಮಬಂಧನದಿಂದ ಒಂದಾಗಿ ನಿಬದ್ಧವಾಗಿವೆ; ಹಾಗೆಯೆ ನಾವು ಗುಂಪುಗಳಾಗಿ ಹೆಣೆದು ನಾಗರಿಕ ಸಮಾಜ ಎಂದು ಕರೆಯಲ್ಪಡುವ ರಾಷ್ಟ್ರಗಳಾಗಿದ್ದೇವೆ. ಆದರೆ ಈ ರಾಷ್ಟ್ರಗಳು ಅಹಿಂಸಾ ಧರ್ಮದ ಪಾರಮ್ಯವನ್ನು ಮನಗಾಣುತ್ತಿಲ್ಲ ಅಷ್ಟೆ.

—ಮಹಾತ್ಮಾ ಗಾಂಧಿ

ಹಿಂಸೆ ಮತ್ತು ಹಿಂಸಾಪ್ರವೃತ್ತಿಯ ಮೂಲವೇನು? ಅದರ ಬೇರು ಮನುಷ್ಯನ ಮನಸ್ಸಿನ ತಳದಲ್ಲಿ ಅಡಗಿದೆ. ಶಾಂತಿಮಯ ಉಪಾಯಗಳೂ ಅಹಿಂಸೆಯೂ ಹಿತಕರವೆಂದು ಅವನು ಇಂದು ಕಂಡುಕೊಂಡಿದ್ದರೂ ಈ ಬೇರು ಸಜೀವವಾಗಿಯೇ ಉಳಿದಿದೆ. ಎಲ್ಲ ನಾಗರಿಕತೆ ಮತ್ತು ಸಂಸ್ಕೃತಿಯ ಹಾಗೆ ಹಿಂಸೆಯಿಂದ ಅಹಿಂಸೆಯ ಕಡೆ ಮನುಷ್ಯನ ಕ್ರಮಣವೂ ಉತ್ಕ್ರಾಂತಿಯ ಕ್ರಮವಾಗಿದೆ. ಕ್ರೈಸ್ತ ತತ್ವಗಳಿಂದ ಪ್ರೇರಿತವಾಗಿರುವ ಪಾಶ್ಚಾತ್ಯ ಪ್ರಪಂಚದಲ್ಲಿ ಅಹಿಂಸಾ ಪರಂಪರೆಯ ಹೆಜ್ಜೆಗಳನ್ನು ವೀಕ್ಷಿಸುವುದಾದರೆ ಉತ್ತರೋತ್ತರವಾದ ಬದಲಾವಣೆಯಾಗುತ್ತ ಕೊನೆಗೆ ಅದು ಹಿಂಸಾಬುದ್ಧಿಯ ಮೂಲಕ್ಕೇ ಬಂದು ತಲುಪಿದ್ದನ್ನು ಕಾಣುತ್ತೇವೆ. ಇದನ್ನು ಕಂಡುಹಿಡಿದೊಡನೆ ಮನುಷ್ಯನ ಬುದ್ಧಿಯನ್ನು ಹಿಂಸೆಯಿಂದ ಅಹಿಂಸೆ ಅಥವಾ ಪ್ರೇಮದತ್ತ ತಿರುಗಿಸುವ ವಿಧಿಗಳನ್ನು ವಿಧಿಸಿದ್ದಾಗಿದೆ. ಪ್ರೇಮವೆಂಬುದು ಅಹಿಂಸೆಯದೇ ಕ್ರಿಯಾತ್ಮಕ ಸ್ವರೂಪ.

ಪೆಟ್ಟಿಗೆ ಪೆಟ್ಟು, ಜೀವಕ್ಕೆ ಜೀವ, ಎಂಬುದು ಒಂದಾನೊಂದು ಕಾಲದ ನೀತಿಯಾಗಿತ್ತು. ಆದ್ದರಿಂದ "ಕೊಲಬೇಡ" ಎಂಬುದೇ ಪ್ರಪ್ರಥಮ ವಿಧಿಯಾಯಿತು. ಈ ವಿಧಿ ಮೊಟ್ಟಮೊದಲು ನಿರೂಪಿಸಲ್ಪಟ್ಟಾಗ ಕಲ್ಪನಾತೀತವೆನಿಸುವಷ್ಟು ಹೊಸದಾಗಿ ಕಾಣಿಸಿರಬಹುದು. ಆದರೆ ಅದೂ ಸಾಲಲಿಲ್ಲ; ಕೊಲ್ಲುವುದಕ್ಕೆ ಪ್ರೇರಣೆ ದ್ವೇಷಾಸೂಯೆಗಳಿಂದಲೂ ದ್ವೇಷಪಾತ್ರವಾದದ್ದನ್ನು ನಾಶ ಮಾಡಬೇಕೆಂಬ ಗಾಢ ಇಚ್ಛೆಯಿಂದಲೂ ಬರುತ್ತದೆ ಎಂದು ಕಂಡುಬಂತು. ಆದ್ದರಿಂದ "ದ್ವೇಷಿಸಬೇಡ" ಎನ್ನುವುದು ಎರಡನೆಯ ವಿಧಿಯಾಯಿತು. ಆದರೆ ಅದೂ ಸಾಲದಾಯಿತು; ಏಕೆಂದರೆ ಆವೆರಡೂ ನಿಷೇಧಾತ್ಮಕವಾಗಿವೆ. ಈ ಪ್ರಕಾರ "ಪ್ರೀತಿಸು" ಎಂಬ ಕೊನೆಯ ಆಜ್ಞೆ ಹುಟ್ಟಿಕೊಂಡಿತು. ಇದು ವಿಧ್ಯಾತ್ಮಕವಾದ ಆಜ್ಞೆ. ಹಿಂಸೆಯ ಮೂಲವನ್ನೇ ಕಿತ್ತುಹಾಕುವುದು ಇದರ ಉದ್ದೇಶ.

ಹಾಗೆಯೇ ಪೌರಸ್ತ್ಯ ಪ್ರಪಂಚದಲ್ಲಿ ಪ್ರತಿಪಾದಿತವಾಗಿರುವ ಅಹಿಂಸಾ ತತ್ವವು ಮನೋವಾಕ್ ಕಾರ್ಯಗಳಿಂದ ಹಿಂಸೆಯನ್ನು ತ್ಯಜಿಸಬೇಕೆಂದೂ ಒಳ್ಳಿದನಾಗಿರಬೇಕು ಒಳಿತನ್ನು ಮಾಡಬೇಕೆಂದೂ ಉಭಯ(ವಿಧಿ–ನಿಷೇಧ)ವ್ಯಾಪಿ ಆಜ್ಞೆಯನ್ನು ನೀಡುತ್ತದೆ. ಇದು ಕೂಡ ಹಿಂಸೆಯ ಮೂಲವನ್ನೇ ಛೇದಿಸುವ ಮಾರ್ಗವಾಗಿದೆ.

ಇಂದು ಜಗತ್ತು, ವಿಶೇಷವಾಗಿ ವಿಚಾರಪ್ರಧಾನವಾಗಿ ವಿಕಾಸಗೊಂಡ ಮಾನವಪ್ರಪಂಚ, ಹಿಂಸೆಯೆಂಬುದು ಯಾವ ರೂಪದಲ್ಲಿದ್ದರೂ ಬರ್ಬರವೇ ಎಂದು ಕಂಡುಕೊಂಡಿದೆ. ಅಹಿಂಸಾತ್ಮಕವೂ ಶಾಂತಿಯುತವೂ ಆದ ಕ್ರಮಗಳಿಂದಲೇ ಎಲ್ಲ ವಿವಾದಗಳನ್ನು ಬಗೆಹರಿಸಿಕೊಳ್ಳಬೇಕೆಂದೂ ಅದಕ್ಕೆ ಗೊತ್ತಾಗಿದೆ. ಆದರೂ ಮನುಷ್ಯನ ಒಳಗಿರುವ ಪಶು ಇನ್ನೂ ಸಜೀವವಾಗಿದೆ. ಮನಸ್ಸು, ಪ್ರಾಣ, ಶರೀರಗಳ ಪ್ರಾಕೃತ ಸ್ವಭಾವ ಬದಲಾಗಿಲ್ಲ. ಇದೊಂದು ತಾತ್ಕಾಲಿಕ ಆತಂಕವಾಗಿದ್ದು, ಅಹಿಂಸೆಯೊಂದು ಕಲ್ಪನೆ ಅಥವಾ ಕನಸು ಎನಿಸದೆ ಜೀವನಧರ್ಮವಾದರೆ ಮನುಷ್ಯಕುಲದ ಐಕ್ಯವನ್ನೂ ಸಾರ್ವತ್ರಿಕ ಹಿತವನ್ನೂ ಸಾಧಿಸಬಲ್ಲದು. ✡



ಬ್ರಹ್ಮಜ್ಞಾನವೊಂದನ್ನುಳಿದು ಮಿಕ್ಕೆಲ್ಲ ಜ್ಞಾನವನ್ನು ಸಂಪಾದಿಸಿದ್ದರೂ ಅಂಥ ವ್ಯಕ್ತಿ ಅಸುಖಿ; ಮತ್ತೇನೂ ತಿಳಿಯದೆ ದೇವರನ್ನು ಮಾತ್ರ ಅರಿತಿದ್ದರೂ ಸಾಕು, ಅಂಥವನು ಸದಾ ಸುಖಿ.

—ಸೇಂಟ್ ಅಗಸ್ಟೈನ್

**ಪ್ರಶ್ನೆ:** ಕಳೆದ ವರ್ಷ ಏಪ್ರಿಲ್ ತಿಂಗಳಿಂದ ವೈದ್ಯಕೀಯ ಕ್ರಮಗಳ ಮೂಲಕ ಗರ್ಭಪಾತವನ್ನು ಸುಲಭಗೊಳಿಸುವ ಕಾನೂನು ಜಾರಿಗೆ ಬಂದದ್ದು ತಮಗೆ ಗೊತ್ತಿದೆ. ಈ ಬದಲಾವಣೆಯಿಂದ ಗರ್ಭಪಾತಕ್ಕಿರುವ ಕಾನೂನು ನಿರ್ಬಂಧಗಳು ಯಾವ ರೀತಿಯಲ್ಲಿ ಸಡಿಲವಾಗಿವೆ?

**ಉತ್ತರ:** ಹಿಂದಿನ ಕಾನೂನುಗಳ ಪ್ರಕಾರ ಗರ್ಭಪಾತಕ್ಕೆ ಅನೇಕ ನಿರ್ಬಂಧಗಳಿದ್ದವು. ಗರ್ಭ ಬೆಳೆದು ಪ್ರಸವವಾಗುವುದಾದರೆ ತಾಯಿಯ ಜೀವಕ್ಕೆ, ಅಥವಾ ಆರೋಗ್ಯಕ್ಕೆ ಗಂಭೀರವಾದ ಅಪಾಯವಿದೆಯೆಂದು ಡಾಕ್ಟರರಿಗನಿಸಿದರೆ ಗರ್ಭಪಾತ ಮಾಡಬಹುದಿತ್ತು. ಸಾಮಾನ್ಯವಾಗಿ ಅನೇಕ ಹೃದಯರೋಗ, ರಕ್ತದ ಅತಿ ಒತ್ತಡ– ಇಂಥಾ ರೋಗಗಳಿಂದ ಬಳಲುತ್ತಿದ್ದರೆ ಡಾಕ್ಟರರು ಗರ್ಭಪಾತವನ್ನು ಕೈಕೊಳ್ಳುತ್ತಿದ್ದರು. ಅಥವಾ ಆ ಕುಟುಂಬದಲ್ಲಿ ಬಹಳ ಕಾಲದಿಂದ ಪೆದ್ದು (imbecile) ಸಂತಾನ ಆಗುತ್ತ ಬಂದಿದ್ದು ಈ ಗರ್ಭವೂ ಅಂಥದೇ ಆಗಬಹುದೆಂದು ಡಾಕ್ಟರರಿಗೆ ಅನಿಸಿದರೆ ಆಗಲೂ ಗರ್ಭಪಾತಕ್ಕೆ ಎಡೆಯಿತ್ತು. ಈ ಅಪಾಯವನ್ನು ಕುರಿತು ಮೂವರು ಅಥವಾ ಕನಿಷ್ಠ ಇಬ್ಬರು ಡಾಕ್ಟರರು ಏಕಮತದಿಂದ ತೀರ್ಮಾನಿಸುವುದು ಕಾನೂನು ದೃಷ್ಟಿಯಿಂದ ಅವಶ್ಯವಾಗಿತ್ತು. ಈಗ ಈ ಕೆಳಗಿನ ಕಾರಣಗಳಿಗಾಗಿ ಗರ್ಭಪಾತ ಮಾಡಿಸಬಹುದಾಗಿದೆ: (೧) ಗರ್ಭಿಣಿಯ ಜೀವಕ್ಕೆ ಅಪಾಯ; (೨) ಅವಳ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಧಕ್ಕೆ ಬರುವ ಸಂಭವ; (೩) ಹುಟ್ಟಬಹುದಾದ ಮಗು ಗಂಭೀರವಾದ ಮಾನಸಿಕ ಅಥವಾ ಶಾರೀರಿಕ ವಿಕಾರದಿಂದ ಬಳಲಬಹುದೆಂಬ ಭಯ; (೪) ಬಲಾತ್ಕಾರ ಸಂಭೋಗದಿಂದ ಗರ್ಭ ನಿಂತಿರುವುದು; (೫) ಗರ್ಭ ನಿರೋಧಕ ಉಪಾಯಗಳು ವ್ಯರ್ಥವಾಗಿ ಗರ್ಭ ನಿಂತಿರುವುದು; ಮತ್ತು (೬) ಗರ್ಭ ಮುಂದುವರಿದರೆ ಗರ್ಭಿಣಿಯ ಆರೋಗ್ಯಕ್ಕೆ ಅಪಾಯವಾಗುವ ಸಂಭವ. ಇದನ್ನು ನಿರ್ಣಯಿಸುವಾಗ ಗರ್ಭಿಣಿಯ "ಸದ್ಯದ ಮತ್ತು ಭಾವಿ ಪರಿಸರ"ವನ್ನು ಗಮನದಲ್ಲಿಟ್ಟುಕೊಳ್ಳಬಹುದು. ಈ ಕಾರಣಗಳು ಎಷ್ಟು ವಿಸ್ತಾರವಾಗಿವೆಯೆಂದರೆ ಯಾರು ಬೇಕಾದರೂ ಯಾವಾಗ ಬೇಕಾದರೂ ಗರ್ಭಪಾತ ಮಾಡಿಸಿಕೊಳ್ಳಬಹುದು ಎಂದು ಅನುಮತಿ ಕೊಟ್ಟಹಾಗಾಗಿದೆಯೆಂದು ನಿಮಗೇ ತಿಳಿದೀತು. ಇಬ್ಬರು ಡಾಕ್ಟರರು ಇದಕ್ಕೆ ಒಪ್ಪಿದರೆ ಈಗ ಸಾಲುತ್ತದೆ. ಒಟ್ಟಿಗೆ ಈ ಗರ್ಭಪಾತ ಕಾನೂನು ಜನಸಂಖ್ಯಾನಿಯಂತ್ರಣಕ್ಕಾಗಿಯೇ ಬಂದಿದೆ ಎಂದು ಎಲ್ಲರೂ ಮುಕ್ತ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ.



# ಗರ್ಭಪಾತ ಸಮಸ್ಯೆ ಸರಳವಾಗಿಲ್ಲ

**ಪ್ರಶ್ನೆ:** ಹೀಗೆ ಸುಲಭ ಗರ್ಭಪಾತ ಲಭ್ಯವಾಗಿರುವುದರಿಂದ ಗರ್ಭಪಾತಕ್ಕಾಗಿ ಡಾಕ್ಟರರಿಗೆ ದುಂಬಾಲು ಬೀಳುವವರ ಸಂಖ್ಯೆ ಹೆಚ್ಚಾಗಿದೆಯೆಂದು ತಮಗನಿಸುತ್ತದೆಯೋ, ಡಾಕ್ಟರ್?

ಉತ್ತರ: ನಾನು ಹೇಳಲಾರೆ. ಏಕೆಂದರೆ ನಾನೂ ನಾನು ಕೆಲಸ ಮಾಡುತ್ತಿರುವ ಆಸ್ಪತ್ರೆಯೂ ಮೊದಲಿಂದಲೂ ಸ್ವಲ್ಪ ಸಾಂಪ್ರದಾಯಿಕ ನೀತಿಯನ್ನನುಸರಿಸುತ್ತಿದ್ದೇವೆ. ಈಗಲೂ ಹಾಗೆಯೆ. ಆದ್ದರಿಂದ ನಮ್ಮ ಕಡೆ ಈ ಬಗೆಯ ಕೇಳಿಕೆಗಳು ಬರುವುದೇ ಅಪರೂಪ. ಕಾನೂನು ಸಡಿಲಾಗಿರುವುದರಿಂದ ಇಂದಲ್ಲ ನಾಳೆ ಇಂಥ ಒತ್ತಾಯಗಳು ಡಾಕ್ಟರರ ಮೇಲೆ ಬರುವ ಮತ್ತು ನೈತಿಕ ಪರಿಣಾಮಗಳ ಬಗ್ಗೆ ತಮಗೇನನಿಸುತ್ತದೆ?

ಉತ್ತರ: ನಾನು ಮೊದಲೇ ಹೇಳಿದಂತೆ ನಾನು ಹಳೇ ವಿಚಾರದವಳು. ನೀತಿಯ ವಿಷಯ ಹೇಳಬೇಕೆಂದರೆ, ನೀತಿಯ ಕಲ್ಪನೆಯೇ ಈಗ ಬದಲಾಗಿದೆಯೆಲ್ಲವೆ? ಗರ್ಭನಿರೋಧದ ಸುಲಭೋಪಾಯಗಳು ಲಭ್ಯವಾದಂದಿನಿಂದಲೂ ಲೈಂಗಿಕ ಸಂಯಮ ಇಳಿಮುಖವಾಗಿದೆ. ಈಗ

---

೧೯೭೨ ಏಪ್ರಿಲ್ ೧ರಿಂದ ಭಾರತದಲ್ಲಿ ವೈದ್ಯರು ಗರ್ಭಪಾತ ಮಾಡಿಸುವುದಕ್ಕಿದ್ದ ಅನೇಕ ನಿರ್ಬಂಧಗಳನ್ನು ಸಡಿಲುಗೊಳಿಸುವ ಕಾನೂನನ್ನು ಜಾರಿಗೆ ತರಲಾಯಿತು. ಬದಲಾದ ಸಾಮಾಜಿಕಾರ್ಥಿಕ ಪರಿಸರದಿಂದಾಗಿ ಇಂಗ್ಲಂಡನ್ನೊಳಗೊಂಡು ಅನೇಕ ದೇಶಗಳಲ್ಲಿ ತಂದೆ-ತಾಯಂದಿರಿಗೆ ಬೇಡವಾದ ಗರ್ಭವನ್ನು ತೆಗೆಸಿಬಿಡುವುದಕ್ಕೆ ಕಾನೂನಿನಿಂದ ಅನುಕೂಲ ಮಾಡಿಕೊಡಲಾಗಿದೆಯೆಂಬುದು ನಿಜ. ವಿಶೇಷವಾಗಿ ಭಾರತದಲ್ಲಿ ಭರದಿಂದ ಬೆಳೆಯುತ್ತಿರುವ ಜನಸಂಖ್ಯೆಯನ್ನು ಹಿಡಿತಕ್ಕೆ ತರುವುದಕ್ಕೆ ಇದೂ ಒಂದು ಉಪಾಯವೆಂಬ ಇರಾದೆಯಿಂದ ಗರ್ಭಪಾತಕ್ಕೆ ಪ್ರೋತ್ಸಾಹ ಕೊಡಲಾಗುತ್ತಿದೆ. ಅನೇಕ ಪ್ರಸಿದ್ಧ ವೈದ್ಯರೂ ಸಮಾಜಶಾಸ್ತ್ರಿಗಳೂ ಇದಕ್ಕೆ ಅನುಕೂಲವಾಗಿದ್ದಾರೆ. ಆದರೆ ವೈದ್ಯಕೀಯ ದೃಷ್ಟಿಯಿಂದ, ಅನಿರ್ಬಂಧವಾದ ದೊಡ್ಡ ಪ್ರಮಾಣದ ಗರ್ಭಪಾತ— ಅದೂ ನಮ್ಮ ದೇಶದ ಪರಿಸರದಲ್ಲಿ— ಎಷ್ಟು ಸಾಧು? ಅದರಲ್ಲಿ ಗಂಡಾಂತರಗಳುಂಟೆ? ಈ ವಿಷಯದಲ್ಲಿ ವಹಿಸತಕ್ಕ ಮುಂಜಾಗ್ರತೆಗಳೇನು? ಎಂಬ ಪ್ರಶ್ನೆಗಳು ಏಳುತ್ತವೆ.

ಕಳೆದ ೨೧ ವರ್ಷಗಳಿಂದ ಹುಬ್ಬಳ್ಳಿಯಲ್ಲಿ ಹಿರಿಯ ಡಾಕ್ಟರರೂ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರೂ ಆಗಿ ಹೆಸರು ಗಳಿಸಿರುವ **ಡಾ. ಶ್ರೀಮತಿ ಎಸ್. ಎಮ್. ಕಲ್ಯಾಣಪುರ,** ಎಂ. ಡಿ., ಅವರೊಡನೆ 'ಕಸ್ತೂರಿ'ಯ ಪ್ರತಿನಿಧಿ ಸಂದರ್ಶನ ತೆಗೆದುಕೊಂಡದ್ದರ ಫಲವಾಗಿ ಈ ಲೇಖನ ರೂಪುಗೊಂಡಿದೆ.

ಒಂದೆಡೆ ಮಕ್ಕಳು ಬೇಡವೆಂದು ಗರ್ಭಪಾತಕ್ಕೆ ಚಡಪಡಿಸುತ್ತಿರುವಾಗ ಇನ್ನೊಂದೆಡೆ ಮಕ್ಕಳಾಗದೆ ಜೀವನವೇ ಶೂನ್ಯವೆಂಬ ಭಾವದಿಂದ ಕೊರಗುತ್ತಿರುವವರ ಸಮಸ್ಯೆ ಇದೆ. ಇಂಥ ಒಂದು ಇಂಗ್ಲಿಷ್ ದಂಪತಿಗಳ ಅನುಭವವನ್ನು ಈ ಲೇಖನದ ಜೊತೆಗೆ (ಪುಟ ೨೭) ಕೊಟ್ಟಿದ್ದೇವೆ.

---

ಸಂಭವ ಹೆಚ್ಚಾಗುವುದು ಅನಿವಾರ್ಯವೆಂದು ತೋರುತ್ತದೆ. ಆದರೂ ಈಚೆಗೆ ನಾನು ಓದಿದ ಒಂದು ವರದಿಯ ಮೇರೆಗೆ, ಈ ವರ್ಷದಲ್ಲಿ ನಿರೀಕ್ಷಿಸಿದಷ್ಟು ಗರ್ಭಪಾತಗಳಾಗಲಿಲ್ಲವೆಂದು ಈ ವಿಷಯದಲ್ಲಿ ಉತ್ಸುಕರಾಗಿದ್ದ ಕೆಲ ಡಾಕ್ಟರರು ನಿರಾಶೆ ವ್ಯಕ್ತಪಡಿಸಿದ್ದಾರೆ.

ಪ್ರಶ್ನೆ: ತಮ್ಮ ಅಭಿಪ್ರಾಯದಲ್ಲಿ ಈ ಬದಲಾವಣೆ ಹಿತಕರವಾಗಿದೆಯೆ? ಇದರ ಸಾಮಾಜಿಕ

ಯಾವ ಭಯವೂ ಇಲ್ಲದೆ ವಿವಾಹಪೂರ್ವ ಮತ್ತು ವಿವಾಹಬಾಹ್ಯ ಸಂಬಂಧಕ್ಕೆ ಬಾಗಿಲು ತೆರೆದಿಟ್ಟಂತಾಗಿದೆ. ಆದರೂ ನಾನು ಇದರಲ್ಲಿ ಒಂದು ಹಿತವನ್ನು ಕಾಣುತ್ತೇನೆ. ಈ ಹಿಂದೆ ಕಾಲು ಜಾರಿದ ಹೆಂಗಸರೂ ಮಕ್ಕಳು ಬೇಡವೆನ್ನುವ ದಂಪತಿಗಳೂ ಗುಪ್ತವಾಗಿ, ತಕ್ಕ ವೈದ್ಯಕೀಯ ಅರ್ಹತೆ ಇಲ್ಲದ ಠಕ್ಕ ವೈದ್ಯರನ್ನಾಗಲಿ ವೈದ್ಯಧರ್ಮ ಲೆಕ್ಕಿಸದ ವೈದ್ಯರನ್ನಾಗಲಿ

ಆಶ್ರಯಿಸುತ್ತಿದ್ದರು. ಅದರಲ್ಲಿ ಪ್ರಾಣಾಪಾಯ ಮತ್ತು ಆರೋಗ್ಯಕ್ಕೆ ಶಾಶ್ವತ ಧಕ್ಕೆ ಆಗುವ ಸಾಧ್ಯತೆ ಹೆಚ್ಚಾಗಿತ್ತು. ಈಗ ನಿರ್ಬಂಧ ದೂರ ವಾಗಿರುವುದರಿಂದ ಜನರು ಅರ್ಹತೆಯುಳ್ಳ ಡಾಕ್ಟರರ ಕಡೆಗೆ ಹೋಗುವರೆಂದು ನಿರೀಕ್ಷಿಸ ಬಹುದು.

**ಪ್ರಶ್ನೆ :** ಅವಿವಾಹಿತ ಗರ್ಭಿಣಿಯರು ಸ್ವಂತ ಇಚ್ಛೆಯಿಂದ ಇಂದು ಗರ್ಭಪಾತ ಮಾಡಿಸಿಕೊಳ್ಳ ಬಹುದೆ ?

**ಉತ್ತರ:** ಹೊಸ ಕಾನೂನಿನ ಪ್ರಕಾರ ಇದಕ್ಕೇನೂ ಆತಂಕವಿಲ್ಲ. ಕಾನೂನಿನಲ್ಲಿ ಘಂಟಾ ಘೋಷವಾಗಿ ಅಲ್ಲದಿದ್ದರೂ ಗರ್ಭಿತವಾಗಿ ಹೀಗೇ ಹೇಳಲಾಗಿದೆ ಎನಿಸುತ್ತದೆ. ಸರಕಾರಿ ನಿಯಂತ್ರಣ ದಲ್ಲಿರುವ ಆಸ್ಪತ್ರೆಗಳಿಂದ ನಾನು ಕೇಳಿದ ಸುದ್ದಿಯೆಂದರೆ, ಗರ್ಭಪಾತದ ಬಗ್ಗೆ ಸಂಪೂರ್ಣ ಗೋಪ್ಯವನ್ನು ಕಾಯ್ದುಕೊಳ್ಳುವ ಸಲುವಾಗಿ ಈ ಕೇಸುಗಳಲ್ಲಿ ಹೆಸರು, ವಿಳಾಸಗಳನ್ನು ದಾಖಲೆ ಮಾಡಿಕೊಳ್ಳದೆ "ರೋಗಿ"ಗಳಿಗೆ ಕೇವಲ ಕೋಡ್ ನಂಬರುಗಳನ್ನು ಕೊಡಲಾಗುತ್ತಿದೆಯಂತೆ. ಯಾರೂ ಯಾವ ಇಕ್ಕಟ್ಟಿನ ಪ್ರಶ್ನೆಗಳನ್ನೇ ಕೇಳುವುದಿಲ್ಲ ಅಂದ ಹಾಗಾಯ್ತು. ಅವಿವಾಹಿತ ಏಕೆ, ವಿವಾಹಿತ ತರುಣಿ ಕೂಡ, ಚುರುಕಾಗಿದ್ದರೆ, ಗಂಡನಿಗಾಗಲಿ ಅವನ ಸಂಬಂಧಿಕರಿಗಾಗಲಿ ಗೊತ್ತಾಗದಂತೆ ಗರ್ಭಪಾತ ಮಾಡಿಸಿಕೊಳ್ಳುವುದು ಸುಗಮವಾಗಿದೆ.

**ಪ್ರಶ್ನೆ :** ಗರ್ಭನಿರೋಧದ ಉಪಾಯ ವೆಂಬ ದೃಷ್ಟಿಯಿಂದ, ಗರ್ಭನಿರೋಧದ ಕೃತಕ ಯಾಂತ್ರಿಕ ಸಾಧನಗಳು, ಗುಳಿಗೆಗಳು ಮತ್ತು ಗರ್ಭಪಾತ— ಇವುಗಳಲ್ಲಿ ಯಾವುದು ಹೆಚ್ಚು ಅಪಾಯಕರ, ಯಾವುದು ಕಮ್ಮಿ ಅಪಾಯಕರ ?

**ಉತ್ತರ :** ಮೂರರಲ್ಲಿಯೂ ಅದರದರದೇ ಅಪಾಯವಿದೆ. ಯಾಂತ್ರಿಕ ಸಾಧನಗಳ ಪೈಕಿ ಗರ್ಭಕೋಶದ ವಂಕಿ ನನ್ನ ಅನುಭವ ಪ್ರಕಾರ ಅನೇಕ ಪ್ರಕರಣಗಳಲ್ಲಿ ರಕ್ತಸ್ರಾವ ಮೊದಲಾದ ತೊಡಕುಗಳನ್ನುಂಟುಮಾಡಿದೆ. ಸಂಪೂರ್ಣ ಸ್ವಚ್ಛವಾಗಿಟ್ಟುಕೊಳ್ಳದಿದ್ದರೆ ಇತರ ಬಾಹ್ಯ ಸಾಧನಗಳೂ ನಾನಾ ರೋಗಗಳಿಗೆ ಕಾರಣವಾಗ ಬಹುದು. ಗರ್ಭನಿರೋಧವ ಗುಳಿಗೆಗಳನ್ನು ವರ್ಷಾನುಗಟ್ಟಳೆ ಉಪಯೋಗಿಸಿದರೆ ಕ್ಯಾನ್ಸರ್ ಬರಬಹುದೆಂಬ ಭಯ ವ್ಯಕ್ತಗೊಳಿಸಲ್ಪಟ್ಟಿದೆ. ಈ ಭಯವನ್ನು ಯಾರೂ ಸಿದ್ಧಪಡಿಸಿ ತೋರಿಸಿಲ್ಲ; -ಭಯ ಇಲ್ಲವೆಂದೂ ತೋರಿಸಿಲ್ಲ. ಕೆಲ ಹೆಂಗಸರಿಗೆ ಈ ಗುಳಿಗೆಗಳ ಉಪಯೋಗದಿಂದ ಕೂದಲು ಉದುರಬಹುದು. ಇದಕ್ಕಿಂತಲೂ ಅಸ್ಥಿಗಳಿಂದ ಕ್ಯಾಲ್ಶಿಯಂ ಅಂಶ ನಷ್ಟವಾಗುತ್ತ ಹೋಗುವುದು, ಬೆನ್ನು ನೋವು, ಮೈ ಕೈ ನೋವು—ಈ ದೂರುಗಳು ನನ್ನ ಕಡೆ ಬಹಳ ವಾಗಿ ಬರುತ್ತಿವೆ. ಈಚೆಗೆ ನಾನು ಇಂಗ್ಲಂಡಿನ ಕೆಲ ಕುಟುಂಬ ಯೋಜನಾ ಕೇಂದ್ರಗಳಿಗೆ ಭೆಟ್ಟಿ ಕೊಟ್ಟಾಗ ಅಲ್ಲಿ ೩೫ ಮೀರಿದ ಹೆಂಗಸರಿಗೆ ಗುಳಿಗೆಗಳನ್ನು ಅವರು ಅಪರೂಪವಾಗಿಯೇ ಸೂಚಿಸುತ್ತಾರೆಂದು ತಿಳಿಯಿತು. ಗುಳಿಗೆ ತೆಗೆದು ಕೊಳ್ಳುವುದರಿಂದ ಅಭಿಧಮನಿಗಳ ರಕ್ತದಲ್ಲಿ ಚಿಕ್ಕ ಚಿಕ್ಕ ಗಡ್ಡೆಗಳಾಗಿ ಅವು ಹೃದಯಸ್ತಂಭನಕ್ಕಾಗಲಿ ಮಿದುಳಿನ ರಕ್ತನಾಳಗಳಲ್ಲಿ ಸಿಕ್ಕಿ ಪಕ್ಷಾಘಾತಕ್ಕಾಗಲಿ ಕಾರಣವಾಗಬಹುದೆಂದು ಭಯವೂ ಇದೆ. ಇಷ್ಟೆಲ್ಲ ಇದ್ದರೂ ಪುನಃ ಪುನಃ ಗರ್ಭಪಾತ ಮಾಡಿಸಿಕೊಳ್ಳುವುದು ಇವೆಲ್ಲವುಗಳಿಗಿಂತಲೂ ಅಪಾಯಕಾರಿಯಾಗಿದೆಯೆಂದು ನಾನು ನಿಸ್ಸಂದಿಗ್ಧವಾಗಿ ಹೇಳಬಲ್ಲೆ.

**ಪ್ರಶ್ನೆ :** ಗರ್ಭಪಾತ ಮಾಡುವುದೇ ಅವಶ್ಯ ಎಂದು ನಿಶ್ಚಯವಾದ ಮೇಲೆ ಅದಕ್ಕೆ ಶಸ್ತ್ರಕ್ರಿಯೆಯೇ ಏಕಮಾತ್ರ ಉಪಾಯವೋ ಅಥವಾ ಔಷಧೀಯ ಉಪಾಯಗಳೂ ಇವೆಯೋ?

**ಉತ್ತರ:** ಠಕ್ಕ ವೈದ್ಯರು ಕೆಲ ಔಷಧಿಗಳನ್ನು ಕೊಡುತ್ತಾರಂತೆ. ಆದರೆ ಇವು ನಿರುಪದ್ರವಿಯೂ ಅಲ್ಲ, ಫಲಕಾರಿಯಾಗುವುದೂ ವಿರಳ.

(೩೦ ನೆಯ ಪುಟಕ್ಕೆ)

# ಮಗು....ಮಗು....ಮಗು....

ಕೀಥ್ ಡಿಗ್ಲ

ತನಗೆ ಬೇಕೆನಿಸಿದಾಗ ಗರ್ಭಪಾತ ಮಾಡಿಸಿಕೊಳ್ಳುವುದು ಸ್ತ್ರೀಯ ಬಹುಮುಖ್ಯ ಹಕ್ಕೆಂದು ಸ್ತ್ರೀಸ್ವಾತಂತ್ರ್ಯದ ಪ್ರತಿಪಾದಕರು ಹೇಳುತ್ತಾರೆ. ಆದರೆ ಇದೇ ಸಮಸ್ಯೆಯ ಇನ್ನೊಂದು ಮುಖವನ್ನು ಯಾರೂ ಅಷ್ಟಾಗಿ ಗಮನಿಸುತ್ತಿರುವಂತೆ ತೋರುತ್ತಿಲ್ಲ. ಗರ್ಭಪಾತ ಒಂದು ಜೀವಿಯನ್ನು ಕೊಲ್ಲುವುದಕ್ಕೆ ಸಂಬಂಧಿಸಿದ್ದಾಯಿತು. ಆದರೆ ನಾನು ಹೇಳುತ್ತಿರುವುದು ಹೊಸ ಜೀವಿಯೊಂದನ್ನು ಸೃಷ್ಟಿಸುವುದಕ್ಕೆ ಸಂಬಂಧಿಸಿದ್ದು.

ಗರ್ಭಧಾರಣ ತೀರ ಸ್ವಾಭಾವಿಕ. ಆದರೆ ಅನಪೇಕ್ಷಿತವೂ ಅನಪೇಕ್ಷಣೀಯವೂ ಆದ ಗರ್ಭಧಾರಣವೊಂದು ಸಾಮಾಜಿಕ ಸಮಸ್ಯೆಯೆಂದು ತಿಳಿಯಲಾಗುತ್ತಿರುವುದು ಸರಿಯೇ. ಆದರೆ ಇದೇ ಸಮಸ್ಯೆಯ ಇನ್ನೊಂದು ಮುಖ ಸಂತಾನಶಕ್ತಿಹೀನತೆ. ಇದೂ ಅಷ್ಟೇ ಮಹತ್ವದ ಮತ್ತು ಸಂಬಂಧಪಟ್ಟವರಿಗೆ ಅಷ್ಟೇ ನೋವಿನ ಪ್ರಶ್ನೆ. ನನಗೆ ಅದರ ಅನುಭವವಿದೆ.

ಹೀಥರ್ ಮತ್ತು ನಾನು ಮದುವೆಯಾದುದು ೧೯೬೧ರಲ್ಲಿ. ನಾವಿಬ್ಬರೂ ಒಂದೇ ಕಾಲೇಜಿನಿಂದ ಹೊರಬಿದ್ದವರು. ಮದುವೆಯಾದಾಗ ನಮ್ಮ ಬಳಿ ಇದ್ದುದು ಬರಿ ೧೫ ಪೌಂಡುಗಳು (ಸುಮಾರು ೨೫೦ ರೂಪಾಯಿ). ಆಗ ಸಾಮಾನ್ಯವಾಗಿ ಉಳಿದೆಲ್ಲ ನವದಂಪತಿಗಳಂತೆಯೇ ನಾವು ಕೂಡ, ಹೊಸತಾಗಿ ನಾವು ಕಂಡುಕೊಂಡ ಸುಖಕ್ಕೆ ಅಡ್ಡಿಯಾಗಿ ನಮ್ಮ ಮಧ್ಯೆ ಯಾರೂ ಬರಕೂಡದೆಂದೇ ಬಯಸುತ್ತಿದ್ದೆವು. ಬೇಗ ಮಗುವಾಗಬಾರದೆಂದು ನಾವು ನಮಗೆ ತಿಳಿದ ಎಲ್ಲ ಬಗೆಯ ಎಚ್ಚರವನ್ನೂ ವಹಿಸಿದೆವು. ನಾವು ಮಜಾ ಮಾಡಿಕೊಂಡಿರಬೇಕು; ಭವಿಷ್ಯಜ್ಜೀವನಕ್ಕಾಗಿ ನಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಬೇಕು ಎಂಬುದಷ್ಟೇ ನಮ್ಮ ಕಣ್ಣೆದುರಿಗಿರುತ್ತಿತ್ತು. ಆಗ ಯಾರಾದರೂ ಮಗು ? ಎಂದು ಕೇಳಿದ್ದರೆ ಇಷ್ಟೇಕೆ ಅವಸರ? ಎಂದು ನಾವಿಬ್ಬರೂ ಪ್ರತಿಯಾಗಿ ಕೇಳುತ್ತಿದ್ದೆವು. ಮದುವೆಯಾದಾಗ ನನಗೆ ೨೩ ವರ್ಷಗಳಾದರೆ ಹೀಥರ್ ೨೦ ವರ್ಷದವಳು. ನಮ್ಮ ಪ್ರಯತ್ನವನ್ನೂ ಮೀರಿ ಹೀಥರ್ ಗರ್ಭವತಿಯಾಗಿದ್ದರೆ ನಾವಿಬ್ಬರೂ ಗರ್ಭಪಾತ ಮಾಡಿಸಲು ಬಹುಶಃ ಎಷ್ಟೂ ಹಿಂಜರಿಯುತ್ತಿರಲಿಲ್ಲ.

೧೯೬೫ರ ಹೊತ್ತಿಗೆ ನಮಗರಿಯದಂತೆಯೆ ನಮ್ಮ ಅಂತರ್ಯದಲ್ಲೇ ಏನೋ ಬದಲಾವಣೆ ಆಗತೊಡಗಿರಬೇಕು. ನಮಗೀಗ ಮಕ್ಕಳು ಬೇಕು ಎಂಬ ಭಾವನೆ ಇಬ್ಬರಲ್ಲೂ ಬಲಗೊಳ್ಳಲಾರಂಭಿಸಿತು. ಆದರೆ ಅದರರ್ಥ ನಾವು ಎಂದಾದರೊಂದು ದಿನ ಕುಳಿತು ಈಗ ನಮ್ಮ ಆರ್ಥಿಕ ಸ್ಥಿತಿ ಸುಧಾರಿದೆ; ಇನ್ನು ನಾವು ಮಕ್ಕಳನ್ನು ಪಡೆಯಲಡ್ಡಿಯಿಲ್ಲ ಎಂದೇನೂ ನಿರ್ಧರಿಸಿದೆವೆಂದಲ್ಲ. ನಮಗಿನ್ನು ಮಕ್ಕಳು ಬೇಕೆಂಬ ಬಗ್ಗೆ ನಮ್ಮ ಮೇಲೆ ಸಾಮಾಜಿಕ ಒತ್ತಡವಾಗಲಿ ಇತರ ಯಾವುದೇ ಬಗೆಯ ಒತ್ತಡಗಳಾಗಲಿ ಯಾವಾಗಲೂ ಬರಲಿಲ್ಲ. ಆದರೂ ಒಂದಾದರೂ ಮಗು ನಮಗೆ ಬೇಕೇ ಬೇಕು ಎಂಬ ಹಂಬಲ ಹುಟ್ಟಿತ್ತು.

ಸಂತಾನ ನಿರೋಧದ ಇತರ ಮಾರ್ಗಗಳನ್ನು ಕೈಬಿಟ್ಟು ಹೀಥರ್ ಇತ್ತೀಚೆ ಮಾತ್ರೆಗಳನ್ನು ಸೇವಿಸುತ್ತಿದ್ದಳು. ಮಕ್ಕಳು ಬೇಕೆನಿಸಿದೊಡನೆಯೆ ಅದೆಲ್ಲವನ್ನೂ ನಿಲ್ಲಿಸಿಬಿಟ್ಟು ಗರ್ಭಧಾರಣೆಯನ್ನೆದುರುನೋಡತೊಡಗಿದೆವು. ಆರೇಳು ತಿಂಗಳುಗಳ ನಂತರವೂ ಪರಿಣಾಮವೇನೂ ಆಗದಿದ್ದಾಗ ಒಂದು ದಿನ ಡಾಕ್ಟರನ್ನು ಕಂಡೆವು. ಇಬ್ಬರಲ್ಲೂ ಯಾವ ದೋಷವನ್ನೂ ಅವರು ಗುರುತಿಸದಾದರು. ನಮ್ಮ ಪ್ರಯತ್ನ ಮತ್ತೆ

'ಗಾರ್ಡಿಯನ್'ನಿಂದ ಆಭಾರ

ಮುಂದುವರಿಯಿತು. ಆದರೂ ಫಲ ಕನಸಿನೊಳಗಿನ ಗಂಟು.

ನಮಗೂ ಮಗು ಬೇಕೆಂಬುದು ಮೊದಮೊದಲು ಬರಿ ಬಯಕೆಯಾಗಿಯೇ ಪ್ರಾರಂಭವಾಯಿತಾದರೂ ಈಗ ಬರಬರುತ್ತ ಅದೊಂದು ಬಗೆಯ ನೋವಿನಲ್ಲಿ ಪರ್ಯವಸಾನ ಹೊಂದಿತು. ಈ ನೋವು ಹೀಥರಳಲ್ಲಿ ಹೆಚ್ಚು ಪ್ರಬಲವಾಗಿತ್ತೆಂಬುದಂತೂ ಸುಸ್ಪಷ್ಟವಿತ್ತು. ನಮ್ಮ ಉಳಿದಾವ ಶಾರೀರಿಕ ಆವಶ್ಯಕತೆಗಳಷ್ಟೆ ಪ್ರಬಲವಾಗಿತ್ತು, ಮಗು ಬೇಕೆಂಬ ನಮ್ಮ ಹಂಬಲ. ಅದೊಂದು ಬಗೆಯ ಭಯಂಕರ ಹಸಿವು. ದಿನಗಳೆದಂತೆ ಒಂದು ಬಗೆಯ ಹತಾಶ ಮನೋಭಾವ ನಮ್ಮನ್ನಾವರಿಸತೊಡಗಿತು.

ಆದರೆ ೧೯೭೦ರ ಪ್ರಾರಂಭಕಾಲದಲ್ಲಿ ನಮ್ಮ ಆಶೆ ಕೈಗೂಡುವ ಕ್ಷಣ ಕೊನೆಗೂ ಪ್ರಾಪ್ತವಾಯಿತು. ಹೀಥರ್ ಗರ್ಭವತಿಯಾಗಿದ್ದಾಳೆಂದು ಖಚಿತಪಟ್ಟನಂತರ ನಮಗಾದ ಆನಂದಕ್ಕೆ ಎಣೆಯಿಲ್ಲ. ಅವಳ ಉದರದಲ್ಲಿ ರೂಪು ತಳೆಯುತ್ತಿದ್ದ ಮಗುವಿನಲ್ಲಿ ಜೀವಸಂಚಾರವಾದ ಪ್ರಥಮ ಲಕ್ಷಣಗಳು ಕಂಡುಬಂದ ಕ್ಷಣದಿಂದ ಆಕೆ ತಾಯಿಯಾಗುವ ಕ್ಷಣದ ವರೆಗೂ ಪ್ರತಿದಿನವೂ ನಾವು ಅದೇನೊ ಒಂದು ಹೊಸ ಜೀವನವನ್ನೇ ಅನುಭವಿಸಿದೆವು. 'ಗರ್ಭಪಾತ'ವೆಂಬ ಶಬ್ದವೇ ನನಗೆ ಅತ್ಯಂತ ಅಸಹ್ಯವೆನಿಸತೊಡಗಿತ್ತು. ಗರ್ಭಿಣಿಯಾಗಿರುವಾಗಲಾಗಲಿ ಪ್ರಸೂತಿ ಕಾಲದಲ್ಲಾಗಲಿ ಹೀಥರಳಿಗೆ ಯಾವ ಅನಿರೀಕ್ಷಿತ ತೊಂದರೆಯೂ ಆಗಲಿಲ್ಲ.

ನಮ್ಮ ಮಗು ಭೂಮಿಗಿಳಿದುದು ಮಧ್ಯರಾತ್ರಿಯ ನಂತರ. ಆಸ್ಪತ್ರೆಯಲ್ಲಿ ಆವಶ್ಯಕ ಸಿಬ್ಬಂದಿ ಆ ಕ್ಷಣಕ್ಕೆ ಅಲ್ಪಾವಧಿಯಲ್ಲಿ ಸಿಕ್ಕದಂತಿಲ್ಲದ್ದರಿಂದ ನಾನೇ ಮುಂದಾಗಿ ನರ್ಸಿನ ಸಹಾಯಕ್ಕೆ ಧಾವಿಸಬೇಕಾಯಿತು. ಆಗ ಹೀಥರ್ ಪಡುತ್ತಿದ್ದ ಪ್ರಸವವೇದನೆ ಭಯಂಕರವಾಗಿತ್ತು. ಆದರೆ ಮಗುವಿನ ಮೊದಲ ಅಳು ಕೇಳಿದಾಕ್ಷಣ ಅವಳಿಗಾದ ಆನಂದ, ಸಮಾಧಾನ ಆ ನೋವನ್ನೆಲ್ಲ ಮರೆಸಿಬಿಟ್ಟಿತ್ತು. ಮಗು ಗಂಡಾಗಿತ್ತು. ಅದಕ್ಕೆ ಪಿಯರ್ಸ್ ಎಂದು ನಾಮಕರಣ ಮಾಡಿದೆವು. ಒಂಬತ್ತು ವರ್ಷಗಳ ನಂತರ ನಮ್ಮದು ತುಂಬಿದ ಮನೆಯೆಂಬ ಭಾವನೆ ನಮಗೆ ಮೊತ್ತಮೊದಲ ಬಾರಿ ಬಂತು. ಆದರೆ ಮುಂದಿನ ಐದು ವಾರದಲ್ಲೇ ಒಂದು ದೋಷಕ್ಕಾಗಿ ನಮ್ಮ ಮಗುವಿಗೆ ಶಸ್ತ್ರಕ್ರಿಯೆ ಮಾಡಿಸಬೇಕಾಗಿ ಬಂತು. ಪಿಯರ್ಸ್ ಆಸ್ಪತ್ರೆಯಿಂದ ಮನೆಗೆ ಮರಳಲಿಲ್ಲ.

ಆಗ ನಮಗಾದ ದುಃಖವನ್ನು ಶಬ್ದಗಳಲ್ಲಿ ಅಳೆಯಲು ಶಕ್ಯವಿಲ್ಲ. ಆದರೆ ಸಮಯ ಸರಿದಂತೆ ದುಃಖದ ನೋವು ಕಡಿಮೆಯಾಗತೊಡಗಿತ್ತು. ೧೯೭೧ರ ಹೊತ್ತಿಗೆ ನಮಗೆ ಮತ್ತೆ ಮಗು ಬೇಕು; ಅದಕ್ಕಾಗಿ ಪುನಃ ನಾವು ಪ್ರಯತ್ನಿಸಬೇಕು ಎಂಬ ಮಾನಸಿಕ ಅವಸ್ಥೆಯನ್ನು ತಲುಪಿದೆವು. ಒಮ್ಮೆ ಹೀಥರ್ ಮಗುವಿನ ತಾಯಿಯಾಗಿದ್ದುದರಿಂದ ನಮ್ಮ ಮಟ್ಟಿಗಂತೂ ಸಂತಾನಶಕ್ತಿಹೀನತೆಯ ಪ್ರಶ್ನೆಯೇ ಇಲ್ಲವೆಂದು ನಮಗೆ ಖಚಿತಪಟ್ಟಂತಿತ್ತು. ಆದರೆ ದಿನಗಳುರುಳಿದಂತೆ ನಮ್ಮೆಣಿಕೆ ತಪ್ಪಿದಂತೆ ತೋರತೊಡಗಿತು. ನಮ್ಮ ಸಂತಾನಶಕ್ತಿಹೀನತೆಯ ಸಮಸ್ಯೆ ಹಿಂದೆಂದಿಗಿಂತಲೂ ಹೆಚ್ಚು ತೀವ್ರವಾಗಿ ನಮ್ಮನ್ನಾವರಿಸಿ ದುಃಖಕ್ಕೀಡುಮಾಡಿತು.

ಈ ಸಲವೂ ನಮ್ಮ ಪ್ರಯತ್ನಗಳು ನಿಷ್ಫಲವಾಗತೊಡಗಿದಾಗ ಪಿಯರ್ಸನನ್ನು ಕಳೆದುಕೊಂಡ ದುಃಖದಿಂದುಂಟಾದ ಒತ್ತಡ, ಉದ್ವಿಗ್ನತೆಗಳೇ ಹೀಗಾಗುವುದಕ್ಕೆ ಕಾರಣವಿರಬಹುದೆಂದು ಜನ ಹೇಳಿದರು. ಮತ್ತೆ ತಜ್ಞ ಡಾಕ್ಟರರಿಂದ ಪರೀಕ್ಷೆಗಾರಂಭ. ಹೀಥರ್ ಕೆಲ ದಿನ ಆಸ್ಪತ್ರೆಯಲ್ಲಿರಬೇಕಾಗಿ ಬಂತು. ಕೊನೆಯದಾಗಿ ನಮ್ಮ ಡಾಕ್ಟರು ಗಂಡನಿಂದ ಕೃತ್ರಿಮ ಗರ್ಭಧಾರಣೆ ಒಂದೇ ಮಾರ್ಗವೆಂಬ ಅಭಿಪ್ರಾಯಕ್ಕೆ ಬಂದರು. ಬಹಳ ಯೋಚನೆಯ ನಂತರ ಇಬ್ಬರೂ ಅದಕ್ಕೊಪ್ಪಿದೆವು. ಇದಕ್ಕಾಗಿ ಡಾಕ್ಟರ್ ಹೀಥರಳ ಮೈಯ ಉಷ್ಣತಾಮಾನದ ಒಂದು ಚಾರ್ಟ್ ತಯಾರಿಸಿದರು. ಅನಂತರ ಆಕೆ ಗರ್ಭಧರಿಸುವ ಸಾಧ್ಯತೆಯಿದ್ದ ಸಮಯವನ್ನವರು ನಮಗೆ ತಿಳಿಸುತ್ತಿದ್ದರು. ಆ ಸಮಯಕ್ಕೆ ಇಬ್ಬರೂ ಆಸ್ಪತ್ರೆಗೆ ಹೋಗಬೇಕು. ಅಲ್ಲಿ ನಾನು, ಅವರಿತ್ತ ಸ್ವಚ್ಛ ಸೀಸೆಯೊಂದರಲ್ಲಿ ನನ್ನ ವೀರ್ಯವನ್ನು ಸಂಗ್ರಹಿಸಿ ಕೊಡಬೇಕು. ತಕ್ಷಣ ಅವರು ಅದನ್ನು ಚುಚ್ಚುಮದ್ದಿನಂತೆ ಹೀಥರಳ ಗರ್ಭಾಶಯಕ್ಕೆ ಕಳಿಸ

ಬೇಕು.

ಈ ಕ್ರಮ ಕೂಡ ಹಲವಾರು ತಿಂಗಳು ಕಾಲ ಮುಂದುವರಿದು, "ಇನ್ನೇನೂ ಮಾಡಲಿಕ್ಕಾಗದು, ನೀವಿಬ್ಬರೂ ಹತಭಾಗ್ಯರು," ಎಂದು ನಮ್ಮ ಡಾಕ್ಟರ್ ಕೈಚೆಲ್ಲುವ ವರೆಗೂ ಮುಂದುವರಿಯಿತು. ಈ ಕ್ರಿಯೆಯಲ್ಲಿ ಯಾವುದೇ ಶಾರೀರಿಕ, ಮಾನಸಿಕ ಆನಂದವಿಲ್ಲದಿದ್ದರೂ ಏನೋ ಒಂದು ಆಶೆಯಿಂದ ನಾವು ನಮ್ಮ ಕರ್ತವ್ಯವೆಂಬಂತೆ ಅದನ್ನು ನಿರ್ವಹಿಸುತ್ತಿದ್ದೆವು. ಆದರೆ ಅದೂ ನಿಷ್ಫಲವಾದಾಗ ಈ ಜಗತ್ತಿನಲ್ಲಿ ನಮಗಿನ್ನು ಭವಿತವ್ಯವೇ ಇಲ್ಲವೇನೊ ಎಂಬ ಹತಾಶ ಭಾವ ನಮ್ಮನ್ನಾವರಿಸಿತು. ನಿರುಪಾಯರಾಗಿ ನಾವು ಮನೆಗೆ ಮರಳಿ ನಿಸರ್ಗ ತಾನಾಗಿ ಮಾಡಿಸಿದ್ದಾಗಲಿ ಎಂದುಕೊಂಡು ಸುಮ್ಮನಾದೆವು.

ಈಗ ನಮಗುಳಿದ ಒಂದೇ ಮಾರ್ಗವೆಂದರೆ ಮಗುವೊಂದನ್ನು ದತ್ತಕ ಮಾಡಿಕೊಳ್ಳುವುದು. ಆದರೆ ನಾವು ಈ ಬಗ್ಗೆ ಒಂದು ನಿರ್ಧಾರಕ್ಕೆ ಬಂದಾಗ ದೇಶದಲ್ಲಿ ದತ್ತು ಸಿಗಬಹುದಾದ ಮಕ್ಕಳ ಕೊರತೆಯೂ ವಿಶೇಷವಾಗಿತ್ತೇನೊ. ಸಂತಾನನಿರೋಧಕಗಳ ಉಪಯೋಗ ಹೆಚ್ಚಿರುವುದರ ಜತೆಗೆ ಗರ್ಭಪಾತವೂ ಎಂದಿಗಿಂತ ಸುಲಭವಾಗಿದ್ದುದೇ ಇದಕ್ಕೆ ಕಾರಣವಾಗಿರಬೇಕು. ನಾವಿಬ್ಬರೂ ನಾಸ್ತಿಕರೆಂದೇ ಹೇಳಬೇಕು. ದತ್ತಕ ವಿಷಯದಲ್ಲಿ ನಮಗೆ ತೊಂದರೆಯುಂಟಾಗಲಿಕ್ಕೆ ಇದು ಕಾರಣವಿರಬೇಕೆಂದೂ ಅದಕ್ಕಾಗಿ ನಾವೂ ಧಾರ್ಮಿಕವೃತ್ತಿಯವರೆಂದು ತೋರಿಕೆಗಾದರೂ ವರ್ತಿಸಬೇಕೆಂದೂ ಕೆಲವರು ಸಲಹೆ ನೀಡಿದರು. ಆದರೆ ನಮ್ಮ ವಿವೇಕಕ್ಕೆ ಅದು ಒಪ್ಪಿಗೆಯಾಗದ್ದರಿಂದ ನಾವು ಸ್ಥಾನಿಕ ಅಧಿಕಾರಿಗಳೆಡೆಗೆ ಹೋಗಿ (ಇಂಗ್ಲಂಡಿನಲ್ಲಿ ದತ್ತಕಕ್ಕಾಗಿ ಮಗುಗಳನ್ನು ಒದಗಿಸುವವರು ಸ್ಥಾನಿಕ ಅಧಿಕಾರಿಗಳು. ಅಲ್ಲಿ ಸಾಮಾನ್ಯವಾಗಿ ಅನಾಥ ಮಕ್ಕಳನ್ನು ದತ್ತಕ ತೆಗೆದುಕೊಳ್ಳಲಾಗುತ್ತದೆ.) ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದೆವು. ನಮ್ಮನ್ನು ಸರಿಯಾಗಿ ಅರಿತುಕೊಂಡ ಅವರು ಇದರಿಂದಾಗಿ ಮಗುವನ್ನು ದೊರಕಿಸುವಲ್ಲಿ ತೊಂದರೆಯಾಗದೆಂದು ಆಶ್ವಾಸನ ನೀಡಿದರು.

ಹಲವು ತಿಂಗಳುಗಳೇ ಉರುಳಿದರೂ ನಮಗೆ ಮಗುವು ದೊರೆಯದ್ದರಿಂದ ನಾನು ಮತ್ತೆ ಯೋಚನೆಗೀಡಾಗುವಂತಾಯಿತು. ಜೀವನದಲ್ಲಿ ಯಾವಾಗಲಾದರೂ ಅಪರಾಧಕ್ಕಾಗಿ ಶಿಕ್ಷೆಯೇನಾದರೂ ಆಗಿದ್ದರೆ ಅಧಿಕಾರಿಗಳು ಅಂಥವರಿಗೆ ಮಕ್ಕಳನ್ನು ದತ್ತಕ ಕೊಡಲು ಹಿಂಜರಿಯುತ್ತಾರೆ. ನಮ್ಮ ಜೀವನದಲ್ಲಿ ಅಂಥದೇನಾದರೂ ಆಗಿದೆಯೆ ಎಂದು ಯೋಚಿಸುವಂತಾಯಿತು. ಆದರೆ ನಮ್ಮಿಬ್ಬರ ಜೀವನವೂ ಅದುವರೆಗೆ ಪರಿಶುದ್ಧವಾಗಿತ್ತು.

ಅದು ಹೇಗೆ ಎಂದು ಮಾತ್ರ ಕೇಳಬೇಡಿ. ಆದರೆ ೧೯೭೨ರ ಈಸ್ಟರ್ ಸೋಮವಾರವದು. ಆಗ ಡಾಕ್ಟರರು ಸಿದ್ಧಪಡಿಸಿಕೊಟ್ಟಿದ್ದ ಉಷ್ಣತಾಮಾನದ ಚಾರ್ಟಿನ ಪ್ರಕಾರ ಹೀಥರ್ ಗರ್ಭಧರಿಸುವ ಶಕ್ಯತೆಯೆಷ್ಟೂ ಇರಲಿಲ್ಲ. ಆದರೂ ಅಂದು ಅವಳು ಗರ್ಭವತಿಯಾಗಿರಬೇಕೆಂದು ನಮಗಿಬ್ಬರಿಗೂ ಅನಿಸಿತು. ಮುಂದೆ ಡಾಕ್ಟರ್ ಅದನ್ನು ಖಚಿತಪಡಿಸಿದರು. ಅಂತೂ ಹೀಥರ್ ಎರಡನೆಯ ಬಾರಿಗೆ ಗರ್ಭವತಿಯಾಗಿದ್ದಳು. ಆದರೆ ಈ ಸಲ ಮೊದಲ ಬಾರಿಯಂತೆ ಅದರಿಂದಾಗಿ ಅತಿಯಾಗಿ ಹರ್ಷಿತರಾಗಲು ನಮ್ಮ ಮನಸ್ಸೊಪ್ಪಲಿಲ್ಲ. ಅವಳು ಪ್ರಸೂತಳಾಗುವ ಮುನ್ನವೇ ಅಧಿಕಾರಿಗಳು ಮಗುವನ್ನು ದತ್ತಕ ನೀಡಲು ಬಂದರೆ? ಎಂಬ ಸಮಸ್ಯೆ ಎದುರಾಯಿತು. ಕೊನೆಗೆ ನಾನು ಅವರ ಬಳಿ ಹೋಗಿ ಪರಿಸ್ಥಿತಿಯನ್ನು ವಿವರಿಸಿದೆ. ಆದರೆ ನಮ್ಮ ಹೆಸರನ್ನು ಅವರ ಯಾದಿಯಿಂದ ತೆಗೆಯಬೇಕೆಂತೆ ಹೇಳಲು ನಮಗೆ ಧೈರ್ಯ ಬರಲಿಲ್ಲ. ಅಂತೆಯೇ ನಮ್ಮ ಹೆಸರನ್ನಲ್ಲಿ ಬರೆದು ಹೀಥರ್ ಪ್ರಸೂತಳಾಗುವ ವರೆಗೆ ಕಾಯಲು ವಿನ್ನವಿಸಿದೆವು. ಅವರೂ ಆನಂದದಿಂದ ಒಪ್ಪಿದರು.

ಕೊನೆಗೆ ಡಿಸೆಂಬರ್ ೧೫ರಂದು ನಮ್ಮ ಎರಡನೆಯ ಮಗ ಮಾರ್ಕಸ್ ಜನಿಸಿದ. ಈ ಸಲವೂ ಹೆರಿಗೆಯ ಕಾಲಕ್ಕೆ ನಾನು ಸಹಾಯ ಮಾಡಬೇಕಾಯಿತು. ಈಗ ಮಾತ್ರ ನಮ್ಮ ಆಶೆ ಕೈಗೂಡಿದಂತಾಗಿ ಆ ಹಸಿವು ಹಿಂಗಿದೆ. ನಾವೀಗ ತೃಪ್ತರು. ✡

(೨೩ ನೆಯ ಪುಟದಿಂದ)

ಈಚೆಗೆ ವಿದೇಶಗಳಲ್ಲಿ ಪ್ರೊಸ್ಟಾಗ್ಲಾಂಡಿನ್ (prostaglandin) ಗಳನ್ನು ಗರ್ಭಪಾತಕ್ಕೆ ಉಪಯೋಗಿಸುವ ಬಗ್ಗೆ ಸಂಶೋಧನೆಗಳು ನಡೆಯುತ್ತಿವೆ. ಆದರೆ ಅವು ಇನ್ನೂ ಪ್ರಯೋಗಾವಸ್ಥೆಯಲ್ಲಿರುವುದರಿಂದ ಸದ್ಯಕ್ಕಂತೂ ಶಸ್ತ್ರಕ್ರಿಯೆಯೇ ಗರ್ಭಪಾತಕ್ಕಿರುವ ಖಂಡಿತೋಪಾಯವಾಗಿದೆ.

ಪ್ರಶ್ನೆ : ಗರ್ಭಪಾತಕ್ಕೆ ಯೋಗ್ಯ ಕಾಲ ಯಾವುದು?

ಉತ್ತರ : ನಾನೀಗ ಹೇಳುವುದನ್ನು ನೀವು ತುಲನಾತ್ಮಕವಾಗಿ ಯೋಗ್ಯ ಕಾಲ ಎಂಬರ್ಥದಲ್ಲಿ ಗ್ರಹಿಸಬೇಕು. ಏಕೆಂದರೆ ಯಾವ ಹಂತದಲ್ಲಿಯೂ ಗರ್ಭಪಾತ ಸಂಪೂರ್ಣ ನಿರಪಾಯಕರವಲ್ಲ. ತುಲನಾತ್ಮಕವಾಗಿ ಹೇಳುವುದಾದಲ್ಲಿ ಎಷ್ಟು ಬೇಗ ಮಾಡಿಸಿದರೋ ಅಷ್ಟು ಕಮ್ಮಿ ಅಪಾಯ.

ಪ್ರಶ್ನೆ : ಸ್ವಲ್ಪ ವಿವರಿಸುವಿರಾ, ಡಾಕ್ಟರ್?

ಉತ್ತರ : ಒಳ್ಳೇದು. ಗರ್ಭ ನಿಂತು ಹತ್ತು ವಾರ ಅಥವಾ ಎರಡೂವರೆ ಮೂರು ತಿಂಗಳೊಳಗೆ ಮಾಡಿಸಿದರೆ ಕೆಲಸ ಸುಲಭವೂ ಹೌದು, ಕಡಿಮೆ ಗಂಡಾಂತರವೂ ಹೌದು. ಯಾವ ಶಸ್ತ್ರಕ್ರಿಯೆಯಲ್ಲಾದರೂ ಸಣ್ಣದನ್ನು ಕತ್ತರಿಸುವುದು ದೊಡ್ಡದನ್ನು ತೆಗೆಯುವುದಕ್ಕಿಂತ ಸುಲಭವಲ್ಲವೇ? ಎರಡು ತಿಂಗಳೊಳಗಾದರೆ ಹೊಟ್ಟೆಯನ್ನು ಸಿಗಿಯದೇ ಯೋನಿ ಮೂಲಕ ಸಕ್ಶನ್ ಕ್ಯುರೆಟೇಜ್ ಎಂಬ ಚೋಷಣ ವಿಧಾನದಿಂದ ಗರ್ಭಪಾತ ಮಾಡಿಸುವ ತಂತ್ರವೊಂದು ಈಗ ರೂಪಿತವಾಗಿದೆ. (ಇದಕ್ಕೆ ಬೇಕಾದ ಯಾಂತ್ರಿಕ ಸಲಕರಣೆಗಳು ಭಾರತದಲ್ಲಿ ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಹೊರತು ಎಲ್ಲಾ ಕಡೆ ಲಭ್ಯವಾಗಿರುವಂತೆ ನನಗೆ ಕಾಣುವುದಿಲ್ಲ.) ಮೂರನೇ ತಿಂಗಳಲ್ಲಾದರೆ ಗರ್ಭಕೋಶವನ್ನು ಹಿಗ್ಗಿಸಿ ಕುಗ್ಗಿಸಿ ಭ್ರೂಣ ಹೊರಬೀಳುವಂತೆ ಮಾಡುವ ಹೆಚ್ಚು ತೊಡಕಿನ ವಿಧಾನವನ್ನು ಅನುಸರಿಸುತ್ತಾರೆ. ಮೊದಲಿನ ಆರು ವಾರಗಳಲ್ಲಾದರೆ ಇದಕ್ಕೆ "ರೋಗಿ"ಯನ್ನು ಮೂರ್ಛೆ ತಪ್ಪಿಸುವ ಅಗತ್ಯವಿರುವುದಿಲ್ಲ ಅಂತ ಹೇಳಲಾಗುತ್ತದೆ. ಆದರೆ ಈ ವಿಧಾನಗಳಿಗೂ ಸರಿಯಾದ ತರಬೇತಿ, ಯಾಂತ್ರಿಕ ಸೌಕರ್ಯಗಳು ಅಗತ್ಯ. ಹೀಗಾಗಿ ಹೆಚ್ಚಿನ-ಸಂಧರ್ಭಗಳಲ್ಲಿ ಗರ್ಭಗಳನ್ನು ಇಳಿಸಬೇಕಾದರೆ ಹೊಟ್ಟೆಯನ್ನು ಮತ್ತು ಗರ್ಭಕೋಶವನ್ನು ಛೇದಿಸಬೇಕಾಗುತ್ತದೆ. ಸ್ಮೃತಿ ತಪ್ಪಿಸುವುದೂ ಅವಶ್ಯವಾಗುತ್ತದೆ. ತಪ್ಪುತಡೆಗಳಾಗುವ ಭಯವೂ ಜಾಸ್ತಿ.

ಪ್ರಶ್ನೆ : ಗರ್ಭಪಾತದ ಶಸ್ತ್ರಕ್ರಿಯೆಯಲ್ಲಿ ಅಡಕವಾದ ತತ್‌ಕ್ಷಣದ ಮತ್ತು ದೂರಗಾಮಿ ಅಪಾಯಗಳು ಯಾವವು? ಕೆಲವರು ಗರ್ಭಪಾತದಿಂದ ಅಪಾಯವಿಲ್ಲ ಎಂಬ ರೀತಿಯಲ್ಲಿ ಮಾತಾಡುತ್ತಾರಲ್ಲ?

ಉತ್ತರ : ನಿಮ್ಮ ಎರಡನೇ ಪ್ರಶ್ನೆಗೆ ಮೊದಲು ಉತ್ತರ ಕೊಡುತ್ತೇನೆ. ಜನಸಂಖ್ಯೆಯನ್ನು ನಿಯಂತ್ರಿಸುವ ಉತ್ಸಾಹದಿಂದ ಕೆಲ ಪ್ರಸಿದ್ಧ ವ್ಯಕ್ತಿಗಳು ಕೂಡ ಗರ್ಭಪಾತ ನಿರುಪದ್ರವಿಯೆಂದು ಬಹಿರಂಗವಾಗಿ ಹೇಳುವುದನ್ನು ನಾನು ಕೇಳಿದ್ದೇನೆ. ಇಂಥ ಒಬ್ಬರನ್ನು ನಾನು ಖಾಸಗಿಯಲ್ಲಿ ಕೇಳಿದಾಗ, ಅವರು ಒಬ್ಬಳಿಗೆ ಮೂರು ಸಲಕ್ಕಿಂತ ಹೆಚ್ಚು ಗರ್ಭಪಾತ ಅಪಾಯಕರವಾದೀತು ಎಂದೊಪ್ಪಿಕೊಂಡರು. ಈ ಅತ್ಯುತ್ಸಾಹ ಯಾರಿಗೂ ಹಿತವಲ್ಲ. ಇನ್ನು ಗರ್ಭಪಾತದಲ್ಲಿರುವ ಅಪಾಯಗಳ ವಿಚಾರ. ಮೊದಲನೆಯದಾಗಿ ಏನಾದರೊಂದು ಅನಿರೀಕ್ಷಿತ ಕಾರಣದಿಂದ, ಶಸ್ತ್ರಕ್ರಿಯೆಯಿಂದಲೇ ಒದಗಬಹುದಾದ ಪ್ರಾಣಾಪಾಯ. ಇಂಗ್ಲಂಡಿನಲ್ಲಿ ಒಂದು ಲಕ್ಷ ಗರ್ಭಪಾತ ಪ್ರಕರಣಗಳಲ್ಲಿ ೩೦ ಮರಣಗಳಾಗಿವೆಯೆಂದು ಒಂದು ಪರಿಶೀಲನೆಯಿಂದ ವ್ಯಕ್ತವಾಯಿತು. (ಈ ದೇಶದಲ್ಲಿ ಈ ಬಗ್ಗೆ ಸರಿಯಾದ ಅಂಕೆ ಸಂಖ್ಯೆಗಳಿಲ್ಲ.) ಆ ದೇಶದಲ್ಲಿ ಪ್ರಸೂತಿ ಕಾಲದಲ್ಲಿ ಲಕ್ಷಕ್ಕೆ ೧೯ ಮರಣಗಳಾಗುತ್ತವೆ. ಈ

ಪ್ರಕಾರ ತಿಂಗಳು ತುಂಬಿ ಹಡೆಯುವುದಕ್ಕಿಂತ ಗರ್ಭಪಾತ ಮಾಡಿಸಿಕೊಳ್ಳುವುದರಲ್ಲಿ ಒಂದೂವರೆ ಪಟ್ಟು ಪ್ರಾಣಾಪಾಯವುಂಟು ನಿಜ. ಹತ್ತು ವಾರಗಳೊಳಗೆ ಮಾಡುವ ಗರ್ಭಪಾತದಲ್ಲಿ ಪ್ರಾಣಾಪಾಯ ಇದಕ್ಕಿಂತ ಕಮ್ಮಿ ಇರಬಹುದು.

**ಪ್ರಶ್ನೆ :** ಇತರ ಅಪಾಯಗಳೇನು?

**ಉತ್ತರ:** ಶಸ್ತ್ರಕ್ರಿಯೆಯ ಕಾಲದಲ್ಲಿ ಗರ್ಭಕೋಶದ ಮುಖ (cervix) ಸೀಳಿದಂತಾಗುವುದು, ಗರ್ಭಕೋಶಕ್ಕೆ ತೂತು ಬೀಳುವುದು, ಪ್ರಸೂತಿಯಲ್ಲಿ ಆಗುವುದಕ್ಕಿಂತಲೂ ಹೆಚ್ಚಿನ ರಕ್ತಸ್ರಾವ ಮತ್ತು ಇದರಿಂದ ರೋಗ ಜಂತುಗಳು ಪ್ರವೇಶಿಸಿ ಬೇರೆ ಉಪದ್ರವಗಳು ಹುಟ್ಟಿಕೊಳ್ಳುವುದು.

**ಪ್ರಶ್ನೆ :** ವೈದ್ಯರು ಹೆಚ್ಚು ಜೋಕೆಯಿಂದಿದ್ದರೆ ಇದನ್ನು ತಪ್ಪಿಸಲು ಸಾಧ್ಯವಿಲ್ಲವೇ?

**ಉತ್ತರ :** ವೈದ್ಯರ ಎಚ್ಚರಿಕೆ ಎಷ್ಟಿದ್ದರೂ ಇಂಥವು ಆಗಿಯೇ ಆಗುತ್ತವೆ. ಇಂಗ್ಲಂಡಿನ ಪ್ರಸಿದ್ಧ ರಾಯಲ್ ಕಾಲೇಜ್ ಆಸ್ಪತ್ರೆಯಲ್ಲಿಯೇ ೩೩೦ ಗರ್ಭಪಾತಗಳಲ್ಲಿ ಏಳು ಪ್ರಕರಣಗಳಲ್ಲಿ ಗರ್ಭಕೋಶಕ್ಕೆ ತೂತು ಬಿದ್ದ ದಾಖಲೆಗಳಿವೆಯೆಂದು ಈಚೆಗೆ ವರದಿಯಾಗಿದೆ. ಇದು ತತ್‌ಕ್ಷಣ ಗೊತ್ತಾಗಿ ಪ್ರತೀಕಾರೋಪಾಯ ಕೈಕೊಳ್ಳದಿದ್ದರೆ ಮರಣವಾಗಬಹುದು. ಬರೇ ಗರ್ಭಕೋಶಕ್ಕಲ್ಲ, ಮೂತ್ರಕೋಶ, ಕರುಳು ಇವುಗಳಿಗೂ ಅಕಸ್ಮಾತ್ತಾಗಿ ಗಾಯವಾಗಬಹುದು.

**ಪ್ರಶ್ನೆ :** ಇವುಗಳ ಪರಿಣಾಮವೇನಾಗಬಹುದು?

**ಉತ್ತರ :** ಜ್ವರ ಬರುವುದು ಅತಿ ಸಾಮಾನ್ಯ ಪರಿಣಾಮ. ಇದನ್ನು ಹಿಡಿತಕ್ಕೆ ತರಬಹುದು. ಆದರೆ ದೀರ್ಘಕಾಲೀನ ಪರಿಣಾಮಗಳು ಇದಕ್ಕಿಂತ ಗಂಭೀರವಾಗಿವೆ: (೧) ಗರ್ಭಕೋಶಕ್ಕೆ ಗಾಯವಾದರೆ ಅದರಿಂದ ರೋಗಾಣುಗಳು ಪ್ರವೇಶ ಹೊಂದಿ ಸಾವಕಾಶವಾಗಿ ಡಿಂಭನಳಿಕೆಯ ವರೆಗೂ ಸಾಗುವ ಭಯವಿದೆ. ಹೀಗಾದರೆ ಆ ಹೆಂಗಸು ಬಂಜೆಯಾಗಬಹುದು. (೨) ಗರ್ಭಪಾತ ಕಾಲದಲ್ಲಿ ಗರ್ಭಕೋಶ ಮುಖ ಹಿಗ್ಗುವುದೇ ಮೊದಲಾದ ಕಾರಣಗಳಿಂದ ಮುಂದೆ ಗರ್ಭ-ಧಾರಣೆಯಾದರೂ ಗರ್ಭಸ್ರಾವವಾಗುತ್ತ ಹೋಗಬಹುದು. ಗರ್ಭಪಾತ ಮಾಡಿಸಿಕೊಂಡವರಿಗೆ— ಅದೂ ಮೊದಲನೇ ಗರ್ಭವನ್ನೇ ತೆಗೆಸಿಕೊಂಡವರಿಗೆ— ಮುಂದೆ ಗರ್ಭಸ್ರಾವವಾಗುವ ಸಂಭವ ಹತ್ತು ಪಟ್ಟು ಹೆಚ್ಚಾಗಿದೆಯೆಂದು ಜಗತ್ಪ್ರಸಿದ್ಧ ವೈದ್ಯಕೀಯ ಪತ್ರಿಕೆಯಾದ "ಲ್ಯಾನ್ಸೆಟ್"ನಲ್ಲಿ ಒಂದು ವರದಿ ಬಂದಿದೆ. (೩) ಗರ್ಭಪಾತ ಮಾಡಿಸಿಕೊಂಡ ಅನೇಕ ಹೆಂಗಸರು ಮುಂದೆ ಲೈಂಗಿಕ ಭಾವನೆಯನ್ನೇ ಕಳೆದುಕೊಂಡದ್ದೂ ಲೈಂಗಿಕ ಅಸಮರ್ಥತೆಗೆ ಗುರಿಯಾದದ್ದೂ ದಾಖಲೆಯಾಗಿದೆ. ಇದು ಶಾರೀರಿಕವೋ ಮಾನಸಿಕವೋ ಹೇಳುವುದು ಕಷ್ಟ.

**ಪ್ರಶ್ನೆ :** ಇನ್ನೂ ಏನಾದರೂ ತೊಂದರೆಗಳು ಇವೆಯೆ ?

**ಉತ್ತರ :** ನನ್ನ ಗಮನಕ್ಕೆ ಬಂದ ಇತರ ಕೆಲ ಉಪದ್ರವಗಳೆಂದರೆ ಬೆನ್ನು ನೋವು, ಋತುಕಾಲದಲ್ಲಿ ಅತಿಯಾದ ಸ್ರಾವ ಮತ್ತು ಒಟ್ಟೇ ನಿತ್ರಾಣ. ಕೆಲವರಂತೂ ಗರ್ಭಪಾತ ಮಾಡಿಸಿದ್ದಕ್ಕೆ ತುಂಬಾ ಪಶ್ಚಾತ್ತಾಪಪಟ್ಟಿದ್ದನ್ನು ನಾನು ಕಂಡಿದ್ದೇನೆ.

**ಪ್ರಶ್ನೆ :** ಜನಸಂಖ್ಯಾನಿಯಂತ್ರಣಕ್ಕೆ ಒಂದು ಉಪಾಯವಾಗಿ ಗರ್ಭಪಾತವನ್ನು ಉಪಯೋ-ಗಿಸುವುದೇ ಆದರೆ ಈ ದೇಶದಲ್ಲಿ ಅದಕ್ಕೆ ಬೇಕಾದಷ್ಟು ತಜ್ಞ ಡಾಕ್ಟರರಿದ್ದಾರೆಂದು ತಮಗನಿಸುತ್ತದೆಯೇ ?

**ಉತ್ತರ :** ಕಳೆದ ಡಿಸೆಂಬರಿನಲ್ಲಿ ಸೇರಿದ ಮುಂಬಯಿ ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರಜ್ಞರ ಎರಡನೇ ಪರಿಷತ್ತಿನಲ್ಲಿ ಡಾ. ಬಿ. ಎನ್. ಪುರಂದರೆಯವರು, ಗರ್ಭಪಾತವನ್ನು ಸುಲಭಗೊಳಿಸಿದ್ದರಿಂದ ಪ್ರಥಮ ವರ್ಷದಲ್ಲಿ ೬೦ ಲಕ್ಷ ಗರ್ಭಪಾತಗಳಾಗಬಹುದೆಂದು ನಿರೀಕ್ಷೆ ಇದ್ದು-

ದಾಗಿಯೂ ಆದರೆ ಅಷ್ಟು ಆಗಲಿಲ್ಲವೆಂದೂ ಹೇಳಿದರು. ಇಷ್ಟು ದೊಡ್ಡ ಪ್ರಮಾಣದಲ್ಲಿ ಗರ್ಭಪಾತವನ್ನು ತಕ್ಕ ಮುಂಜಾಗ್ರತೆಗಳೊಡನೆ ಮಾಡಿಸಬೇಕಾದರೆ ನಮ್ಮಲ್ಲಿನ ವೈದ್ಯಬಲ ಸಾಲುವುದು ಕಷ್ಟವೆಂದು ತೋರುತ್ತದೆ. ಇಂಥ ಕೆಲಸಗಳನ್ನು ದೊಡ್ಡ ಪ್ರಮಾಣದಲ್ಲಿ ಮಾಡಲು ಡಾಕ್ಟರರು ಮಾತ್ರವಲ್ಲದೆ ಸಾಧನ ಸಂಪತ್ತುಗಳೂ ಬೇಕಾಗುತ್ತವೆ.

ಪ್ರಶ್ನೆ: ಎಂಥ ಸಾಧನ ಸಂಪತ್ತುಗಳು?

**ಉತ್ತರ:** ಯಾಂತ್ರಿಕ ಸಾಧನಗಳು, ಯೋಗ್ಯ ಶಸ್ತ್ರಚಿಕಿತ್ಸಾಮಂದಿರಗಳು ಇವಂತೂ ಆಯಿತು, ಇದೂ ಅಲ್ಲದೆ ಗರ್ಭಪಾತ ಕಾಲದಲ್ಲಿ ರಕ್ತಸ್ರಾವ ಧಾರಾಳವಾಗಿ ಆಗುತ್ತದೆ. ನಮ್ಮ ದೇಶದ ಜನರು ಆರೋಗ್ಯಭಾಗ್ಯದಲ್ಲಿ ಇಂದಿನ ಪಾಶ್ಚಾತ್ಯರಷ್ಟು ಸುಸ್ಥಿತಿಯಲ್ಲಿಲ್ಲ. ಅವರಲ್ಲಿ ಹೆಚ್ಚಿನವರಿಗೆ ರಕ್ತ ಕೊಟ್ಟ ಹೊರತು ಯಶಸ್ವಿಯಾಗಿ ಗರ್ಭಪಾತ ಮಾಡಿಸುವುದಾಗಲಿಕ್ಕಿಲ್ಲ. ಇದಕ್ಕೆ ತುಂಬಾ ರಕ್ತ ಸಂಗ್ರಹ ಬೇಕು.

ಪ್ರಶ್ನೆ: ಡಾಕ್ಟರ್, ನೀವು ಈ ವಿಷಯದಲ್ಲಿ ತುಂಬಾ ನಿರಾಶಾವಾದಿಯಾಗಿ ಮಾತಾಡುತ್ತೀರಲ್ಲ?

**ಉತ್ತರ:** ನಾನು ನಿರಾಶಾವಾದಿಯೂ ಅಲ್ಲ, ವಿಘ್ನಸಂತೋಷಿಯೂ ಅಲ್ಲ. ಆದರೆ ಒಂದು ಕುರವನ್ನು ಒಡೆದಷ್ಟು ಸುಲಭವಾಗಿ ಗರ್ಭಪಾತ ಮಾಡಿಸಿಕೊಳ್ಳಬಹುದು ಎಂಬಂತೆ ಮಾತಾಡುವವರಿರುವುದರಿಂದ ನಾನು ಅದರಲ್ಲಿರುವ ಕಷ್ಟಗಳನ್ನು ಎತ್ತಿ ತೋರಿಸುತ್ತಿದ್ದೇನೆ. ನಮ್ಮ ದೇಶದಲ್ಲಿ ಸರಕಾರದವರು ಯಾವುದೊಂದು ಕೆಲಸವನ್ನು ಸಾಮೂಹಿಕ ಪ್ರಮಾಣದಲ್ಲಿ ಮಾಡಲು ಹೊರಟರೆ ಅನೇಕ ತಪ್ಪುತಡೆಗಳಾಗುವುದಲ್ಲದೆ, ಕೊನೆಗೆ ನಿರಾಶೆಯೂ ಆಗುತ್ತದೆಂಬುದು ಅನುಭವದಿಂದ ಗೊತ್ತಾಗಿದೆ. ಲಸಿಕೆಯ ವಿಷಯ ಹಾಗೇ ಆಯಿತು. ಅತಿಯಾದ ಉತ್ಸಾಹದಿಂದ ಅಪಾಯಗಳು ಹೆಚ್ಚುತ್ತವೆ. ಜನ ತಪ್ಪು ತಿಳಿವಳಿಕೆಯಿಂದ ಹುಚ್ಚಾಬಟ್ಟೆ ವರ್ತಿಸುತ್ತಾರೆ. ಡಾಕ್ಟರ್ ಜನರ ಮುಖ್ಯ ಕರ್ತವ್ಯ ಜನಸಂಖ್ಯಾ ನಿಯಂತ್ರಣವಲ್ಲ, ಜನರ ಆರೋಗ್ಯದ ರಕ್ಷಣೆ.

ಪ್ರಶ್ನೆ: ಒಬ್ಬ ಸ್ತ್ರೀ ಹೆಚ್ಚಿನ ಅಪಾಯವಿಲ್ಲದೆ ಎಷ್ಟು ಸಲ ಗರ್ಭಪಾತ ಮಾಡಿಸಿಕೊಳ್ಳಬಹುದು?

**ಉತ್ತರ:** ದೃಢವಾದ ಆರೋಗ್ಯವಿದ್ದರೆ ಪರಮಾವಧಿ ಮೂರು ಸಲ ಎಂದು ಸಾಮಾನ್ಯ ಮತ. ಆದರೆ ಪ್ರತಿ ಗರ್ಭಪಾತದೊಡನೆ ಶಾರೀರಿಕ, ಮಾನಸಿಕ ರಿಸ್ಕುಗಳು ಹೆಚ್ಚಾಗುತ್ತವೆಂದು ಮರೆಯಬಾರದು.

**ಪ್ರಶ್ನೆ:** ಸಂತತಿ ನಿಯಂತ್ರಣದ ಬಗ್ಗೆ ಮಹಿಳೆಯರಿಗೆ ನಿಮ್ಮ ಸಲಹೆ ಏನು?

**ಉತ್ತರ:** ನನ್ನನ್ನು ಕೇಳಿದರೆ ಗರ್ಭಪಾತವನ್ನು ಬೇರೆ ಉಪಾಯವೇ ಇಲ್ಲ ಎಂಬಾಗಷ್ಟೇ ಉಪಯೋಗಿಸಬಹುದು. ಒಳ್ಳೇ ಹಾದಿಯೆಂದರೆ ನಿಮಗೆ ಬೇಕು ಅನಿಸುವಷ್ಟು ಮಕ್ಕಳನ್ನು ಹಡೆದು, ಆಮೇಲೆ ಬೇಡವೆನಿಸಿದರೆ ಗಂಡನಾಗಲಿ ಹೆಂಡತಿಯಾಗಲಿ ಸಂತಾನಶಕ್ತಿಹರಣದ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದು. ಗುಳಿಗೆ ಮೊದಲಾದವುಗಳನ್ನು ತೊಂದರೆಯಿಲ್ಲದೆ ಯಶಸ್ವಿಯಾಗಿ ಉಪಯೋಗಿಸುತ್ತಿರುವವರು ಒಂದು ವೇಳೆ ಅಪ್ಪಿತಪ್ಪಿ ಬಸುರಾದರೆ ಮಗು ಹಡೆದು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬಹುದು. ಒಂದು ವೇಳೆ ಗರ್ಭನಿರೋಧಕಗಳನ್ನು ಉಪಯೋಗಿಸುತ್ತಿದ್ದು ಅದರಲ್ಲಿ ಪ್ರಮಾದದಿಂದ ಗರ್ಭ ನಿಂತಿದ್ದು ಬೇರೆ ಅನಾನುಕೂಲತೆಗಳ ದೆಸೆಯಿಂದ ಮಗು ಬೇಡವೆಂದೆನಿಸಿದರೆ, ಆಗ ಗರ್ಭಪಾತ ಮಾಡಿಸಿಕೊಂಡರೂ ಇನ್ನು ಅಂಥ ಪ್ರಸಂಗ ಬಾರದಂತೆ ಗಂಡ ಅಥವಾ ಹೆಂಡತಿ ಕೂಡಲೇ ಸಂತಾನಶಕ್ತಿಹರಣ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದು ಒಳ್ಳೇದು.

✡

ಹರಿತ್‌ಕ್ರಾಂತಿಯ ಅಧ್ವರ್ಯುಗಳಲ್ಲೊಬ್ಬನಾದ
ಆತ ತನ್ನ ಕೊನೆಯ ದಿನಗಳನ್ನು
ಸೆರೆಮನೆಯಲ್ಲಿ ಕಳೆಯಬೇಕಾಯಿತು

# ಎನ್. ಐ. ವಾವಿಲೋವ್

ಡಿ. ಆರ್. ಗೋವಿಂದರಾಜು

ಅಂತಾರಾಷ್ಟ್ರೀಯ ಪ್ರಜನನಶಾಸ್ತ್ರಜ್ಞರ ಸಂಘವು ತನ್ನ ಏಳನೆಯ ಸಮ್ಮೇಳನವನ್ನು ಎಡಿನ್‌ಬರೋವಲ್ಲಿ ೧೯೩೯ರ ಆಗಸ್ಟಿನಲ್ಲಿ ನಡೆಸಬೇಕೆಂದು ತೀರ್ಮಾನಿಸಿ, ಅಂದು ರಷ್ಯಾದ ಮಹಾನ್ ಪ್ರಜನನಶಾಸ್ತ್ರಜ್ಞ ಹಾಗೂ ತಳಿಶಾಸ್ತ್ರಜ್ಞನಾಗಿದ್ದ ಎನ್. ಐ. ವಾವಿಲೋವನನ್ನು ಅಧ್ಯಕ್ಷಪೀಠಕ್ಕೆ ಆಮಂತ್ರಿಸಿತ್ತು. ಅವನು ಒಪ್ಪಿಗೆಯನ್ನು ಸಹ ನೀಡಿದ್ದ. ಇಂಥ ಸ್ಥಾನವನ್ನಲಂಕರಿಸುವುದು ಯಾರಿಗೇ ಆಗಲಿ ಹೆಮ್ಮೆ ತರುವ ವಿಷಯವಲ್ಲವೇ? ಸಮ್ಮೇಳನಕ್ಕೆ ಹೆಚ್ಚು ಕಡಿಮೆ ಒಂದು ತಿಂಗಳಿದ್ದಾಗ ಸಂಘದ ಕಾರ್ಯದರ್ಶಿಗೊಂದು ಪತ್ರ ಬಂತು: "ಈ ಸಮ್ಮೇಳನ ರಷ್ಯಾದ ಹೊರಗೆ ನಡೆಯುತ್ತಿರುವುದರಿಂದ ಇಲ್ಲಿನ ಪ್ರಜನನಶಾಸ್ತ್ರಜ್ಞರು, ಸಸ್ಯ ಮತ್ತು ಪ್ರಾಣಿ ತಳಿಶಾಸ್ತ್ರಜ್ಞರು ಅಧಿವೇಶನದಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ— ಸಹಿ, ಎನ್. ಐ. ವಾವಿಲೋವ್." ಏನೋ ಒಲ್ಲದ ಮನಸ್ಸಿನಿಂದ ಮಾಡಿದಂತೆ ಸಹಿಯಿದ್ದ ಆ ಪತ್ರ ಪ್ರಜನನಶಾಸ್ತ್ರಜ್ಞರ ವಲಯದಲ್ಲಿ ಕಳವಳವನ್ನುಂಟುಮಾಡಿತು.

ಪ್ರಜನನಶಾಸ್ತ್ರ(genetics)ಕ್ಕೆ, ಅದರಲ್ಲೂ ... ತಳಿಶಾಸ್ತ್ರ (breeding)ಕ್ಕೆ ಈ ವಿಜ್ಞಾನಿ ನೀಡಿರುವ ಕೊಡುಗೆ ಅಪಾರ. ಇಂದು ಪ್ರಪಂಚದಲ್ಲಿ ಹಸಿರು ಕ್ರಾಂತಿಯ ಕಹಳೆ ಮೊಳಗುತ್ತಿದ್ದರೆ, ಅದರ ಬಹು ದೊಡ್ಡ ಪಾಲು, ಗೌರವ ಈ ಪುರುಷನಿಗೇ ಸಲ್ಲಬೇಕು. ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಭೀಮ ಪ್ರಯತ್ನದಿಂದ ವಿಜ್ಞಾನಪ್ರಪಂಚಕ್ಕೆ ಅಸಾಧಾರಣ ಕಾಣಿಕೆಗಳನ್ನಿತ್ತ ವಾವಿಲೋವನ ಉತ್ಕರ್ಷವನ್ನು ಸಹಿಸಲಾರದ ಕಪಟ ವಿಜ್ಞಾನಿಗಳು ಸಂಚು ಹೂಡಿ ಅವನನ್ನು ಸೆರೆಮನೆಗೆ ಕಳಿಸಿದರು. ಅವನು ಹಿಮನಿಬಿಡ ಪ್ರದೇಶವಾದ ಸೈಬೀರಿಯಾದ ಸಮುದ್ರ ದಂಡೆಯಲ್ಲೆಲ್ಲೋ ಒಂದು ಕಡೆ ಕೊನೆಯುಸಿರೆಳೆಯಬೇಕಾಯಿತು.

೧೮೮೭ರಲ್ಲಿ ಅತ್ಯಂತ ಶ್ರೀಮಂತ ವ್ಯಾಪಾರಿಯೊಬ್ಬನ ಮಗನಾಗಿ ವಾವಿಲೋವ್ ಜನಿಸಿದ. ಲಾಭ ಮಾಡುವುದಷ್ಟೇ ಗುರಿಯಾಗಿದ್ದ ಈ ಮನೆತನ ಸಂಸ್ಕೃತಿಯ ದೃಷ್ಟಿಯಿಂದ ಅಷ್ಟು ಶ್ರೇಷ್ಠವೇನೂ ಆಗಿರಲಿಲ್ಲ. ಆದರೆ ಹತ್ತೊಂಬತ್ತನೇ ಶತಮಾನದ ಅಂತ್ಯಭಾಗ ಹಾಗೂ ಈ ಶತಮಾನದ ಆದಿಭಾಗದಲ್ಲಿ ಈ ವರ್ಗವೂ ಮೇಧಾವಿಗಳಿಗೆ ಜನ್ಮ ನೀಡಿತು. ವಾವಿಲೋವ್ ಮನೆತನ ಈ ಬಗೆಯದು. ನಮ್ಮ ಚರಿತ್ರನಾಯಕನ ಪೂರ್ಣ ಹೆಸರು ನಿಕೊಲಾಯ್ ಇವಾನೋವಿಚ್

ವಾವಿಲೋವ್. ಆತನ ಅಣ್ಣ ಸರ್ಗೆಯಿ ರಶಿಯದಲ್ಲಿ ಮಹಾ ಭೌತವಿಜ್ಞಾನಿಯಾಗಿ ಅಲ್ಲಿನ ವಿಜ್ಞಾನ ಅಕಾದಮಿಯ ಅಧ್ಯಕ್ಷನಾದನು. ನಿಕೋಲಾಯ್ ವಾವಿಲೋವ್ ಮನಸ್ಸು ಮಾಡಿದ್ದರೆ ಮತ್ತೊಬ್ಬ ವಣಿಕನಾಗಬಹುದಿತ್ತೇನೋ! ಆದರೆ ಚಿಕ್ಕಂದಿನಿಂದ ಸುತ್ತಲಿನ ನಿಸರ್ಗದ ರಮಣೀಯತೆ, ಜೀವಜಂತುಗಳು ಹಾಗೂ ವ್ಯವಸಾಯದ ಕಡೆಗೆ ಇವನ ಗಮನ ಹರಿಯಿತು. ತಂದೆ ಶ್ರೀಮಂತನಾದ್ದರಿಂದ ಹಣದಿಂದ ಕೊಂಡುಕೊಳ್ಳಲು ಎಷ್ಟು ಸಾಧ್ಯವಿತ್ತೋ ಅಷ್ಟು ಉತ್ತಮ ವಿದ್ಯಾಭ್ಯಾಸ ಇವನಿಗೆ ಲಭಿಸಿತು. ಮಾಸ್ಕೋ ನಗರಕ್ಕೆ ತೀರ ಸಮೀಪದಲ್ಲಿದ್ದ ಪೆಟ್ರೋವ್‌ಸ್ಕೋ ರಾಜುಮೊವ್‌ಸ್ಕೋದ ವ್ಯವಸಾಯ ಅಕಾದಮಿಯಿಂದ ಆತ ಪದವಿ ಪಡೆದ. ಅಲ್ಲಿಂದ ಕೇಂಬ್ರಿಡ್ಜ್‌ಗೆ ಪ್ರಯಾಣ ಬೆಳೆಸಿ, ಅಲ್ಲಿ ಪ್ರಜನನಶಾಸ್ತ್ರದ ಜನಕನಾದ ಗ್ರಿಗೊರ್ ಮೆಂಡೆಲ್‌ನ ತತ್ವಗಳನ್ನು ವಿಮರ್ಶಿಸಿ ವಿಶದಗೊಳಿಸಿದ ವಿಲಿಯಂ ಬೇಟ್‌ಸನ್ನನ ಶಿಷ್ಯತ್ವ. ೧೯೧೩–೧೯೧೪ ವರೆಗೆ, ಅವನಿಂದಲೇ ಸ್ಥಾಪಿತವಾದ ಜಾನ್ ಇನ್ನಿಸ್ ತೋಟಗಾರಿಕೆ ಇನ್‌ಸ್ಟಿಟ್ಯೂಟ್‌ನಲ್ಲಿ ಸರ್ ರೋಲೆಂಡ್ ಬಿಫಿನ್‌ನೊಡನೆ ಸಂಶೋಧನೆ. ಆಗ ತಾನೇ ಚಿಗುರುತ್ತಿದ್ದ ಪ್ರಜನನಶಾಸ್ತ್ರ ಹಾಗೂ ತಳಿಶಾಸ್ತ್ರ ಪ್ರಪಂಚದಲ್ಲಿ ವಾವಿಲೋವ್ ಗಳಿಸಿದ ಜ್ಞಾನ ಮತ್ತು ಗುರುಗಳಿಂದ ದೊರೆತ ಸಮರ್ಥ ಮಾರ್ಗದರ್ಶನದಿಂದ ಅವನ ಪ್ರತಿಭೆ ಪೂರ್ತಿಯಾಗಿ ಅರಳಿತು. ನೂರೆಂಟು. ಆಸೆ, ಆಕಾಂಕ್ಷೆ, ಆದರ್ಶಗಳನ್ನು ತುಂಬಿಕೊಂಡು ಅದೇ ವರ್ಷ ತಾಯ್ನಾಡಿಗೆ ವಾವಿಲೋವ್ ಮರಳಿದ.



೧೯೧೪ರಲ್ಲಿ, ಕೇವಲ ೨೭ ನೇ ವಯಸ್ಸಿಗೆ ಮಾಸ್ಕೋ ವಿಶ್ವವಿದ್ಯಾನಿಲಯದಲ್ಲಿ ಆತನಿಗೆ ಪ್ರಾಧ್ಯಾಪಕ ಹುದ್ದೆ ದೊರಕಿತು. ೧೯೧೬ರ ಹೊತ್ತಿಗೆ ಪರ್ಷಿಯಾ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಧಾನ್ಯಗಳ ಸಂಗ್ರಹಣೆಗಾಗಿ ಪ್ರಸ್ಥಾನ. ೧೯೧೭ರಲ್ಲಿ ಸರತೋವ್ ವಿಶ್ವವಿದ್ಯಾನಿಲಯದಲ್ಲಿ ವ್ಯವಸಾಯ, ಸಸ್ಯಶಾಸ್ತ್ರ ಹಾಗೂ ಪ್ರಜನನಶಾಸ್ತ್ರದ ಪ್ರಾಧ್ಯಾಪಕನಾಗಿ ನೇಮಕ. ಹಳೆಯ ಕಂದಾಚಾರಗಳನ್ನು ಕಡೆಗಣಿಸಿ ಸ್ವಪ್ರತಿಭೆ ಮತ್ತು ಧೈರ್ಯದಿಂದ ಆ ವಿಶ್ವವಿದ್ಯಾನಿಲಯವನ್ನು ವಾವಿಲೋವ್ ಪ್ರಪಂಚದಲ್ಲೇ ಒಂದು ಅತ್ಯಂತ ಚಟುವಟಿಕೆಯ ಕೇಂದ್ರವನ್ನಾಗಿ ರೂಪಾಂತರಗೊಳಿಸಿದ. ಆ ವರ್ಷವೇ ಆದ ಎರಡೆರಡು ರಾಜ್ಯಕ್ರಾಂತಿಗಳು ವಾವಿಲೋವನ ಸ್ಥಾನವನ್ನೇನೂ ನಡುಗಿಸಲಿಲ್ಲ. ಕ್ರಾಂತಿ ನಾಯಕರಿಗೆ ಪ್ರತಿಭಾವಂತ ವಿಜ್ಞಾನಿಗಳ ಅಗತ್ಯವಿತ್ತು. ಸ್ವಲ್ಪ ದಿನಗಳಲ್ಲೇ ಈ ವಿಭಾಗಕ್ಕೆ "ಲೆನಿನ್ ಅಕ್ಯಾಡಮಿ ಆಫ್ ಅಗ್ರಿಕಲ್ಚರಲ್ ಸೈನ್ಸಸ್" ಎಂದು ಪುನರ್ನಾಮಕರಣವಾಯಿತು ಮಾತ್ರ. ಅದರ ಚಟುವಟಿಕೆಗಳು ಕಮ್ಯುನಿಸ್ಟ್ ನಾಯಕ ಲೆನಿನ್ನನ ಗಮನ ಸೆಳೆದಿದ್ದವು. ಫಲವಾಗಿ ಆ ಅಕಾದಮಿಯ ಡೈರೆಕ್ಟರ್ ಮತ್ತು ಅನ್ವಿತ ಸಸ್ಯಶಾಸ್ತ್ರ ಇನ್‌ಸ್ಟಿಟ್ಯೂಟಿನ ಡೈರೆಕ್ಟರ್ ಪದವಿ

ಇವೆರಡೂ ಒಟ್ಟಿಗೇ ವಾವಿಲೋವನಿಗೆ ದೊರೆತವು. ೧೯೨೧ ರಿಂದ ೧೯೩೪ರ ವರೆಗೂ ಆ ಸ್ಥಾನದಿಂದ ವಾವಿಲೋವ್ ನಾಲ್ಕುನೂರಕ್ಕೂ ಹೆಚ್ಚು ಸಂಶೋಧನಾ ಕೇಂದ್ರಗಳಲ್ಲಿ ಕಾರ್ಯನಿರತರಾಗಿದ್ದ ೨೦,೦೦೦ ವಿಜ್ಞಾನಿಗಳನ್ನು ನಿರ್ದೇಶಿಸುತ್ತಿದ್ದ. ರಶಿಯದಲ್ಲಿ ಕ್ರಾಂತಿಯಾದ ನಂತರ ನಾಗರಿಕರಿಗೆ ವಿದೇಶ ಸಂಚಾರಕ್ಕೆ ಅನುಮತಿ ಸಿಗುತ್ತಿದ್ದುದು ಅತಿ ವಿರಳ. ವಾವಿಲೋವನ ಪ್ರತಿಷ್ಠೆ ಎಷ್ಟಿತ್ತೆಂದರೆ, ಆತ ಈ ಅವಧಿಯಲ್ಲಿ ಅಮೇರಿಕ ಮತ್ತು ಯುರೋಪನ್ನು ಅನೇಕ ಬಾರಿ ಸಂದರ್ಶಿಸಿದ. ಹೋಗುವಾಗ ಬರಿ ಕೈಯಲ್ಲಿ ಹೋದನು. ಹಿಂತಿರುಗಿ ಬರುವಾಗ ಕೆಲವು ಭಾರಿ ಪುಸ್ತಕ ಭಾಂಡಾರಗಳನ್ನೇ ತಂದನು. ಜ್ಞಾನ ಸಂಚಯಕ್ಕೆಂದು ರಷ್ಯಾದ ಮೂಲೆ ಮೂಲೆಗಳಿಂದ ಆವನಲ್ಲಿಗೆ ವಿಜ್ಞಾನಿಗಳು ಬರುತ್ತಿದ್ದರು. ಅವರಲ್ಲನೇಕರು ಉತ್ಸಾಹಿತರಾಗಿ ವಾವಿಲೋವನ ಸಹಪಾಠಿಗಳಾದರು. ಒಂದು ಮಾತಿನಲ್ಲಿ ಹೇಳಬೇಕೆಂದರೆ ರಷ್ಯಾ ಪ್ರಜನನಶಾಸ್ತ್ರಜ್ಞರಿಗೆ ಕಾಶಿ ಆಯಿತು.

ವಾವಿಲೋವ್ ಜಗತ್ತಿಗೆ ನೀಡಿರುವ ಕಾಣಿಕೆಗಳಲ್ಲಿ ಮುಖ್ಯವಾದವುಗಳು 'ಬೆಳಸು ಸಸ್ಯಗಳ ಉಗಮ ಕೇಂದ್ರಗಳು' ಮತ್ತು 'ಅನುರೂಪ ಸರಣಿ ತತ್ವ'. ಇವುಗಳ ಮುಖ್ಯ ಉಪಯೋಗಗಳೇನೆಂಬುದನ್ನು ನೋಡೋಣ. ಕೆಲವು ಸಸ್ಯಗಳು ಕೆಲವು ಪ್ರದೇಶಗಳಲ್ಲಷ್ಟೇ ಕಂಡುಬರುತ್ತವೆ. ಉದಾಹರಣೆಗೆ ತೆಂಗು, ಬಾಳೆ, ಮಾವು, ರಾಗಿ, ಭತ್ತ ಇತ್ಯಾದಿ ಬೆಳೆಗಳು ಕೇವಲ ಉಷ್ಣ ವಲಯದಲ್ಲಿ ಮಾತ್ರ ಬೆಳೆಯಬಲ್ಲವು. ಪ್ರಪಂಚದ ಕೆಲ ನಿರ್ದಿಷ್ಟ ಪ್ರದೇಶಗಳಲ್ಲಿ ಇವುಗಳು ಹೆಚ್ಚು ಸೊಂಪಾಗಿ ಬೆಳೆಯುತ್ತವೆ ಹಾಗೂ ವೈವಿಧ್ಯವನ್ನು ಹೆಚ್ಚಾಗಿ ಪ್ರದರ್ಶಿಸುತ್ತವೆ. ವೈವಿಧ್ಯ ಜೀವಿಗಳ ಒಂದು ಮುಖ್ಯ ಗುಣ. ಹೀಗೆ ಸಸ್ಯಗಳು ಪ್ರಪಂಚದ ಯಾವ ಭಾಗದಲ್ಲಿ ಹೆಚ್ಚು ಸೊಂಪಾಗಿ ಬೆಳೆದು ಆ ಬೆಳೆ ಮತ್ತು ಪ್ರಭೇದ [illegible]

ಪ್ರದರ್ಶಿಸುತ್ತವೆಯೋ, ಆ ಭಾಗವು ಆ ನಿರ್ದಿಷ್ಟ ಬೆಳೆಯ ತವರು ಎನ್ನಬಹುದು. ಉದಾಹರಣೆಗೆ ಭತ್ತವನ್ನು ತೆಗೆದುಕೊಳ್ಳೋಣ. ಭತ್ತದ ಪ್ರಭೇದಗಳು ಅನೇಕವಾಗಿವೆ. ಈ ವಿವಿಧ ರೂಪಗಳು ಪ್ರಪಂಚದ ಬೇರೆಡೆಗಳಲ್ಲಿ ದೊರೆಯುವುದಕ್ಕಿಂತ ಅತಿ ಹೆಚ್ಚಿನ ಪ್ರಮಾಣದಲ್ಲಿ ಭಾರತದ ಅಸ್ಸಾಂ ಮತ್ತು ಒರಿಸ್ಸಾದ ಗುಡ್ಡಗಾಡು ಪ್ರದೇಶದಲ್ಲಿ ದೊರೆಯುತ್ತವೆ. ಅಂದರೆ, ಭತ್ತದ ವಿವಿಧ-ತೆಗಳ ತವರು ಈ ಪ್ರದೇಶ. ಆದ್ದರಿಂದ ಭತ್ತದ ಬೆಳೆ ಅಸ್ಸಾಂನ ಕಾಡುಗಳಲ್ಲಿ ಜನ್ಮವೆತ್ತಿರಬೇಕು. ಹೀಗೆಯೇ ಪ್ರತಿಯೊಂದು ಬೆಳೆಗೂ ಒಂದೊಂದು ಜನ್ಮಸ್ಥಳ ಇದೆ. ವೈವಿಧ್ಯ ಹುಟ್ಟುವುದು ಜೀನಿಗಳಿಂದ. ಒಂದು ಪ್ರದೇಶದಲ್ಲಿನ ಒಂದು ನಿರ್ದಿಷ್ಟ ಬೆಳೆಯಲ್ಲಿ ವಿವಿಧ ರೂಪಗಳಿವೆ ಎಂದು ಊಹಿಸಿಕೊಂಡ ಪಕ್ಷಕ್ಕೆ ಈ ವೈವಿಧ್ಯ ಸೃಷ್ಟಿಗೆ ಕಾರಣೀಭೂತವಾದ ಜೀನಿಗಳೂ ಇವೆ. ಅಂದರೆ ಈ ಪ್ರದೇಶಗಳು ಜೀನಿಗಳ ಸಂಪದ್ಭರಿತ ಪ್ರದೇಶಗಳು. ಇಂಥ ಜೀನಿಗಳಿಂದ ಇರುವ ಪ್ರಯೋಜನವಾದರೂ ಏನು? ನಾವೊಂದು ತಳಿಯನ್ನು ಸೃಷ್ಟಿಸಬೇಕು ಎಂದಿಟ್ಟುಕೊಳ್ಳೋಣ. ಈ ತಳಿಗೇ ಸೀಮಿತವಾಗಿರುವ ವಿಶಿಷ್ಟ ಗುಣಗಳು ಅರ್ಥಾತ್ ಜೀನಿಗಳ ಜೊತೆಗೆ ಹೊಸ ಜೀನಿಗಳನ್ನು ಸಂಯೋಜಿಸಬಹುದು. ಹೀಗೆ ಮಾಡುವಾಗ ಆ ಪ್ರಭೇದ ಅಥವಾ ಬೆಳೆ ಹುಟ್ಟಿದ ಪ್ರದೇಶಕ್ಕೆ ಹೋಗಿ, ನಮಗೆ ಬೇಕಾದ ಗುಣಗಳಿರುವ ಗಿಡಗಳನ್ನು ಆಯ್ಕೆ ಮಾಡಿಕೊಂಡು ಬಂದು, ಹೊಸ ತಳಿ ರೂಪಣೆಯಲ್ಲಿ ತೊಡಗಬಹುದು.

ವಾವಿಲೋವನ ಮತ್ತೊಂದು ಕೊಡುಗೆಯಾದ 'ಅನುರೂಪಸರಣಿ ತತ್ವ'ದ ಪ್ರಕಾರ, ಎರಡು ಪ್ರಭೇದಗಳು ಒಂದನ್ನೊಂದು ಹೋಲುತ್ತಿದ್ದರೆ ಅವುಗಳಲ್ಲಿನ ಜೀನಿಗಳು ಒಂದನ್ನೊಂದು ಹೋಲಬೇಕು ಅಥವಾ ಅವುಗಳು ಏಕಕಾಲದಲ್ಲಿ ವಿಕಾಸ ಹೊಂದಿರಬೇಕು. ಇನ್ನೊಂದು

ಒಂದು ನಿರ್ದಿಷ್ಟ ವೈಶಿಷ್ಟ್ಯವಿದ್ದರೆ ಅದಕ್ಕೆ ಸಂಬಂಧಪಟ್ಟ ಪ್ರಭೇದವು ಅಂಥದೇ ವೈಶಿಷ್ಟ್ಯವನ್ನು ತೋರಿಸುತ್ತದೆ. ಇವುಗಳನ್ನು ಅನೇಕ ಜೀವಜಾತಿಗಳಲ್ಲಿ ಹಾಗೂ ಅನೇಕ ಪ್ರಭೇದಗಳಲ್ಲಿ ಗುರುತಿಸಿದ್ದಾರೆ. ಈ ತತ್ವದ ಮುಖ್ಯ ಉಪಯೋಗವೆಂದರೆ ಒಂದು ಪ್ರಭೇದವನ್ನು ಪರೀಕ್ಷಿಸಿ ಅದರ ವಿಕಸನವನ್ನು ಗುರುತಿಸಿದರೆ ಅಂಥದೇ ಪ್ರಭೇದ ಪ್ರಕೃತಿಯಲ್ಲಿತ್ತು ಅಥವಾ ಎಲ್ಲೋ ಒಂದು ಕಡೆ ಇರಬಹುದು ಎಂದು ಸುಲಭವಾಗಿ ಊಹಿಸಬಹುದು. ಈ ವಾದವು ರಸಾಯನ ಶಾಸ್ತ್ರದ 'ಪೀರಿಯಾಡಿಕ್ ಪಟ್ಟಿ'ಯನ್ನು ಬಹಳ ಮಟ್ಟಿಗೆ ಹೋಲುತ್ತದೆ.

ವಾವಿಲೋವನು ತನ್ನ ವಿಶ್ವ ಸಂಚಾರದಲ್ಲಿ ಸುಮಾರು ೬೦ ರಾಷ್ಟ್ರಗಳನ್ನು ಸಂದರ್ಶಿಸಿ, ಯಾವ ಯಾವ ಭಾಗದಲ್ಲಿ ಯಾವ ಯಾವ ಬೆಳೆಗಳು ಜನ್ಮವೆತ್ತಿದುವು ಎಂದು ನಿರ್ಧರಿಸಿ, ಪ್ರಪಂಚದ ಕೇವಲ ೮ ಕೇಂದ್ರಗಳಲ್ಲಿ ಮಾತ್ರ ಎಲ್ಲ ಬೆಳೆಗಳೂ ಹುಟ್ಟಿವೆ ಎಂಬ ತೀರ್ಮಾನಕ್ಕೆ ಬಂದನು. ಅವು ಕ್ರಮವಾಗಿ ಚೀನ, ಭಾರತ ಮತ್ತು ಮಲಯಾ, ಮಧ್ಯ ಏಶ್ಯಾ, ಸಮೀಪ ಪ್ರಾಚ್ಯ (ರಶ್ಯಾಕ್ಕೆ), ಭೂಮಧ್ಯ ಸಮುದ್ರ ತೀರ, ಅಬಿಸೀನಿಯಾ, ಮೆಕ್ಸಿಕೊ ಮತ್ತು ದಕ್ಷಿಣ ಅಮೇರಿಕಾ (ಪೆರು, ಬೊಲಿವಿಯ ಮತ್ತು ಚಿಲಿ). ವೈಯಕ್ತಿಕ ಸುಖ ಸೌಕರ್ಯಗಳನ್ನಪೇಕ್ಷಿಸದೆ, ಕಾಡು ಮೇಡುಗಳು, ಸುಂದರ ರಸ್ತೆಗಳು, ಕಾಲುಹಾದಿಗಳು ಇವುಗಳ ತಾರತಮ್ಯವಿಲ್ಲದೆ ವಾವಿಲೋವ್ ಎಲ್ಲ ಕಡೆ ಯಾತ್ರೆ ಮಾಡಿದನು. ಆತ ಸಂದರ್ಶಿಸಬೇಕೆಂದು ಬಹಳವಾಗಿ ಹಂಬಲಿಸುತ್ತಿದ್ದ ದೇಶ ಭಾರತ. ಇದಕ್ಕೆ ಭಾರತ ಸರಕಾರದ ಅನುಮತಿ ಕೇಳಿದನು. ಆದರೆ, ಇಂಥ ಮಹಾ ವಿಜ್ಞಾನಿಯನ್ನು ಸ್ವಾಗತಿಸಿ ತನ್ನ ಘನತೆಯನ್ನು ಹೆಚ್ಚಿಸಿಕೊಳ್ಳುವುದು ಆಗ ಭಾರತ ಸರಕಾರಕ್ಕೆ ಬೇಕಾಗಿರಲಿಲ್ಲ. ಅವನ ಬೇಡಿಕೆಯನ್ನು ಸರಕಾರ ಖಡಾಖಂಡಿತವಾಗಿ ತಿರಸ್ಕರಿಸಿತು. ಭಾರತದಲ್ಲಿ ಕಮ್ಯು

ಇತ್ತು! ಅನಂತರ ೧೯೩೭ ರ ಸೆಪ್ಟಂಬರ್ ಅಥವಾ ಅದೇ ಮುಂದಿನ ಚಳಿಗಾಲದಲ್ಲಿ ಭೇಟಿ ಮಾಡಬಹುದೆಂದು ಬ್ರಿಟಿಶರು ವಾವಿಲೋವನಿಗೆ ಮತ್ತೆ ಪತ್ರ ಬರೆದರು. ಆದರೆ ಆಗಲೇ ತಡವಾಗಿ ಹೋಗಿತ್ತು. ವಾವಿಲೋವನ ಭಾಗ್ಯಚಕ್ರ ತಿರುಗಿತ್ತು. ಯು. ಎಸ್. ಎಸ್. ಆರ್. ಸರಕಾರ ವಾವಿಲೋವನಿಗೆ ಪ್ರಯಾಣಕ್ಕೆ ಅನುಮತಿಯನ್ನು ನಿರಾಕರಿಸಿತು. ಒಮ್ಮೆ ಆತ ಭಾರತಕ್ಕೆ ಬಂದು ಹೋಗಿದ್ದರೆ ಅದೆಂಥ ಅಮೂಲ್ಯ ಅಂಶಗಳನ್ನು ಹೊರಗೆಡಹುತ್ತಿದ್ದನೋ ಯಾರಿಗೆ ಗೊತ್ತು?

ವಾವಿಲೋವ್ ತನ್ನ ಕಾರ್ಯನಿರತ ಜೀವನದಲ್ಲಿ ಪೆಡತಲೆಯ ಮೃತ್ಯುವಿನಿಂದ ಮುಂದೂಡಲ್ಪಟ್ಟವನಂತೆ ದುಡಿಯುತ್ತಿದ್ದ. ಅವನಿಗೆ ವಿಷಾರಾಮವೆಂದರೇನೆಂದೇ ತಿಳಿದಿರಲಿಲ್ಲ. ಹಣದ ಆಸೆಯೂ ಇರಲಿಲ್ಲ. ದಿನಕ್ಕೆ ಕೇವಲ ನಾಲ್ಕಾರು ಗಂಟೆ ವಿಶ್ರಾಂತಿಯನ್ನು ಪಡೆಯುತ್ತಿದ್ದ. ವಾವಿಲೋವನೊಡನೆ ಕೆಲಸ ಮಾಡಲು ಅವನ ಅನೇಕ ಸಹವರ್ತಿಗಳಿಗೆ ಎಷ್ಟೋ ವೇಳೆ ಬೇಸರವೆನಿಸುತ್ತಿತ್ತು. ಮನೆಯಿತ್ತೇ? ಅದೂ ಇಲ್ಲ. ಅವನು ದುಡಿಯುತ್ತಿದ್ದ ಸಂಸ್ಥೆಯ ಒಂದು ಕೊಠಡಿಯಲ್ಲಿ ಹಳೆಯ ಹಾಸಿಗೆಯ ಮೇಲೆ ಮಲಗುತ್ತಿದ್ದ. ಪಾಕಶಾಸ್ತ್ರದ ಗಂಧವೇ ಇಲ್ಲದ ಬಾಗಿಲು ಕಾಯುವವನ ಹೆಂಡತಿಯೊಬ್ಬಳು ಬೇಯಿಸಿ ಹಾಕುತ್ತಿದ್ದ ಆಹಾರದಿಂದ ಹೇಗೋ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಕೆಲ ಕಾಲಾನಂತರ ಅವನೊಡನೆ ದುಡಿಯುತ್ತಿದ್ದ ಇ. ಐ. ಬಾರುಲಿನಾಳೊಡನೆ ವಿವಾಹವಾಯಿತು. ವಿವಾಹವಾದ ಮೊದಮೊದಲಿಗೆ ಶ್ರೀಮತಿ ವಾವಿಲೋವ್ ತನಗೆ ಬರುತ್ತಿದ್ದ ಅಲ್ಪ ಸಂಬಳದಲ್ಲೇ ಸಂಸಾರವನ್ನು ನಿರ್ವಹಿಸಬೇಕಿತ್ತು. ಕಾರಣ, ಹೆಂಡತಿಗಿಂತ ಅನೇಕ ಪಟ್ಟು ಹೆಚ್ಚು ಸಂಬಳ ಪಡೆಯುತ್ತಿದ್ದ ಗಂಡ ಕಂಡಕಂಡವರಿಗೆ (ಅಲ್ಪ ಪರಿಚಯಸ್ಥರಾದರೂ ಸಹ) ದಾನ ಕೊಟ್ಟುಬಿಡುತ್ತಿದ್ದ.

ಕೂಡ ತನ್ನ ಸಹಪಾಠಿಗಳೊಡನೆ, ವಿದೇಶೀಯರೊಡನೆ ಅವನು ತೋರುತ್ತಿದ್ದ ಸೌಜನ್ಯವನ್ನು ಅನೇಕರು ಹೊಗಳಿದ್ದಾರೆ. ಅವನು ಅನುವರ್ತಿಗಳೊಡನೆ ಸಂಭಾಷಿಸುತ್ತಿದ್ದ ರೀತಿ ಚೇತೋಹಾರಿಯಾಗಿರುತ್ತಿತ್ತು; ಚಿಕ್ಕ ಪರೆಯದವರಿಗೆ ಯಾವಾಗಲೂ ಬೆನ್ನು ತಟ್ಟಿ ಪ್ರೋತ್ಸಾಹಿಸುತ್ತಿದ್ದನು. ರಾಜಕಾರಣದಲ್ಲಿ ಆತನಿಗೆ ಆಸಕ್ತಿ ಇರಲಿಲ್ಲ. ಕಮ್ಯೂನಿಸಂ ಅಥವಾ ಪ್ರಜಾಪ್ರಭುತ್ವ ಇತ್ಯಾದಿಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ ಕ್ರಾಂತಿ ದೇಶದ ಏಳ್ಗೆಗೆ ಸಹಕಾರಿ ಎಂದಷ್ಟು ನಂಬಿದ್ದ. ಒಂದೆಡೆ ಆತನೇ ಹೇಳಿದಂತೆ, "ಮಾನವಕೋಟಿಗೆ ಸೇವೆ ಸಲ್ಲಿಸಲು ರಷ್ಯಾದಲ್ಲಿರುವ ಅವಕಾಶಗಳು ಅನೇಕ; ಅವರಿಗೋಸ್ಕರ (ಜನತೆಗೋಸ್ಕರ)ವಾಗಿಯಾದರೂ ಅಲ್ಲಿಯ (ರಷ್ಯಾದ) ಅಧಿಪತ್ಯದ ಕ್ರೌರ್ಯವನ್ನು ಕಡೆಗಣಿಸಬೇಕು." ರಷ್ಯಾದ ಜನತೆ ತನ್ನ ವಿಜ್ಞಾನಿಗಳಿಗೆ ನೀಡುವಂಥ ಗೌರವವನ್ನು ಪ್ರಪಂಚದ ಬೇರಾವುದೇ ದೇಶದ ಜನತೆಯೂ ನೀಡುವುದಿಲ್ಲ ಎಂದು ಅವನು ನಿಕಟವರ್ತಿಗಳಿಗೆ ಹೇಳುತ್ತಿದ್ದ.

೧೯೩೯ ರಲ್ಲಿ ರಷ್ಯಾದಲ್ಲಿ ನಡೆದ ವೈಜ್ಞಾನಿಕ ಸಮ್ಮೇಳನದಲ್ಲಿ ೧೪೦೦ ಜನ ಭಾಗವಹಿಸಿ, ೩೪೮ ವೈಜ್ಞಾನಿಕ ಲೇಖನಗಳನ್ನು ಓದಿದರು. ಅದರ ಅಧ್ಯಕ್ಷಸ್ಥಾನದಲ್ಲಿದ್ದ ವಾವಿಲೋವ್ ಎಲ್ಲ ಲೇಖನಗಳನ್ನೂ ಆಸಕ್ತಿಯಿಂದ ಆಲಿಸಿದ. ಓದಲ್ಪಟ್ಟ ಒಂದು ಲೇಖನದಲ್ಲಿ ಸಹಾಯಕ ಬರಹಗಾರನಾಗಿ ಟಿ. ಡಿ. ಲೈಸೆಂಕೋ ಎಂಬುವನೊಬ್ಬ ಸೇರಿದ್ದ. ಆ ಲೇಖನ ಅಂದಿನ ಸಮ್ಮೇಳನದಲ್ಲಿ ಹೇಳಿಕೊಳ್ಳುವಂಥ ಪ್ರತಿಕ್ರಿಯೆಯನ್ನೇನೂ ಉಂಟು ಮಾಡದೇ, "ಪತ್ತರದಲ್ಲಿ ಮತ್ತೊಂದಾಗುಳಿ"ಯಿತು. ಈ ಲೇಖನವೂ ಅದರ ಸಹಲೇಖಕ ಲೈಸೆಂಕೊವೂ ವಾವಿಲೋವನ ಪಾಲಿಗೆ ದುರದೃಷ್ಟದ ಪರಿಕಾರರಾಗಬಹುದೆಂದು ಯಾರೂ ಊಹಿಸುವಂತಿರಲಿಲ್ಲ. ಆದರೆ ಈ ಲೈಸೆಂಕೋ ಕ್ರಮೇಣ ಪ್ರಬಲಿಸಿಕೊಂಡ. ಇವನ ವಾದಗಳು ಕ್ಷುಲ್ಲಕವಾಗಿದ್ದವು. ಅವನು ಹೇಳಿಕೊಳ್ಳುವಂಥ ವಿಜ್ಞಾನಿಯಾಗಿರಲಿಲ್ಲ. ಒಬ್ಬ ಸಾಮಾನ್ಯ ಸಸ್ಯ ತಳಿಗಾರ(plant breeder)ನಾಗಿದ್ದ. ಆದರೆ ರಾಜಕೀಯದಲ್ಲಿ ಅವನು ಎತ್ತಿದ ಕೈ. ಅವನು ಸುಳ್ಳುಕತೆ, ಪುರಾಣಗಳು, ಆಧಾರರಹಿತ ಹೇಳಿಕೆಗಳು ಮುಂತಾದವುಗಳ ಮೂಲಕ ವಾವಿಲೋವ್ ಮಾಡುತ್ತಿರುವುದು, ಪಾಶ್ಚಾತ್ಯ ದೇಶಗಳಲ್ಲಿ ಅಭಿವೃದ್ಧಿಯಾದ ವಿಜ್ಞಾನಗಳ ಬರೀ ಅನುಕರಣೆ ಎಂದು ಸಾಧಿಸಿದ. ಮೆಂಡೆಲ್ಲನ ಆನುವಂಶೀಯ ತತ್ತ್ವಗಳು ಮತ್ತು ಅದರ ಮೇಲೆ ರೂಪಿತವಾದ ಸಂಶೋಧನೆಗಳೆಲ್ಲ ಸುಳ್ಳು; ವಾವಿಲೋವ್ ಮೆಂಡೆಲ್ಲನ ಅನುಯಾಯಿ. ಮೆಂಡೆಲ್ ಹೇಳುವಂತೆ ಜೀನಿಗಳು, ಅಂದರೆ ಆನುವಂಶಿಕತೆ, ಜೀವಿಗಳ ಗುಣಗಳನ್ನು ನಿಯಂತ್ರಿಸುವುದಿಲ್ಲ. ಅದರ ಬದಲು ಪರಿಸರವು ಹೊಸ ಗುಣಗಳನ್ನು ಸೃಷ್ಟಿಸಬಲ್ಲುದು. ಕೇವಲ ಕಸಿ ಕಟ್ಟುವಿಕೆಯಿಂದ, ಬಿಸಿ ನೀರಿನಲ್ಲಿ ಕೆಲವು ಗಿಡ, ಬೀಜಗಳನ್ನದ್ದುವುದರಿಂದ ಆನುವಂಶಿಕತೆಯನ್ನೇ ಬದಲಿಸಬಹುದು ಎಂದು ಪ್ರಚಾರ ಮಾಡಿದ. ಎಲ್ಲೆಡೆ ತನ್ನ ಗುಂಪು ಕಟ್ಟಿಕೊಂಡ. ಆತ ತಾನೇ ಕಂಡುಹಿಡಿದೆನೆಂದು ಹೇಳಿಕೊಳ್ಳುತ್ತಿದ್ದ ಹೇಳಿಕೊಂಡು ತಿರುಗುತ್ತಿದ್ದ 'ವರ್ನಲೈಜೇಷನ್' ಎಂಬ ಬೀಜೋಪಚಾರ ವಿಧಾನವನ್ನು ಅಮೆರಿಕದಲ್ಲಿ ಇವನಿಗಿಂತ ಹತ್ತು ವರ್ಷಗಳ ಹಿಂದೆಯೇ ಕಂಡುಹಿಡಿದಿದ್ದರು. ಇವನ ಜೊತೆಗೆ ಐ. ಎವ್ ಪಾಲಿಯಕೋವ್ ಎಂಬುವನೊಬ್ಬನು ಸೇರಿ ಇಬ್ಬರೂ ಸ್ಟಾಲಿನ್ನನನ್ನು ಮರುಳುಗೊಳಿಸಿದರು. ಯಃಕಶ್ಚಿತ್ ಕಪಟವಿಜ್ಞಾನಿಯೊಬ್ಬನ ಹಾರಾಟಗಳೆದುರು ವಾವಿಲೋವ್ ಸುಮ್ಮನೇ ಕುಳಿತುಕೊಳ್ಳಬೇಕಾಯಿತು.

ವಾವಿಲೋವ್ ಸ್ಟಾಲಿನ್ ಸರಕಾರದ ದೃಷ್ಟಿಯಲ್ಲಿ ಸಂಶಯಾಸ್ಪದ ವ್ಯಕ್ತಿಯಾದ. ಎಡಿನ್ ಬರೋದ ಅಂತಾರಾಷ್ಟ್ರೀಯ ಪ್ರಜನನಶಾಸ್ತ್ರ ಸಮ್ಮೇಳನಕ್ಕೆ ೧೯೩೯ ರ ಅಗಸ್ಟಿನಲ್ಲಿ ಆತನಿಗೆ ಹೋಗಲಾಗಲಿಲ್ಲ. ಅದೇ ವರ್ಷ ಅಕ್ಟೋಬರಿನಲ್ಲಿ 'ಪ್ರಜನನಶಾಸ್ತ್ರ ಮತ್ತು ಆಯ್ಕೆ' ಎಂಬ ವಿಷ

# ಇದು ಕಮ್ಯುನಿಸ್ಟ್ ಸತ್ಯ

ಸಮಕಾಲೀನ ಪ್ರಜನನ ವಿಜ್ಞಾನಿಗಳಲ್ಲಿ ಶ್ರೇಷ್ಠಕೋಟಿಯವನಾದ ವಾವಿಲೋವನ ದುರಂತವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಕಮ್ಯುನಿಸ್ಟ್ "ಮತ"ದ ಸಂಪ್ರದಾಯವನ್ನೂ ಯುದ್ಧಪೂರ್ವದ ರಶಿಯದ ನಾಯಕರುಗಳ ಸಮಸ್ಯೆಗಳನ್ನೂ ತಿಳಿದುಕೊಳ್ಳಬೇಕು.

ಮನುಷ್ಯಸ್ವಭಾವವನ್ನು ಬದಲಿಸಿ ಅವನನ್ನು ಸಮೂಹಕ್ಕೋಸ್ಕರ ಸ್ವಾರ್ಥವನ್ನು ಮರೆಯುವ ಜೀವಿಯಾಗಿ ಮಾಡಲು ಸಾಧ್ಯವಿದೆ ಎಂಬುದು ಕಮ್ಯುನಿಸ್ಟ್ ಮತದ ಮೂಲ ವಿಶ್ವಾಸಗಳಲ್ಲಿ ಒಂದು. ವಾವಿಲೋವ್ ಮತ್ತು ಪ್ರಜನನಶಾಸ್ತ್ರದ ಮೂಲಪ್ರವರ್ತಕನಾದ ಮೆಂಡೆಲ್ ಪ್ರತಿಪಾದಿಸಿದ ತತ್ವಗಳಲ್ಲಿ ಜೀವದ ಲಕ್ಷಣಗಳು ಅವರ ಜೀನಿಗಳಲ್ಲಿ ನಿಹಿತವಾದ ಆನುವಂಶಿಕ ಗುಣಗಳಿಂದ ನಿರ್ಧರಿಸಲ್ಪಡುತ್ತವೆ ಎಂಬುದೂ ಒಂದು. ಜೀವಜಾತಿಗಳ ಭೌತ ಲಕ್ಷಣಗಳು ಪರಿಸರದಿಂದ ಅಷ್ಟೇನೂ ಬದಲಾಗುವುದಿಲ್ಲ ಎಂದು ಇದರ ಅರ್ಥ. ಅರ್ಥಾತ್ ಮನುಷ್ಯಪ್ರಯತ್ನದಿಂದ ನಾಯಿಯ ಬಾಲ ನೆಟ್ಟಗಾಗದು ಅಂದ ಹಾಗೆ. ಈ ಮೆಂಡೆಲ್ ತತ್ವ ಕಮ್ಯುನಿಸ್ಟ್ ಸಿದ್ಧಾಂತಿಗಳಿಗೆ ಸ್ವಲ್ಪ ತೊಡಕಾಗುತ್ತದೆ. ನಾಯಿಯ ಬಾಲವನ್ನು ನೆಟ್ಟಗೆ ಮಾಡುವುದಕ್ಕೆ ಮನುಷ್ಯರಿಂದಾಗದು ಎಂದೊಪ್ಪಿದರೆ ಮನುಷ್ಯ ಸ್ವಭಾವವನ್ನು ಬದಲಿಸಿ ನಿರ್ದುಷ್ಟ ಕಮ್ಯುನಿಸ್ಟ್ ಲೋಕವನ್ನು ಕಟ್ಟುವುದು ಸಾಧ್ಯ ಎಂಬ ತತ್ವ ದುರ್ಬಲವಾಗುವುದಿಲ್ಲವೇ ? ಎಲ್ಲ ಮತಾಂಧರ ಹಾಗೆ ಕಮ್ಯುನಿಸ್ಟ್ ಸಿದ್ಧಾಂತಿಗಳು ಕೂಡ ತಮ್ಮ ಸಿದ್ಧಾಂತದ ಕಬ್ಬಿಣದ ಚೌಕಟ್ಟಿಗೆ ವಿರುದ್ಧವಾದ ಸತ್ಯಗಳನ್ನು ಕೂಡ ನಂಬಬಾರದೆಂಬ ಮನೋಭಾವದಲ್ಲಿರುತ್ತಾರೆ. ವಾವಿಲೋವ್ ಮಹಾವಿಜ್ಞಾನಿ ಇರಬಹುದು. ಆದರೆ ಅವನು ಕಂಡುಹಿಡಿದ ಸಂಗತಿಗಳು ಕಮ್ಯುನಿಜಂಗೆ ಗಂಡಾಂತರ ತರುವಂತಿದ್ದರೆ ಅವನು ಹೋಗಲೇಬೇಕು!

೧೯೨೪ರಲ್ಲಿ ಲೆನಿನ್ ಮೃತಿ ಹೊಂದಿದ ನಂತರ ಕಮ್ಯುನಿಸ್ಟ್ ನಾಯಕರಲ್ಲಿ ನಡೆದ ಅಧಿಕಾರ ಕಲಹದಲ್ಲಿ ಸ್ಟಾಲಿನ್ ೧೯೨೮ ರ ಹೊತ್ತಿಗೆ ಜಯಶಾಲಿಯಾದರೂ ರಶಿಯದ ಕಮ್ಯುನಿಸ್ಟ್ ಸತ್ತೆಗೆ ಒಳಗಿಂದಲೂ ಹೊರಗಿಂದಲೂ ಅಪಾಯಗಳು ಬಹಳವಾಗಿದ್ದವು. ಈ ಸ್ಥಿತಿಯಲ್ಲಿ ಕಲೆ, ಸಾಹಿತ್ಯ, ವಿಜ್ಞಾನ ಇವೆಲ್ಲವುಗಳನ್ನೊಳಗೊಂಡು ಜನರ ಜೀವನದ ಸಕಲ ಅಂಗಗಳ ಮೇಲೂ ಬಿಗಿಯಾದ ಹಿಡಿತವಿಡುವುದು ಅಗತ್ಯವೆಂದು ಸ್ಟಾಲಿನ್‌ವಾದಿಗಳಿಗೆ ತೋರಿತು. ಎಲ್ಲವೂ ಕಮ್ಯುನಿಸ್ಟ್ ಪಾರ್ಟಿಯ ಅಂಕಿತಕ್ಕೊಳಪಡಬೇಕೆಂದು ಅವರು ಬಯಸಿದರು. ಇದು ಸಂದರ್ಭಸಾಧಕರಿಗೆ ಒಳ್ಳೇ ಅವಕಾಶ ದೊರಕಿಸಿಕೊಟ್ಟಿತು. ಅವರು ರಾಜಕೀಯದಲ್ಲಿ ಸೇರಿದರು. ಇಂಥ ಸಾಹಿತಿಗಳೂ ವಿಜ್ಞಾನಿಗಳೂ ತಾವು ಸಾಮಾನ್ಯತರದವರಾದರೂ ಶ್ರೇಷ್ಠ ವಿಜ್ಞಾನಿಗಳನ್ನೂ ಆಳಲು ಸಮರ್ಥರಾದರು. ಲೈಸೆಂಕೋ ಅಂಥವರಲ್ಲಿ ಒಬ್ಬ. ಅವನು ಕಮ್ಯುನಿಸ್ಟ್ ತತ್ವಗಳಿಗನುಗುಣವಾಗಿಯೇ ತನ್ನ ಸಿದ್ಧಾಂತಗಳನ್ನು ರೂಪಿಸಿದ. ಪರಿಸರದಿಂದ ಜೀನಿಗಳ ಗುಣ ಲಕ್ಷಣಗಳನ್ನು ಬದಲಿಸಬಹುದೆಂಬುದೇ ಅವನ ಪ್ರತಿಪಾದನೆಯಾಗಿತ್ತು. ಅದು ಸತ್ಯಕ್ಕೆ ವಿರುದ್ಧವಾಗಿದ್ದರೆ ಆ ಸತ್ಯವನ್ನೇ ಆತ ಮೂಲೆಗುಂಪು ಮಾಡಿದ. ಇದು ಕಮ್ಯುನಿಸ್ಟ್ ಮಠಾಧಿಪತಿಗಳಿಗೆ ಪಥ್ಯವಾಯಿತು.

ಆನುವಂಶಿಕತೆಯನ್ನು ಮನುಷ್ಯಯತ್ನದಿಂದ ಬದಲಿಸಬಹುದೆಂಬ ಲೈಸೆಂಕೋವಾದವು ಸಸ್ಯಪ್ರಪಂಚಕ್ಕೆ ಅನ್ವಯವಾದಾಗ ಬೆಳೆಗಳ ಗುಣಲಕ್ಷಣಗಳನ್ನು ಬದಲಿಸಿ ತನ್ಮೂಲಕ ಬೆಳೆಗಳನ್ನೂ ಬೇಕಾದಂತೆ ಹೆಚ್ಚಿಸಬಹುದೆಂಬ ಫಲಿತಾಂಶ ಬರುತ್ತದೆ. ಯಾವಾಗಲೂ ಕೃಷಿರಂಗದಲ್ಲಿ ಸಾಕಷ್ಟು ಉತ್ಪಾದನೆಯಿಲ್ಲದೆ ಕಷ್ಟಪಡುತ್ತಿದ್ದ ಕಮ್ಯುನಿಸ್ಟರಿಗೆ ಇದು ಆಶಾಜ್ಯೋತಿಯೂ ಆಗಿತ್ತು. ಅದನ್ನವರು ಸುಲಭವಾಗಿ ನಂಬಿದರು. ಉತ್ಪಾದನೆ ಹೆಚ್ಚುವ ಸುಳ್ಳು ಭರವಸೆಯ ಬೆನ್ನುಹತ್ತಿ ರಶಿಯನ್ ಜೀವವಿಜ್ಞಾನ ರಂಗದಿಂದ ಶ್ರೇಷ್ಠ ವಿಜ್ಞಾನಿಗಳನ್ನು ಹೊರತಳ್ಳಿದ್ದಾಯಿತು. ಬೆಳೆ ಹೆಚ್ಚಲಿಲ್ಲ, ಸತ್ಯವನ್ನು ಎರಡು ದಶಕ ಕಾಲ ಮುಚ್ಚಿಟ್ಟರು ಮಾತ್ರ.

ಯುದ ಬಗ್ಗೆ ವಿಚಾರ ಸಂಕಿರಣವೊಂದು ರಷ್ಯಾದಲ್ಲಿ ಜರುಗಿತು. ಅದರಲ್ಲಿ ಮೆಂಡೆಲ್ ಮತ್ತು ಡಾರ್ವಿನ್ನರ ವಾದಗಳ ಬಗ್ಗೆ ಬಿಸಿಯಾದ ಚರ್ಚೆ ನಡೆಯಿತು. ಆಗ, "ನೀವು ವಿದೇಶೀಯ ವಿಜ್ಞಾನದ ಮುಂದೆ ಕೂಲಿಕಾರರಂತೆ ತಲೆಬಾಗುವುದು ಬೇಡ," ಎಂದು ಪಾಲಿಯಕೋವ್ ಹೇಳಿದ; ಅಂದಿನ ಸಮ್ಮೇಳನಕ್ಕೆ ಅಧ್ಯಕ್ಷನಾಗಿದ್ದ ಲೈಸೆಂಕೋ ಮುಗುಳ್ನಕ್ಕ. ಮಹಾನ್ ವಿಜ್ಞಾನಿಯೊಬ್ಬನನ್ನು ಕೆಳಗಿಳಿಸಲು ಈ ಕಪಟ ವಿಜ್ಞಾನಿ ಹತ್ತು ವರ್ಷಗಳ ಕಾಲ ಹೆಣಗಿದ್ದ.

ಪಾಶ್ಚಾತ್ಯ ವಿಜ್ಞಾನಿಗಳನ್ನು ಅನುಮೋದಿಸಿದ ದೇಶದ್ರೋಹಿ ಎಂದು ವಾವಿಲೋವನ ಮೇಲೆ ದೂರು ಹೊರಿಸಿದರು. ತತ್ಫಲವಾಗಿ ೧೯೪೦ರಲ್ಲಿ ಅವನನ್ನು ಸೆರೆಹಿಡಿದರು. ೧೯೪೧—೪೨ರಲ್ಲಿ ಸರತೋವ್‌ನಲ್ಲಿ ಆತ ಕೈದಿಯಾಗಿದ್ದ. (ಅಲ್ಲಿಯ ವಿಶ್ವವಿದ್ಯಾನಿಲಯದಲ್ಲೇ ಆತ ಪ್ರೊಫೆಸರನಾಗಿದ್ದುದನ್ನೂ ನೆನೆಸಿಕೊಳ್ಳಬಹುದು.) ಅಲ್ಲಿಂದ ರಷ್ಯಾದ ಚಳಿ ಪ್ರದೇಶವಾದ ಸೈಬೀರಿಯಾದ ಮಗದಾನ್ ಪ್ರದೇಶಕ್ಕೆ ವರ್ಗಾವಣೆ. ಬಲಾತ್ಕಾರವಾಗಿ ಕೈದಿಗಳಿಂದಲೇ ಕಟ್ಟಿಸಿದ ಸೆರೆಮನೆಯಲ್ಲಿ ವಾಸ. ಆ ಪ್ರದೇಶದ ಚಳಿ ಮೈ ಮರಗಟ್ಟಿಸುವಂಥದು. ಶತ್ರುಗಳಿಗೂ ಬೇಡವಾದಂಥ ಹೀನ ವಾತಾವರಣದಲ್ಲಿ ದುರ್ಭರ ಜೀವನವನ್ನು ಸಾಗಿಸುತ್ತಾ ಚಿಂತೆ, ದುಃಖಗಳನ್ನು ಅವನು ಸಹಿಸಬೇಕಾಯಿತು. ಎಂದೂ ಎದೆಗುಂದದಿದ್ದ ಜೀವಕ್ಕೆ ಕಾರ್ಮೋಡಗಳ ಕತ್ತಲೆ ಆವರಿಸಿತು: ಈ ಕಷ್ಟಕರ ಜೀವನದಿಂದ ಅವನ ಬಿಡುಗಡೆಯಾದದ್ದು ೧೯೪೨ರ ಮೊದಲ ಭಾಗದಲ್ಲಿ—ಮರಣದ ಮೂಲಕ! ಅದೇ ವರ್ಷ ಬ್ರಿಟನ್ನಿನ ರಾಯಲ್ ಸೊಸೈಟಿಗೆ ವಿದೇಶೀಯ ಸದಸ್ಯನನ್ನಾಗಿ ವಾವಿಲೋವನನ್ನು ಆಯ್ಕೆ ಮಾಡಿದ್ದು ಅವನಿಗೆ ತಿಳಿಯುವುದಕ್ಕೆ ಮುಂಚೆಯೇ ಈ ಪ್ರಪಂಚದಿಂದ ಆತ ಬಹು ದೂರಕ್ಕೆ ಸರಿದು ಬಿಟ್ಟಿದ್ದ. ✡



**ನನ್ನ ಗೆಳೆಯರೊಂದಿಗೆ 'ಎಕ್ಸ್ಪೊ ೭೦' ನೋಡಲು ಹೋದ ಸಂದರ್ಭವಿದು. ಅಲ್ಲಿ ಹೋಟೆಲೊಂದರಲ್ಲಿ ಉಳಿದುಕೊಂಡಿದ್ದೆವು. ಬೇಸರ ಕಳೆಯಲು ಇಸ್ಪೀಟ್ ಪ್ಯಾಕುಗಳನ್ನು ತರಲು ನಮಗಾರಿಗೂ ನೆನಪಾಗಿದ್ದಿಲ್ಲ. ಜಪಾನಿನಲ್ಲಿ ತಯಾರಾದ ಇಸ್ಪೀಟು ಪ್ಯಾಕುಗಳು, ಭಾರತದಲ್ಲಿ ಪ್ರಸಿದ್ಧವೆಂಬುದು ಗೊತ್ತಿದ್ದ ನಾವು ಪೇಟೆಯಲ್ಲಿ ವಿಚಾರಿಸತೊಡಗಿದೆವು. ನಮ್ಮ ಆಶ್ಚರ್ಯಕ್ಕೆ, ಅಲ್ಲಿ ಯಾವ ಅಂಗಡಿಯಲ್ಲಿಯೂ ಸಿಗಲಿಲ್ಲ. ಕೊನೆಗೆ ಧೈರ್ಯ ಮಾಡಿ ನನ್ನ ಗೆಳೆಯನೊಬ್ಬ ಕೇಳಿಯೇಬಿಟ್ಟ, "ಭಾರತದಲ್ಲಿ ನಿಮ್ಮ ದೇಶದ ಪ್ಯಾಕುಗಳು ಬೇಕಾದಷ್ಟು ಸಿಗುತ್ತವೆ. ಆದರೆ ಅದು ತಯಾರಾಗುವ ಜಪಾನಿನಲ್ಲಿಯೇ ಏಕೆ ಇಲ್ಲ?" ಎಂದು. ಅಂಗಡಿಯವರ ಉತ್ತರ ಕೇಳಿ ತಣ್ಣೀರೆರಚಿದಂತಾಯಿತು. ಅವನು ತುಸು ಅನುಮಾನಿಸುತ್ತ, ಸ್ವಲ್ಪ ಕುಹಕದಿಂದಲೇ ಹೇಳಿದ: "ನಾವು ಅದನ್ನು ರಫ್ತಿಗಾಗಿ ಮಾತ್ರ ಉತ್ಪಾದಿಸುತ್ತೇವೆ. ಅದನ್ನು ಆಡಲು ನಮಗೆ ವೇಳೆ ಇಲ್ಲ." ನಮಗೆ ಅವನ ಅಮೂಲ್ಯವಾದ ಸಮಯವನ್ನೆಲ್ಲಿ ಹಾಳು ಮಾಡುತ್ತಿದ್ದೇವೋ ಎಂಬ ಭಾವನೆಯುಂಟಾಯಿತು. ಯುದ್ಧದಲ್ಲಿ ಸರ್ವನಾಶವಾದ ಜಪಾನು, ಮುಂದೆ ಕೈಗಾರಿಕೆಗಳಲ್ಲಿ ಮುಂದುವರಿದು ಜಗತ್ತಿನ ಪ್ರಮುಖ ರಾಷ್ಟ್ರವಾಗಲಿಕ್ಕೆ ಸಮಯದ ಮಹತ್ವ ಅರಿತುಕೊಂಡದ್ದೇ ಕಾರಣ ಎಂದು ಮನಗಂಡು ಹೋಟೆಲಿಗೆ ಮರಳಿದೆವು**

**—ಪಿ. ಪ್ರಭಾಕರ**







# ಕೊಡೆಗಳ ಕತೆ

ಕರಸುಳ್ಳಿ ಪರಮೇಶ್ವರ ಶರ್ಮ

ಬಿಸಿಲು ತುಸು ಹೆಚ್ಚಾಗಿ ತಲೆಗೆ ಅದರ ಬಿಸಿ ತಗುಲಿತೆಂದರೆ ಒಡನೆಯೆ ನಾವು ಕೊಡೆಗಳನ್ನು ಬಿಚ್ಚುತ್ತೇವೆ. ಮಳೆಗಾಲದಲ್ಲಂತೂ ಕೊಡೆಯಿಲ್ಲದೆ ಹೊರಗೆ ಬೀಳುವುದೇ ಅಸಾಧ್ಯ. ಆದರೆ ಕೊಡೆ ಇಷ್ಟೊಂದು ಸರ್ವಸಾಮಾನ್ಯವಾಗಿರುವುದು ಇತ್ತೀಚಿನ ಒಂದೆರಡು ಶತಮಾನಗಳಲ್ಲಿ ಮಾತ್ರ. ಪ್ರಾಚೀನ ಕಾಲದಲ್ಲಿ ಕೆಲವು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹೀಗೆ ಕೊಡೆ ಬಿಡಿಸಿ ನಡೆದರೆ









೧. ಪ್ರಾಚೀನ ಪರ್ಶಿಯದ ಕೊಡೆ →

೨. ಅಸ್ಸೀರಿಯದ ಶಿಲ್ಪವೊಂದರಲ್ಲಿಯ ಕೊಡೆ.

೩. ದಕ್ಷಿಣ ಭಾರತದ ತಾಡೋಲೆಯ ಛತ್ರ.

೪. ಅಬಿಸೀನಿಯದ ಮಾದರಿ

೫. ಭಾರತೀಯ ರಾಜ ಛತ್ರ

೬. ಪಶ್ಚಿಮ ಆಫ್ರಿಕದ (ಗೋಲ್ಡ್ ಕೋಸ್ಟ್) ಅಶಾಂತಿ ದೇಶದ ಕೊಡೆ

ಅದನ್ನು ಅಪರಾಧವೆಂದು ತಿಳಿಯಲಾಗುತ್ತಿತ್ತು. ಆ ಕಾಲವಲ್ಲಿ 'ಛತ್ರ'ವು ಕೇವಲ ರಾಜಚಿಹ್ನೆಯಾಗಿತ್ತು. ರಾಜರಲ್ಲದೆ ಮಿಕ್ಕವರು ಅದನ್ನು ಉಪಯೋಗಿಸಕೂಡದೆಂಬ ಕಟ್ಟಳೆಯಿತ್ತು. ಛತ್ರವೆಂದರೆ ಒಬ್ಬ ಮನುಷ್ಯನ ಪದವಿ, ಅಂತಸ್ತುಗಳನ್ನು ಸಾರುವ ಚಿಹ್ನವೆಂಬ ಕಾರಣದಿಂದ ರಾಜರು ಹಾಗೂ ರಾಜಬಂಧುಗಳು ಮಾತ್ರ ಛತ್ರವನ್ನು ಉಪಯೋಗಿಸಲು ಅರ್ಹರೆಂದು ಹಿಂದಿನ ನಂಬುಗೆಯಾಗಿರಬೇಕು. ನಮ್ಮ ದೇಶದಲ್ಲಿ ಕೂಡ ಪುರಾತನ ಕಾಲದಲ್ಲಿ ದೇವರು, ರಾಜರು, ದೇವಾಲಯಾಧಿಕಾರಿಗಳು, ಮಠಾಧಿಪತಿಗಳು ಇವರಿಗೆ ಮಾತ್ರವೇ ಛತ್ರಿಗಳನ್ನು ಉಪಯೋಗಿಸುವ ಅಧಿಕಾರವಿತ್ತು. ಪ್ರತಿಯೊಬ್ಬ ರಾಜನ ಒಡ್ಡೋಲಗದಲ್ಲೂ ಒಂದು ಬಿಳಿ ರೇಷ್ಮೆಯ ಕೊಡೆ ಇರುತ್ತಿತ್ತು. ಪ್ರಭುವಿನ ತಲೆಯ ಮೇಲೆ ಅದನ್ನು ಒಬ್ಬ ಸೇವಕನು ಪ್ರತ್ಯೇಕವಾಗಿ ಹಿಡಿದುಕೊಂಡು ನಿಲ್ಲಬೇಕಾದುದು. ಗೌರವಚಿಹ್ನೆ. ಈ ಕಾರಣದಿಂದಲೇ ರಾಜನನ್ನು 'ಛತ್ರಪತಿ' ಎಂದೂ ಕರೆಯಲಾಗುತ್ತದೆ.

ಇಜಿಪ್ಶಿಯನ್ ರಾಜಛತ್ರದ ಮಾದರಿ





ಚೀನೀ ರಾಜದೂತರು ಅರಸನೆದುರು ಹಿಡಿಯುತ್ತಿದ್ದ ರಾಜಛತ್ರ

ಪ್ರಾಚೀನ ಕಾಲದ ಆ ಅಭ್ಯಾಸ ನಮ್ಮ ದೇಶದಲ್ಲಿ ಅರಸೊತ್ತಿಗೆ ನಾಮಮಾತ್ರಕ್ಕಾದರೂ ಇರುವಷ್ಟು ಕಾಲವೂ ಅಲ್ಲಲ್ಲಿ ಕಾಣಸಿಗುತ್ತಿತ್ತು. ಧರ್ಮಕಾರ್ಯ ಸಂಬಂಧದ ಉತ್ಸವಾದಿಗಳಿಗೆ ಹೊರಟಾಗಲೆಲ್ಲ ರಾಜಮಹಾರಾಜರುಗಳ ಮುಂದುಗಡೆ ಈ ಬಗೆಯ ಶ್ವೇತಛತ್ರಗಳನ್ನು ಕಾಣಬಹುದಿತ್ತು. ಪ್ರತಿ ದೇವಾಲಯದಲ್ಲೂ ಮಠಗಳಲ್ಲೂ ಈ ಗೌರವಚಿಹ್ನೆಗಳನ್ನು ನೋಡಬಹುದು. ರಾಜಭವನಗಳ ಎದುರಿಗೆ ಯಾರೂ ಕೊಡೆಯನ್ನು ಬಿಚ್ಚಿಕೊಂಡು ನಡೆಯಕೂಡದೆಂಬ ಹಳೆಯ ರಾಜಶಾಸನವನ್ನು ಈಚಿನವರೆಗೆ ರಾಜಸ್ಥಾನದಲ್ಲಿ ಜನ ಪಾಲಿಸುವುದನ್ನು ಕಾಣಬಹುದಿತ್ತು. ಸಾಮಾನ್ಯವಾಗಿ ಪೌರ್ವಾತ್ಯ ದೇಶಗಳಲ್ಲೆಲ್ಲ ಈ ರೂಢಿಯು ಸರ್ವಸಾಧಾರಣವಾಗಿ ಆಚರಣೆಯಲ್ಲಿದೆ.

ಮಲೆಯಾಳ ದೇಶದಲ್ಲಿ ಸಾಧಾರಣವಾಗಿ ಎಲ್ಲರೂ ಕೊಡೆ ಹಿಡಿಯುವ ರೂಢಿಯಿದ್ದಿಲ್ಲ.



**೧೮ ನೆಯ ಶತಮಾನದ ಕೊಡೆ ಹಿಡಿದ ಆಂಗ್ಲ ಮಹಿಳೆ**

ಅಲ್ಲಿ ಉನ್ನತ ಪದವಿಯಲ್ಲಿರುವವರು ಮಾತ್ರವೇ ಛತ್ರಧಾರಿಗಳಾಗಬಹುದಿತ್ತು. ಚಕ್ರವರ್ತಿ ಧರಿಸುವ ಕೊಡೆ ಸ್ವರ್ಣವರ್ಣ ರಂಜಿತವಾಗಿರುತ್ತಿತ್ತು.

ಜಾವಾ ದ್ವೀಪದಲ್ಲಿ 'ಜಾವತ' ಎಂಬ ಹೆಸರಿನ ಚಿಕ್ಕ ಛತ್ರವನ್ನು ರಾಜರು ಪ್ರತ್ಯೇಕವಾಗಿ ಧರಿಸುತ್ತಿದ್ದರು. ಇದನ್ನಾದರೂ ಬಿಸಿಲು–ಮಳೆಗಳಲ್ಲಿ ಹಿಡಿದುಕೊಳ್ಳುವುದಿಲ್ಲ. 'ಶ್ವೇತಛತ್ರ'ವನ್ನು ಗೌರವಯುಕ್ತ ಸನ್ನಿವೇಶದಲ್ಲಿ ಪರಿವಾರದೊಂದಿಗೆ ಹೊರಟಾಗ ರಾಜದೂತನೊಬ್ಬನು ಮುಂದೆ ಹಿಡಿದುಕೊಂಡು ನಡೆಯಬೇಕಿತ್ತು.

ಬ್ರಹ್ಮದೇಶದಲ್ಲಿ ಕೂಡ ರಾಜಚಿಹ್ನ ನಮ್ಮಲ್ಲಿಯಂತೆಯೇ ರೇಷ್ಮೆಯ ಕೊಡೆ. ಅಲ್ಲಿ ಗೌತಮ ಬುದ್ಧನ ವಿಗ್ರಹಗಳ ಮೇಲೆ ಕೂಡ ಈ ಶ್ವೇತ ಛತ್ರವನ್ನೇ ಹಿಡಿಯುವರು. ತಲೆಯ ಮೇಲೆ ಈ ಬಿಳಿಯ ಕೊಡೆಯ ರಾಜಚಿಹ್ನವಿಲ್ಲದೆ ರಾಜನು ಮನೆ ಬಿಟ್ಟು ಹೊರಡಕೂಡದೆಂಬ ನಿಯಮವಿತ್ತು.

ಚೀನಾದೇಶದಲ್ಲಿ ರಾಜನು ಯಾರಿಗೆ ಈ ಬಗೆಯ ಛತ್ರವನ್ನು ಬಹುಮಾನವಾಗಿ ಕೊಟ್ಟಿರುವನೋ ಅವರು ಮಾತ್ರವೇ ಅದನ್ನು ರಾಜಸಭೆಯಲ್ಲಿ ಧರಿಸಬಹುದಿತ್ತು. ಚಿಕ್ಕ ಚಿಕ್ಕ ಉದ್ಯೋಗಗಳನ್ನು ಮಾಡತಕ್ಕವರು ಕಾಗದದ ಕೊಡೆಗಳನ್ನು ಮಾತ್ರ ಧರಿಸಬಹುದಿತ್ತು.

ಇಂಗ್ಲಂಡಿನಲ್ಲಿ ಕೂಡ ಹಿಂದೆ ಪ್ರಜೆಗಳು ಕೊಡೆಗಳನ್ನು ಸರ್ವಸಾಮಾನ್ಯವಾಗಿ ಬಳಸುವ ವಾಡಿಕೆಯಿರಲಿಲ್ಲ. ದೊಡ್ಡ ಮಳೆ ಸುರಿಯುತ್ತಿದ್ದಾಗ ಕೂಡ ಜನರು ನೆನೆದುಕೊಂಡು ಹೋಗುತ್ತಿದ್ದರೂ ಕೊಡೆ ಹಿಡಿಯುತ್ತಿರಲಿಲ್ಲ. ಆದರೆ ಇದಕ್ಕೆ ಕಾರಣ ಪೌರ್ವಾತ್ಯ ದೇಶಗಳಲ್ಲಿಯಂತೆ ಅದು ರಾಜರಿಗೆ ಮೀಸಲೆಂಬುದಲ್ಲ. ಅಲ್ಲಿ ಕೊಡೆ ಹಿಡಿಯುವವರು ಹೇಗಸರು ಮಾತ್ರ ಎಂಬ ಭಾವನೆಯಿತ್ತು. ೧೮ ನೆಯ ಶತಮಾನದ ಮಧ್ಯ ಭಾಗದಲ್ಲಿ ಜೋಸೆಫ್ ಹಾರ್ವೆ ಎಂಬೊಬ್ಬ ಧೀರನು ಪ್ರಜಾಭಿಪ್ರಾಯವನ್ನೂ ನಿಂದಾವಾಕ್ಯಗಳನ್ನೂ ಲಕ್ಷಕ್ಕೆ ತಾರದೆ ಧೈರ್ಯದಿಂದ ಮೊಟ್ಟಮೊದಲು ಕೊಡೆ ಹಿಡಿದುಕೊಂಡ. ಮುಂದೆ ಅವನು ತನ್ನ ಜೀವಮಾನವಿಡೀ ನಿತ್ಯವೂ ಮಳೆ ಬೀಳಲಿ, ಬೀಳದಿರಲಿ ಕೊಡೆ ಹಿಡಿಯುವುದನ್ನು ಮಾತ್ರ ಬಿಡಲಿಲ್ಲ. ೧೭೮೬ರಲ್ಲಿ ಆತ ಮೃತಪಟ್ಟ. ಆ ಹೊತ್ತಿಗಾಗಲೇ ಅವನ ಧೀರ ಪ್ರಯತ್ನದಿಂದ ಕೊಡೆ ಹೆಚ್ಚು ಸಾರ್ವಜನಿಕವಾಗಿತ್ತು. ಅದಕ್ಕೆ ಶಾಪವಿಮೋಚನೆ ದೊರೆತಂತಾಗಿ ಎಲ್ಲರೂ ಅದನ್ನು ಬಳಸತೊಡಗಿದರು.

ಸರಿ, ಮುಂದೆ ಕೇಳುವುದೇನು? ಯುರೋಪಿಯನ್ನರನ್ನು ನೋಡಿ ನಮ್ಮವರು ಕೂಡ ಕೊಡೆಗಳನ್ನು ಅಭ್ಯಾಸಕ್ಕೆ ತಂದರು. ಆ ಕಾಲದಿಂದ ಛತ್ರಧಾರಣ ಪ್ರಪಂಚದಲ್ಲೆಲ್ಲ ಸರ್ವ ಸಾಧಾರಣವಾಯಿತು. ✡



ಆಫ್ರಿಕನ್ ಕವಿಗಳ ಹೃದಯಸ್ಪರ್ಶಿ
ಅಂತ್ಯಾವಸ್ಥೆ

# ನಾನು ಬಬೂನುಗಳನ್ನು ಕಂಡೆ

ಮೂಲ: ಪಿ. ಜೆ. ಲೇ ರಿಚ್
ಅನುವಾದ: ಎಸ್. ವಿ. ಭಟ್

ದ. ಆಫ್ರಿಕಾದಲ್ಲಿ ನಾನು ಭೂಗರ್ಭಶಾಸ್ತ್ರಜ್ಞನಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಸಮೀಪದಲ್ಲೇ ನಾಲ್ಕು ಬಬೂನುಗಳು ಖಾಯಂ ಬಿಡಾರ ಹೂಡಿರುವುದನ್ನು ಕಂಡೆ. ಆ ವರೆಗೂ ನಾನು ಆ ದೇಶದ ಒಳನಾಡಿಗೆ ಹೋಗಿರಲಿಲ್ಲವಾದ್ದರಿಂದ ಈ ವಾನರ ಪ್ರಾಣಿಗಳು ನನ್ನಲ್ಲಿ ಕುತೂಹಲ ಹುಟ್ಟಿಸಿದವು. ಅವು ಹಗಲು ಹೊತ್ತಿನಲ್ಲಿ ತಮ್ಮ ಆಹಾರಕ್ಕಾಗಿ ದೂರದೂರ ಹೋಗುತ್ತಿದ್ದರೂ ಮತ್ತೆ ಸಂಜೆ ಹೊತ್ತಿಗೆ ತಮ್ಮ ವಾಸಸ್ಥಾನಕ್ಕೆ ಮರಳಿ ಬಂದು ಈ ಪರ್ವತಾಗ್ರಹದ ಹೆಬ್ಬಂಡೆಯೊಂದರ ಮೇಲೆ ಒಂದಕ್ಕೊಂದು ಬೆನ್ನು ಹಾಕಿ ನಿಶ್ಚಲವಾಗಿ ಕುಳಿತಿರುವ ದೃಶ್ಯ ಆಕರ್ಷಣೀಯವಾಗಿತ್ತು. ಹಿಂದೊಮ್ಮೆ ಯಾವುದೋ ಒಂದು ದೊಡ್ಡ ಹಂಗಡಕ್ಕೆ ಸೇರಿದ್ದು ಪ್ರಾಯಸಂದ ಬಳಿಕ ಮುದುಕ ಬಬೂನು ಅಳಿದುಳಿದ ತನ್ನ ರಾಣಿಯರೊಂದಿಗೆ ಗುಂಪಿನಿಂದ ಬೇರ್ಪಟ್ಟು ಇಲ್ಲಿ ಬಂದಿರಬೇಕೆಂದು ನಾನು ಮೊದಲು ಕಲ್ಪಿಸಿಕೊಂಡೆ. ಆದರೆ ಅವೆಲ್ಲಾ ಗಂಡು ಬಬೂನುಗಳೆಂದು ಅರಿವಾದಾಗ, ಬಹುಶಃ ಅವು ವೈರಾಗ್ಯ ಹೊಂದಿ ಹಂಗಡದಿಂದ ಹೊರಬಂದು ಇಲ್ಲಿ ಶಾಂತಿಯನ್ನರಸುತ್ತಿರುವ ಸೋದರ ಕಪಿಗಳಾಗಿರಬೇಕೆಂದುಕೊಂಡೆ.

ಆದರೆ ನನ್ನ ಈ ಭಾವನೆಯೂ ನಿರಾಧಾರವೆಂದು ಸಿದ್ಧವಾಯಿತು. ಏಕೆಂದರೆ ಅವುಗಳಲ್ಲಿ ಅಪ್ಪಿತಪ್ಪಿ ಒಂದರ ಮೈ ಇನ್ನೊಂದರ ಮೈಗೆ ಸ್ವಲ್ಪ ಒರಸಿದರೂ ಸಾಕು, ಅವು ತಕ್ಷಣವೇ ಕೂಗಾಟ ಕಿರಿಚಾಟಗಳಿಂದ ಸುತ್ತಲ ಶಾಂತಿಯನ್ನು ಕದಡುವುದಲ್ಲದೆ ಎಷ್ಟೋ ಸಲ ತಮ್ಮ ಉದ್ದುದ್ದ ನಖಗಳಿಂದ ಒಂದನ್ನೊಂದು ಪರಚಿ, ಗರ್ಜಿಸುತ್ತಾ ಹೊಡೆದಾಡುತ್ತಾ ರೋಷದಿಂದ ತಮ್ಮ ಕಡೆಬಾಯಿಯಲ್ಲಿ ನೊರೆಕಾರುತ್ತಿದ್ದವು.

ಆದಾಗ್ಯೂ, ಅವುಗಳ ಕಾದಾಟದಿಂದ ಅವುಗಳಿಗೆ ಹೆಚ್ಚಿನ ಧಕ್ಕೆಯಾದಂತೆ ಕಾಣಲಿಲ್ಲ. ಹೀಗಿರಲು ಒಂದು ಅಪರಾಹ್ನದಲ್ಲಿ ಇನ್ನೂ ಸೂರ್ಯ ಸಾಕಷ್ಟು ಎತ್ತರದಲ್ಲಿದ್ದಾಗಲೇ ಎರಡು ಬಬೂನುಗಳು ಕಾದಾಟ ಪ್ರಾರಂಭಿಸಿದುವು. ಅಂದಿನ ಅವುಗಳ ಕಾದಾಟ ಎಂದಿಗಿಂತ ಕೋಲಾಹಲಕರವೂ ಕ್ರೂರವೂ ಆಗಿ ಕಾಣುತ್ತಿತ್ತಾದ್ದರಿಂದ ಅವುಗಳನ್ನು ಸಮೀಪದಿಂದಲೇ ನೋಡುವುದಕ್ಕಾಗಿ ನಾನು ಮೇಲೇರಿಹೋದೆ.

ಅವು, ಬಂಡೆ ಕಲ್ಲುಗಳ ಮಧ್ಯೆ ಬಡಿದಾಡುತ್ತಾ ಬೀಳುತ್ತೇಳುತ್ತಾ ನನ್ನ ಶಿಬಿರದತ್ತ ಕೆಳಗಿಳಿದು ಬರುತ್ತಿದ್ದವು. ಅವುಗಳು ನಿಶ್ಚಿತ ಪಥವನ್ನೇನೂ ಅನುಸರಿಸಿ ಇಳಿಯುತ್ತಿರಲಿಲ್ಲ. ಒಂದಕ್ಕೊಂದು ನೋವು ಮಾಡುವುದರಲ್ಲೇ ಅವು ಮಗ್ನ ವಾಗಿದ್ದವು. ಅವುಗಳೊಳಗೆ ಏನೋ ತಪ್ಪು ಬಂದಿರಬೇಕೆಂದು ತಿಳಿದ ನಾನು, ಅವುಗಳಿಗೆ ಅನತಿ ದೂರದಲ್ಲಿ ಬಂಡೆಗಲ್ಲೊಂದರ ಮೇಲೆ ನಿಂತುಕೊಂಡು ಆಶ್ಚರ್ಯಚಕಿತನಾಗಿ ಏಕಾಗ್ರ ಚಿತ್ತದಿಂದ ಹೋರಾಟವನ್ನು ವೀಕ್ಷಿಸುತ್ತಿದ್ದೆ. ಅವುಗಳ ಪ್ರತಿಯೊಂದು ಕೂಗು, ಘರ್ಜನೆಯಲ್ಲಿ ಹತಾಶೆ ಎದ್ದು ಕಾಣುತ್ತಿತ್ತು. ಆದರೆ ಅವು ಒಂದಕ್ಕೊಂದು ತೆಕ್ಕೆಬಿದ್ದು ದಂಷ್ಟ್ರಗಳಿಂದ ಕಡಿ ಯುತ್ತಿದ್ದುದರಿಂದ ರಕ್ತಪಾತವಾಗಿ ಅವು ಅಪಾಯಕ್ಕೊಳಗಾಗಬಹುದೆನಿಸಿತು. ಹೋರಾ ಡುತ್ತ ಅವು ನನ್ನನ್ನು ದಾಟಿ ನನಗಿಂತ ಕೆಲವೇ ಗಜ ಕೆಳಗಿಳಿದಿದ್ದವು. ಆಗ ಅವು ಕೆಳಗೆ ಬಿದ್ದು ಬಂಡೆಗಲ್ಲೊಂದಕ್ಕೆ ನೇರವಾಗಿ ಅಪ್ಪಳಿಸಿದ್ದರಿಂದ ಒಂದರಿಂದೊಂದು ಬೇರ್ಪಟ್ಟವು. ತೀರ ನಿರ್ವಿಣ್ಣವಾಗಿ ಅವು ಕೆಲ ಕಾಲ ಬಿದ್ದಲ್ಲಿಯೇ ಬಿದ್ದಿದ್ದವು. ಮೊದಲು ಅವುಗಳ ಬಗ್ಗೆ ಸಹಾನು ಭೂತಿಯುಂಟಾದರೂ ಬಳಿಕ ಇದು ತಮಾಷೆ ಯೆನಿಸಿ ನಾನು ಗಹಗಹಿಸಿ ನಕ್ಕೆ. ಅದನ್ನು ಕೇಳಿ ಬಬೂನುಗಳು, ಎದ್ದು ಕುಳಿತು ನನ್ನತ್ತ ಕಣ್ಣರಳಿಸಿ ವಕ್ರದೃಷ್ಟಿ ಬೀರಿದುವು; ತೀರ ಒಂದ ಕ್ಕೊಂದು ಒತ್ತೊತ್ತಾದ ಮಣ್ಣಿನ ಬಣ್ಣದ ತಮ್ಮ ಕಣ್ಣುಗಳಿಂದ ಅವು ನನ್ನತ್ತ ತಿರುಗಿಸಿದ ದೃಷ್ಟಿಯಲ್ಲಿ ನಿತಾಂತ ದ್ವೇಷವೂ ದುರ್ಬು-ದ್ಧಿಯೂ ಹೊರಹೊಮ್ಮುತ್ತಿತ್ತು. ಅವುಗಳ ದುರ್ಭಾವನೆಗಳು ನನ್ನ ಮೇಲೆ ಎಷ್ಟೊಂದು ಕೇಂದ್ರೀಕೃತವಾಗಿದ್ದುವು ಎಂದರೆ, ಕೆಲ ಹೊತ್ತು ನಾನು ಸ್ವಲ್ಪ ಭಯಗ್ರಸ್ತನಾದೆ. ಆ ಮೇಲೆ ನನಗೆ ನಗು ತಡೆಯಲಾಗಲಿಲ್ಲ. ಈ ಸಲ ನನ್ನ ನಗು ಕೇಳಿದರೂ ಅವು ನನ್ನತ್ತ ಕಣ್ಣು ಸಹ ಹಾಯಿಸದೆ, ವೇದನೆಯಿಂದ ಮೇಲಕ್ಕೆದ್ದು ಪರ್ವತವನ್ನೇರಲು ಯತ್ನಿಸಿದುವು.

ಈ ಬಬೂನುಗಳು ನನಗೆ ಸಮಸ್ಯೆಯಾದವು. ಆದ್ದರಿಂದ ಅವುಗಳನ್ನು ಕುರಿತು ನಾನು ನನ್ನ ಸ್ನೇಹಿತನೊಬ್ಬನಿಗೆ ಬರೆದು ತಿಳಿಸಿದೆ. "ಜೀವನ ದಲ್ಲಿ ವಿರಕ್ತಿ ಹೊಂದಿದವುಗಳಂತೆ ಕಂಡುಬರುವ ನಾಲ್ಕು ಬಬೂನುಗಳು ನನಗೆ ಇಲ್ಲಿ ನೆರೆಹೊರೆ-ಯವರಾಗಿ ಸಿಕ್ಕಿವೆ ಎಂದು ಬಗೆದಿದ್ದೆನು. ಆದರೆ ನಿನ್ನೆ ನಡೆದ ಘಟನೆಯಿಂದ ಬೇರೆಯೇ ವಿಧದಲ್ಲಿ ಇದಕ್ಕೆ ಅರ್ಥ ಮಾಡಬೇಕಾದ್ದು ಅಗತ್ಯವಾಗಿದೆ.

"ಇಂದು ಬೆಳಿಗ್ಗೆ ಈ ಸ್ಥಳದ ಶಾಂತಿ ಒಮ್ಮಿಂದೊಮ್ಮೆ ಕದಡಿತು. ಇದು ಅಲ್ಲಿಯ



ಪರಿಸರಕ್ಕೆ ಒಂದು ಅಸಾಮಾನ್ಯವಾದ ಕಳೆಯನ್ನು ಕೊಟ್ಟು ನನ್ನನ್ನೂ ಉತ್ತೇಜನಗೊಳಿಸಿತು. ನಾನು, ನನ್ನ ಈ ನಾಲ್ವರು ನೆರೆಹೊರೆಯವರ ಸಮೀಪದಿಂದಲೇ ಹಾದು ಆ ಬೆಟ್ಟದ ಮೇಲಕ್ಕೇರಿದೆನು. ಅಷ್ಟು ಹೊತ್ತಿಗೆ ಅವು ನನ್ನನ್ನು ತಮ್ಮ ಪರಿಸರದ ಒಂದು ಅಂಶವೆಂದು ಎಂದೋ ಸ್ವೀಕರಿಸಿದ್ದವು. ಹೀಗಾಗಿ ಆಗಾಗ್ಗೆ ಧಿಕ್ಕಾರವನ್ನು ಸೂಚಿಸುವ ಧ್ವನಿಯಲ್ಲಿ ಕೂಗುವುದನ್ನು ಬಿಟ್ಟರೆ, ಅವು ನನ್ನನ್ನು ಕಂಡು ನನ್ನತ್ತ ಹೆಚ್ಚಿನ ಗಮನ ಕೊಡುವುದಿಲ್ಲ.

"ಗುಡ್ಡದ ಕೆಳಗೆ ಪಶ್ಚಿಮ ದಿಕ್ಕಿನಲ್ಲಿ ಅಗಲ ಕಿರಿದಾದ ಜಾಗವನ್ನು ತಲುಪಿದೆ. ಅಷ್ಟರಲ್ಲಿ ಪಶ್ಚಿಮದಿಂದ ಕೂಗೆಬ್ಬಿಸುತ್ತ ಬೇರೆ ಬೇರೆ ವಯಸ್ಸಿನ ಬಬೂನುಗಳ ಹಿಂಡೊಂದು ಬರುತ್ತಿರುವುದನ್ನು ಕಂಡ ನಾನು ಜಾಗೃತನಾದೆ. ಅವು ನನ್ನಿಂದ ಸಾಧಾರಣ ಒಂದು ನೂರು ಗಜಗಳ ಒಳಗೆ ಹಾದುಹೋದವು. ಆದರೆ ಅವುಗಳಲ್ಲಿ ಕೆಲವು ನನ್ನನ್ನು ನೋಡದೆ ಕೇವಲ ಇಪ್ಪತ್ತು ಗಜಗಳ ಅಂತರದೊಳಗೇ ಬಂದಿದ್ದವು. ಅವುಗಳದ್ದು ಚುರುಕಾದ ಮತ್ತು ಕಾರ್ಯತತ್ಪರವಾದ ತಂಡವಾಗಿತ್ತು. ಅವು ಕಲ್ಲುಗಳನ್ನು ಮೇಲಕ್ಕೆಬ್ಬಿಸಿ ಚೇಳು ಮೊದಲಾದ ನೆಲದಲ್ಲಿ ಹರಿದಾಡುವ ದುರ್ಜೀವಿ ಜಂತುಗಳನ್ನು ಹಿಡಿದೆಳೆದವು. ನಾನು ಚೇಳನ್ನು ಮೆಚ್ಚದವನಾದ್ದರಿಂದ ಅವುಗಳ ಉಪದ್ವ್ಯಾಪವನ್ನು ಮಂತ್ರಮುಗ್ಧನಾಗಿ ನೋಡುತ್ತಿದ್ದೆ. ಬಬೂನುಗಳು ಚೇಳುಗಳ ಕೊಂಡಿಗಳನ್ನು ಕಿತ್ತುಹಾಕಿ ಅವುಗಳನ್ನು ನೆಲಕ್ಕೆ ಚೆನ್ನಾಗಿ ತಿಕ್ಕಿ, ಬಳಿಕ ಅವುಗಳನ್ನು ತಮ್ಮ ಮೈತೊಗಲಿಗೆ ಒರೆಸಿಕೊಂಡು, ಆಮೇಲೆ ತಮ್ಮ ದವಡೆಯೊಳಗಿರುವ ಚೀಲದೊಳಗೆ ಅವುಗಳನ್ನು ತುಂಬಿಸಿಕೊಳ್ಳುತ್ತಿದ್ದುವು.

"ಕೆಲವೊಮ್ಮೆ ದೊಡ್ಡ ಬಬೂನುಗಳು ಚಿಕ್ಕವುಗಳನ್ನು ಶಿಕ್ಷಿಸುವುದನ್ನು ಕಂಡೆ. ಒಮ್ಮೊಮ್ಮೆ ಅವುಗಳ ತಪ್ಪೇನೆಂದೇ ನನಗೆ ತಿಳಿಯುತ್ತಿರಲಿಲ್ಲ. ಕೆಲ ತಾಯಂದಿರು ಇತರರಿಗಿಂತ ಹೆಚ್ಚಾಗಿ ಮಕ್ಕಳ ಕೆನ್ನೆಗೆ ಏಟುಕೊಡುತ್ತಿದ್ದವು. ಒಂದೆಡೆ ಒಂದು ಹೆಣ್ಣಿನ ಎರಡು ಪ್ರಿಯಕರರಲ್ಲಿ ಒಂದು ಬಬೂನು ಹೆಣ್ಣಿನೊಡನೆ ಯಶಸ್ವಿಯಾಗಿ ಸರಸ ನಡೆಸುತ್ತಿತ್ತು. ಅದರ ಪ್ರತಿಸ್ಪರ್ಧಿ ಬಬೂನು ಏನೂ ಮಾಡಲಾರದೆ ಸುಮ್ಮನೆ ತನ್ನ ಸೋಲನ್ನು ನುಂಗುತ್ತ ಕುಳಿತಿತ್ತು.

"ಬಳಿಕ ಕಪಿತಂಡದಲ್ಲಿ ಹಠಾತ್ ಸಂಪೂರ್ಣ ಮೌನವು ಆವರಿಸಿದ್ದನ್ನು ಕಂಡ ನಾನು ಬಹುಶಃ ಅವು ನನ್ನನ್ನು ಕಂಡುಹಿಡಿದಿರಬೇಕೆಂದು ಭಾವಿಸಿದೆ. ಆದರೆ, ತಕ್ಷಣ ನನ್ನ ಹಿಂಬದಿಯಿಂದ ಕೂಗು–ಗರ್ಜನೆಗಳು ಕೇಳಿಸಿ, ನಾನು ಆ ಕಡೆಗೆ ತಿರುಗಿದೆ. ಅಲ್ಲಿ ನನ್ನ ನಾಲ್ವರು ಹಳೆಯ ಆಪ್ತರು ಮೇಲ್ಗಡೆಗೆ ನಾಗಾಲೋಟದಿಂದ ಓಡುತ್ತಿರುವುದನ್ನು ಕಂಡೆ. ಅವುಗಳ ಉದ್ದೇಶ ಶಾಂತಿಯುತವಾಗಿತ್ತು. ನಾಡಾಡಿಗಳು ತಪ್ಪರಿತು ಮನೆಗೆ ಮರಳುವಂತೆ ಅವುಗಳ ಭಾವನೆಯಾಗಿತ್ತೆಂದು ನಾನು ಊಹಿಸಿದೆ. ಅವುಗಳ ಭಾಷೆ ನನಗೆ ಗೊತ್ತಿದೆಯೆಂದು ಹೇಳಿಕೊಳ್ಳಲಾರೆ. ಆದರೂ ಅವು ನಾಲ್ಕೂ 'ನಾಗರಿಕತೆಗೆ ಹಿಂತಿರುಗೋಣ ಮಕ್ಕಳಿರಾ' ಎಂಬುದಾಗಿ ಹೇಳಿಕೊಳ್ಳುತ್ತಿವೆಯೆಂದು ನನಗೆ ಸ್ಪಷ್ಟವಾಗಿತ್ತು. ಇಷ್ಟೆಲ್ಲ ದಿನಗಳಲ್ಲಿ ಈ ಒಂದು ಸಂದರ್ಭದಲ್ಲಿ ಮಾತ್ರ ಅವುಗಳೊಳಗೆ ದ್ವೇಷವಿಲ್ಲದುದನ್ನು ನಾನು ಕಂಡೆ ಎಂದುಕೊಂಡೆ.

ಆದರೆ, ಪಾಪ! ಅವುಗಳಿಗೆ ದೊರಕಿದ್ದು ಕಪಿನಾಗರಿಕತೆಯ ಹಲ್ಲುಗಳ ರುಚಿ ಮಾತ್ರ ಹೊರತು ಅದರ ಉಪಚಾರವಲ್ಲವೆಂದು ಬೇಗನೆ ವಿದಿತವಾಯಿತು. ಆಗಂತುಕ ತಂಡದ ನಾಲ್ಕು ಗಂಡು ಬಬೂನುಗಳು ಬಂದು ಈ ಪರ್ವತವಾಸಿಗಳನ್ನೆದುರಿಸಿದವು. ಘೋರ ಕಾಳಗವೇ ಮೊದಲಾಯಿತು. ಪರ್ವತವಾಸಿಗಳ ಪಾಲಿನ ಕದನ ಎಂದಿನಂತೆ ವಿಶೇಷ ಹಿಂಸೆಯಿಲ್ಲದ್ದಾಗಿತ್ತಾದರೂ ವಿರೋಧಿ ಪಂಗಡದವುಗಳಿಗೆ ಅದು ಭೀಕರ ಹೋರಾಟವೆಂದೇ ತೋರಿತು. ಕೆಲವೇ ಕ್ಷಣದಲ್ಲಿ ಮೈಯೆಲ್ಲಾ ಗಾಯವಾಗಿ, ರಕ್ತ ಸುರಿಸಿಕೊಂಡು

ನನ್ನ ನೆರೆಯುವುಗಳು ದೂರ ಸರಿದವು.

“ನಾನು, ಎದ್ದು ನಿಂತು, ‘ಎಂಥ ನಾಚಿಕೆಗೇಡಿತನ!’ ಎಂದು ಅರಚಿದೆ. ಆ ಸಂದರ್ಭದಲ್ಲಿ ನನಗೆ ನಾನೂ ತಂಡದಲ್ಲೊಬ್ಬನೆಂಬ ಅನಿಸಿಕೆಯೇ ಉಂಟಾಗಿತ್ತೇನೋ. ಆದರೆ ಮರುಕ್ಷಣದಲ್ಲಿ ಅಲ್ಲಿ ನನ್ನ ಇರುವಿಕೆಯನ್ನು ಕಂಡುಹಿಡಿದ ಆ ತಂಡದ ಸ್ಥಿತಿ ಮಕ್ಕಳ ತಂಡದಲ್ಲಿ ಭೂತ ಹೊಕ್ಕಂತಾಯಿತು. ಪುಟಾಣಿಗಳು ತಮ್ಮ ತಾಯಂದಿರ ಬೆನ್ನಿಗೆ ಹಾರಿ, ಹೊಟ್ಟೆಯನ್ನು ಅಪಚಿಕೊಂಡು, ಜೋಲುತ್ತಾ ಕಿರುಚಾಟಕ್ಕೆ ಪ್ರಾರಂಭಿಸಿದವು. ಅವುಗಳ ಬೊಬ್ಬೆ ಗಾಳಿಯಲ್ಲಿ ತೇಲಿ ಪರ್ವತಕ್ಕೆ ಬಡಿದು ಅದರ ತಪ್ಪಲೇ ಕರಗುತ್ತಿರುವಂತೆ ಭಾಸವಾಯಿತು.

“ನನ್ನ ಆ ನಾಲ್ವರು ಹಳೆಯ ಆಪ್ತರು, ಕೆಲ ದಿನಗಳ ತನಕ ತಮ್ಮ ದೇಹವನ್ನು ಪ್ರಯಾಸದಿಂದ ಎಳೆದುಕೊಂಡು ಸಾಗುತ್ತಿದ್ದವು. ಆದರೆ, ಈಗ ಗುಣ ಹೊಂದಿ, ದಿನಕ್ಕೆ ಸರಾಸರಿ ಎರಡಾವರ್ತಿ ಕಾದಾಡುತ್ತಿವೆ. ಅವುಗಳಿಗೆ ಹೋರಾಟವಿಲ್ಲದ ಬಾಳು ಏಕತಾನತೆಯಿಂದ ದುರ್ಭರವಾಗಬಹುದಿತ್ತಾದ್ದರಿಂದ ನಾನು ಜಗಳಗಳನ್ನು ಒಳಿತೆಂದೇ ಭಾವಿಸುತ್ತೇನೆ. ‘ಅವುಗಳ ಸಂಪ್ರದಾಯದ ಮೇಲೆ ಅವಕ್ಕೆ ಇರುವ ನಿಷ್ಠೆ ಬಲವಾಗಿದೆ. ಅದನ್ನು ಬದಲಿಸುವುದು ಕಷ್ಟಸಾಧ್ಯವಾಗಿದೆ.

“ಹೆಚ್ಚಾಗಿ ರಾತ್ರಿಗಳು ಬಹಳ ಶೀತವಿರುತ್ತಿದ್ದಂತೆಯೇ, ಹಗಲುಗಳು ಸೂರ್ಯನ ಬಿಸಿಲಿನಿಂದ ಸುಡುತ್ತಿದ್ದವಾದರೂ ಬಬೂನುಗಳಿಗೆ ಏನೊಂದೂ ಆಶ್ರಯವಿರಲಿಲ್ಲ. ಮಂಜು ಮಾತ್ರ ಅವುಗಳ ಮೇಲೆ ದಾಸ್ತಾನಾಗಿ ಉಳಿಯುತ್ತಿತ್ತು. ಬೆಳಗಾಗಿ ಬಿಸಿಲು ಶರೀರದ ರಕ್ತಸಂಚಾರವನ್ನು ಪುನರಾರಂಭಿಸುತ್ತಲೇ ಅವುಗಳಿಗೆ ತಮ್ಮ ನೋವಿನ ಅನುಭವ ಮತ್ತೆ ಮರುಕಳಿಸಿ, ಅವು ಹಿರಿದಾಗಿ ಬೊಬ್ಬಿರಿದು ನೋವು ಶಾಂತವಾದ ಕೂಡಲೇ ಮತ್ತೆ ಮತ್ತೆ ಕಾದಾಡುತ್ತಿದ್ದುವು.

“ಅವು ಹೊರಗೆ ಹೋಗಿದಾಗ, ನಾನು ಅವುಗಳಿಗೋಸ್ಕರ ಒಂದು ಆಶ್ರಯ ಕಟ್ಟಿಕೊಟ್ಟೆ. ಆದರೆ ಅವು ಅದರ ಉಪಯೋಗ ಪಡೆಯಲಿಲ್ಲ. ಆ ಬಬೂನುಗಳು ಅದನ್ನೊಮ್ಮೆ ವಿಲಕ್ಷಣವಾಗಿ ಪರೀಕ್ಷಿಸಿದುವು. ಪ್ರತಿಯೊಂದೂ ಈ ಆಶ್ರಯದ ಒಂದು ಬದಿಗೆ ಬೆನ್ನು ಆನಿಸಿ ಕುಳಿತುಕೊಳ್ಳುವುದನ್ನು ಪ್ರಾರಂಭಿಸಿತು. ಈ ಭಂಗಿಯಲ್ಲಿ ಒಂದರ ಮುಖ ಇನ್ನೊಂದಕ್ಕೆ ಕಾಣದ್ದರಿಂದ ಜಗಳ ಕಡಿಮೆಯಾಗುತ್ತಾ ಬಂತು. ರಾತ್ರಿ ಚಳಿ ಜೋರಾಗಿದ್ದ ದಿನಗಳಲ್ಲಿ ನಾನು, ಬಬೂನುಗಳ ಕಡೆಗೆ ಹೋಗಿ ನೋಡಿದೆ. ಅವುಗಳ ಹಲ್ಲು ಚಳಿಗೆ ಕಟಗುಡುತ್ತಿತ್ತು. ನಾನು ಬೆಂಕಿ ಹೊತ್ತಿಸಿ ಕೊಟ್ಟೆ. ಅವು ಅದರ ಸುತ್ತ ಕುಳಿತು, ಬೆಚ್ಚಗೆ ಮೈ ಕಾಯಿಸಿಕೊಂಡು ಪ್ರಾಮಾಣಿಕ ವ್ಯಕ್ತಿಗಳಂತೆ ತಮ್ಮ ಸುಳ್ಳು ಗಪ್ಪಾ ಹೊಡೆಯಬಹುದು ಎಂಬ ಆಶಯದಿಂದ ನಾನು ಹಾಗೆ ಮಾಡಿದೆ.

“ಆದರೆ ಅವು, ಬೆಂಕಿಯ ಹತ್ತಿರಕ್ಕೆ ಬರಲೇ ಇಲ್ಲ. ಅದು ತಮ್ಮ ಆತ್ಮಗೌರವಕ್ಕೆ ಕೊರತೆಯೆಂದು ಅವು ಭಾವಿಸುವಂತಿತ್ತು.

“ಬಬೂನುಗಳು ತಂಡದಲ್ಲಿದ್ದಾಗ ಒಂದಕ್ಕೊಂದು ಮೈ ತಾಗಿಸಿ ಕೂತು ಬೆಚ್ಚಗಿರುತ್ತವಂತೆ. ಆದರೆ ಈ ನಾಲ್ಕು ಮಾತ್ರ ಪ್ರಾಣಾಂತಿಕ ಕದನಕ್ಕಾಗಿ ಹೊರತು ಮತ್ತೇತಕ್ಕೂ ಒಂದನ್ನೊಂದು ಅಪ್ಪಿಕೊಳ್ಳುತ್ತಿರಲಿಲ್ಲ. ಮತ್ತೆ ಅವು ಯಾತಕ್ಕೆ ಹಾಗೆ ಹತ್ತಿರ ಹತ್ತಿರ ಕುಳಿತಿರುತ್ತವೆ? ನೀನೇ ನನಗೆ ಹೇಳು.”

ಒಂದು ಮುಂಜಾನೆ, ರೈಫಲ್ಲಿನಿಂದ ಹೊಡೆದ ಮೂರು ಗುಂಡಿನ ಸಪ್ಪಳಗಳನ್ನು ಕೇಳಿ ನಾನು ಎಚ್ಚರಗೊಂಡೆ. ಹೊರಬಂದಾಗ ಬಬೂನುಗಳಲ್ಲಿ ಉಳಿದೊಂದು ತನ್ನ ಮೃತ್ಯುವನ್ನು ತಪ್ಪಿಸಲೋಸುಗ ಪ್ರಯತ್ನಿಸುವುದನ್ನು ಕಂಡೆ. ಅಪಾಯ ಒದಗಿಬಂದಾಗ ಬಬೂನುಗಳು ಭಯದಿಂದ ನಿಶ್ಚೇಷ್ಟವಾಗಿಬಿಡುವುದು ಸಾಮಾನ್ಯ. ಆ ಉಳಿದೊಂದು ಬಬೂನು ಗಾಬರಿಯಿಂದ ತೀರ

ನೋಡುತ್ತಿದ್ದಂತೆ ಇನ್ನೊಂದು ಗುಂಡು ಹಾರಿತು. ತತ್‌ಕ್ಷಣ, ತೂಗು ಹಾಕಿದ್ದ ಜಮ ಖಾನೆಯೊಂದು ಕೆಳಗೆ ಬೀಳುವಂತೆ ಬಬೂನು ಕೆಳಕ್ಕೆ ಬಿದ್ದು ಪ್ರಾಣಬಿಟ್ಟಿತು.

ಕೈಯಲ್ಲಿ ರೈಫಲ್ ಹಿಡಿದುಕೊಂಡು ಸಮೀಪಕ್ಕೆ ಬರುತ್ತಿದ್ದ ರೈತನನ್ನು ನಾನು ಅಷ್ಟರಲ್ಲಿ ವೀಕ್ಷಿಸಿದೆನು. ತುಂಬಾ ಕೋಪಗೊಂಡಿದ್ದ ನನ್ನನ್ನು ನೋಡಿದ ಅವನು, ತನ್ನ ತಪ್ಪನ್ನು ಮರೆಮಾಚುವುದಕ್ಕೋಸ್ಕರ "ಯಾವುದೇ ಗುಂಡು ನೀವಿರುವ ಸ್ಥಳದಿಂದ ನೂರು ಗಜದೊಳಗೆ ಹಾದು ಹೋಗಿರಲೇ ಇಲ್ಲ" ಎಂದು ವಾದಿಸಿದನು ಮತ್ತು "ಗುಂಡು ಹಾದುಹೋದ ಸ್ಥಳದಲ್ಲಿ ಏನೂ ಇರಲಿಲ್ಲವೆಂದು ನಾನು ಖಚಿತಪಡಿಸುತ್ತೇನೆ" ಎಂದನು.

"ನನಗೆ ನಿನ್ನ ಗುಂಡುಗಳು ಬಹಳ ಸಮೀಪದಿಂದಲೇ ಹಾದುಹೋದದ್ದಕ್ಕೆ ಕೋಪವಿಲ್ಲ," ಎಂದೆ ನಾನು. "ಆದರೆ ಬಬೂನನ್ನು ನೀನು ಯಾಕೆ ಕೊಂದೆ?"

"ಆದರೆ ಸಾಕಿ ಪಳಗಿದ ಬಬೂನುಗಳನ್ನು ಬಿಟ್ಟರೆ ಮತ್ತುಳಿದ ಬಬೂನುಗಳಿಗೆ ಎಲ್ಲರೂ ಗುಂಡು ಹಾಕುತ್ತಾರೆ. "ಇಲ್ಲದಿದ್ದರೆ ಅದರ ಬೆನ್ನು ಹತ್ತಿ ಕಬ್ಬಿಣದ ಸಲಾಕೆಯಿಂದ ಹೊಡೆಯುವುದು ಇನ್ನೊಂದುಪಾಯ. ಇದರಿಂದ ಒಂದು ಗುಂಡು ಉಳಿಯುತ್ತದೆ." ಎಂದು ರೈತ ಹೇಳಿದ.

ನನ್ನತ್ತ ನೋಡಿದ ಮೇಲೆ ರೈತನಿಗೆ ಏನನಿಸಿತೋ, "ಅವು ನಿನ್ನೆ ನನ್ನ ಕುರಿಹಟ್ಟಿಯನ್ನು ಹೊಕ್ಕು ಕುರಿಮರಿಗಳನ್ನು ಹರಿದುಹಾಕಿದವು. ಆದ್ದರಿಂದ ಅವುಗಳನ್ನು ಅಂತ್ಯಗೊಳಿಸಲು ನಾನು ಬಂದೆ" ಎಂಬುದಾಗಿ ಹೇಳಿದನು. "ಕುರಿಮರಿಗಳನ್ನು ಹರಿದುಹಾಕಿದವು! ಯಾಕೆ?" ಎಂದೆ ನಾನು. "ಅವುಗಳ ಹೊಟ್ಟೆಯೊಳಗೆ ಮೊಸರಾಗಿರುವ ಹಾಲನ್ನು ಕಬಳಿಸುವುದಕ್ಕಾಗಿ. ಅದೊಂದು ದುರಭ್ಯಾಸವಿದೆ ಇವುಗಳಿಗೆ," ಎಂದನವನು, "ಭಯಾನಕ!" ಎಂದೆ ನಾನು. ಆತ, "ಇಲ್ಲ, ಅದು ಈ ಪ್ರಾಣಿಗಳ ಸಹಜಸ್ವಭಾವ. ಅವು ಅದರ ರುಚಿ ಮೆಚ್ಚುವುದರಿಂದ ಮತ್ತು ಬಹು ಸುಲಭವಾಗಿ ಸಿಕ್ಕಿದ್ದರಿಂದ ಹಾಗೆ ಮಾಡಿದವು," ಎಂದುತ್ತರಿಸಿದ ರೈತ.

ಹತ್ತಿರವಿದ್ದ ಬಬೂನಿನ ಸಮೀಪಕ್ಕೆ ಹೋದೆ. ಅದರ ತುಟಿಯನ್ನು ಮೇಲಕ್ಕೆತ್ತಿ ನೋಡಿದರೆ ಹೊರನೀಡಿದ ಭಯಾನಕವಾದ ಅದರ ಕೋರೆಯನ್ನು ನೋಡಿ ಆಶ್ಚರ್ಯಚಕಿತನಾದೆ. ಅದು ಸಿಂಹದ ಹಲ್ಲಿಗಿಂತಲೂ ಇಮ್ಮಡಿ ಉದ್ದವಾಗಿತ್ತು. ಅಷ್ಟರಲ್ಲಿ ನನ್ನ ಹಿಂಬದಿಯಿಂದ ಕಿಸಿಕಿಸಿ ನಗು ಕೇಳಿಸಿತು. "ನೋಡಿದಿರಾ ಅದರ ಹಲ್ಲುಗಳನ್ನು?" ಎಂದು ರೈತ ಕೇಳಿದ. "ಅವು ಭಯಾನಕವಾಗಿ ಕಾಣುತ್ತವೆ. ಅಲ್ಲವೇ? ಆದರೆ ಅವು ನಿರುಪದ್ರವಿಗಳು ನೋಡಿ," ಎಂದ. ಅವನು ಮುಂದಕ್ಕೆ ಬಾಗಿ, ಬಬೂನಿನ ದವಡೆಯನ್ನು ಹಿಡಿದೆಳೆದ. "ಅದರ ಬಾಯಿಯನ್ನು ಎಷ್ಟಗಲವಾಗಿ ತೆರೆದರೂ ಅದರ ಮೇಲಿನ ಕೋರೆ ಹಲ್ಲುಗಳು ಕೆಳಗಿನವನ್ನು ಕೂಡುವುದಿಲ್ಲ. ಅವು ಅಷ್ಟು ಉದ್ದ ಬೆಳೆದಿವೆ. ಹೀಗೇಕೆ ಬೆಳೆಯುತ್ತವೆ ಎಂದು ನನಗೆ ಗೊತ್ತಿಲ್ಲ. ಬಹುಶಃ ಆಹಾರದೋಷದಿಂದ ಇರಬಹುದು. ಈ ರೀತಿಯ ಕೋರೆ ಹಲ್ಲುಗಳು ಬಂದ ಬಳಿಕ ತರುಣ ಗಂಡು ಬಬೂನುಗಳು ಅವುಗಳನ್ನು ಗುಂಪಿನಿಂದ ಹೊರದಬ್ಬುತ್ತವೆ. ಈ ಮುದಿ ಬಬೂನಿಗೆ ಅದರ ಈ ಕೋರೆ ಹಲ್ಲುಗಳು ಆತ್ಮರಕ್ಷಣೆಗೆ ನಿರುಪಯೋಗಿಯಾಗಿವೆ. ಅದು ಮುಂದಿನ ಹಲ್ಲುಗಳಿಂದ ಮಾತ್ರ ಕಚ್ಚಬಲ್ಲದು. ಆದರೆ ಅಷ್ಟರಿಂದ ಹೆಚ್ಚೇನೂ ಅದರ ಬಾಯಲ್ಲಿ ಸೇರಲಾರದು."

ರೈತನು ಅನ್ಯಮನಸ್ಕತೆಯಿಂದ ತನ್ನ ಮೇಲ್ದವಡೆಯಲ್ಲಿದ್ದ ಚಿನ್ನದ ಹಲ್ಲನ್ನು ಬೆರಳಿಂದ ಮುಟ್ಟಿಕೊಂಡನು ಮತ್ತು "ಬರೇ ಹಲ್ಲುಗಳಿದ್ದರೆ ಸಾಲದು," ಎಂದನು. ✡

# ಜೈಲಿನಲ್ಲೊಂದು ರೋಮಾನ್ಸು

ನಾನ್ನೂರು ಕೈದಿಗಳಿಗಾಗಿ ಕಟ್ಟಿದ ಸೆರೆಮನೆಯಲ್ಲಿ ನಾವು ಹದಿನೆಂಟುನೂರು ಕೈದಿಗಳಿದ್ದೆವು. ಆಗಿನ ಅನುಭವಗಳು ಆಗ ಎಷ್ಟೇ ಕಹಿ ಮತ್ತು ಹರಿತವಾಗಿದ್ದರೂ ಇಂದು ಅವೆಲ್ಲವೂ ಮಧುರ ಮಧುರವಾಗಿಯೇ ನೆನಪಿನಲ್ಲಿ ಉಳಿದಿವೆ. ಈಗ ನಾನು ಹೇಳುವ ಘಟನೆಯನ್ನು ಕೇಳಿ ನಗುವವರು ನಗಬಹುದು, ಹೇಸಿಕೊಳ್ಳುವವರು ಹೇಸಿಕೊಳ್ಳಬಹುದು. ಆದರೆ ನಾನು ನಗುವುದಿಲ್ಲ, ಜುಗುಪ್ಸೆಪಡುವುದಿಲ್ಲ. ಆಳವಾದ ಮಾನವಾನುಭೂತಿಯಲ್ಲಿ ತನ್ನದೇ ಅಕ್ಷುಣ್ಣ, ಅಚ್ಯುತ ಪಾವಿತ್ರ್ಯವಿರುತ್ತದೆ. ಅದನ್ನು ಕಾಣುವವರ ಚಿಲ್ಲರೆತನ ಏನೂ ಹಸ ಗೆಡಿಸಲಾರದು.

ನಮ್ಮ ವಾರ್ಡರರಲ್ಲೊಬ್ಬ ತರುಣನಿದ್ದ. ಅವನಿಗೆ ಹಾಡುವ ಹುಚ್ಚು. ಡ್ಯೂಟಿಯ ಮೇಲಿರುವಾಗ ಯಾವುದಾದರೊಂದು ತಾನವನ್ನು ಎಬ್ಬಿಸುತ್ತಿದ್ದ. ಅವನ ಕಂಠ ಮಧುರವಾಗಿತ್ತು. ನಮ್ಮ ಬರಾಕಿನ ಬೆನ್ನುಗಡೆಯೇ ಹೆಂಗಸರ ವಾರ್ಡಿನ ಹಿಂಭಾಗ ಇರುತ್ತಿತ್ತು. ಈ ತರುಣ ವಾರ್ಡರನ ಓಡಾಟ ಎರಡು ವಾರ್ಡುಗಳ ನಡುವೆ ಇರುತ್ತಿತ್ತು.

ಹೆಂಗಸರ ವಾರ್ಡಿನಲ್ಲಿ ಒಬ್ಬ 'ಹುಚ್ಚಿ' ಇರುತ್ತಿದ್ದಳು. ಅವಳ ಅರಚಾಟ, ಕಿರಿಚಾಟ ನಮ್ಮ ಕಿವಿಗೂ ಆಗಾಗ್ಗೆ ಬೀಳುತ್ತಿತ್ತು. ಇಷ್ಟರಿಂದಲೇ ನಮಗೆ 'ಹುಚ್ಚಿ'ಯ ಪರಿಚಯ.

ಅವಳು ಬರೇ ಉಗ್ರ ವಿದ್ರೋಹಿ ಹೆಣ್ಣಾಗಿರಬಹುದು. ಅದೇನೇ ಇದ್ದರೂ ಅವಳು ಈ ವಾರ್ಡರನ ಹಾಡು ಕೇಳಿದ ತತ್‌ಕ್ಷಣ ಶಾಂತವಾಗುತ್ತಿದ್ದಳು. ಒಂದೊಂದು ಸಲ ತಾನೂ ಹಾಡತೊಡಗುತ್ತಿದ್ದಳು.

ನಾವು ಈ 'ರೋಮಾನ್ಸಿನ' ರಸಾಸ್ವಾದ ಮಾಡುತ್ತಿದ್ದೆವು. ರಸಾಸ್ವಾದನವನ್ನು ಎಲ್ಲಿಯೂ ಮಾಡಬಹುದು. ಆದರೆ ಸೆರೆಮನೆಯಲ್ಲಿ ಅದರ ರುಚಿ ಇನ್ನಷ್ಟು ಹೆಚ್ಚು. ಬರಬರುತ್ತ ಸುದ್ದಿ ಎಲ್ಲ ಕಡೆ ಹಬ್ಬಿತು.

ಆಜ್ಞೆ ಬಂತು. ಅವನ ಡ್ಯೂಟಿಯ ಕೊನೆಯ ದಿನ ಅವನ ಹಾಡಿಗೆ ಉತ್ತರವಾಗಿ ಅವಳೂ ಹಾಡಲಾರಂಭಿಸುತ್ತಲೇ ಅವನು, "ಅಬ್ ಕ್ಯಾ ಗಾನಾ ಆಜ ರುಖಸತ ಹೈ" (ಇನ್ನೇನು ಹಾಡಲಿ, ಹೊರಟು ನಿಂತೇನೆಂದು) ಎಂದು ಉತ್ತರವಾಗಿ ಹಾಡಿದ. ಇಷ್ಟನ್ನು ನಾವೂ ಕೇಳಿಸಿಕೊಂಡೆವು. ಅನಂತರ ಒಮ್ಮೆಲೇ ನೀರವ ಆವರಿಸಿತು. ನಾವೂ ಮಾತು ನಿಲ್ಲಿಸಿದೆವು. ಆಪರೆ ಸ್ವಲ್ಪವೇ ಹೊತ್ತಿನಲ್ಲಿ ಗದ್ದಲ ಕೇಳಿಸಿ ನಾವೂ ಹೊರಗೆ ಬಂದೆವು. ಗದ್ದಲ ಹೆಂಗಸರ ವಾರ್ಡಿನಿಂದ ಬರುತ್ತಿತ್ತು. ನಮಗೆ ಅದರ ಹೊರ ಪ್ರಾಕಾರ ಮತ್ತು ಅದರ ಮೇಲಿದ್ದ ಕೆಲವು ಬೆಳಕಿಂಡಿಗಳು ಮಾತ್ರ ಕಾಣಿಸುತ್ತಿದ್ದವು. ಆ ಗುಲ್ಲಿನಲ್ಲಿ ಕೇಳಿಸಿದ್ದು ಮತ್ತು ಆ ಕಿಂಡಿಗಳ ಮೂಲಕ ಕಂಡದ್ದು ಇಷ್ಟರಿಂದಲೇ ನಾವು ನಡೆದದ್ದೇನೆಂದು ಊಹಿಸಬೇಕಾಗಿತ್ತು.

ಆ ಹೆಂಗಸು ಹೇಗೋ ಮಾಡಿ ಬೆಳಕಿಂಡಿಯ ವರೆಗೆ ಏರಿ ಬಂದಿದ್ದಳು, ಮತ್ತು ಅದರ ಕಂಬಿ ಹಿಡಿದು ಒಂದು ಕಾಲನ್ನು ಅದರ ಎಡೆಯಲ್ಲಿ ಸಿಕ್ಕಿಸಿಕೊಂಡು ಜೋತಾಡುತ್ತಿದ್ದಳು. ಬಹುಶಃ ಅವಳು ತನ್ನ ಸೀರೆಯನ್ನೆ ನೂಲೇಣಿಯ ಹಾಗೆ ಉಪಯೋಗಿಸಿಕೊಂಡು ಮೇಲೇರಿರಬಹುದು. ಒಳಗೆ ಕೆಳಗಿನಿಂದ ವಾರ್ಡರಿಣಿಯರೂ ಇತರ ಕೈದಿನಿಯರೂ ಅವಳನ್ನು ಕುರಿತು ಕೂಗಾಡುತ್ತಿದ್ದರು. ಅವಳೋ ಇದೊಂದರ ಗಣ್ಯವೇ ಇಲ್ಲದೆ ಹೊರಗೆ ನೋಡುತ್ತಿದ್ದಳು. ನಮ್ಮ ವಾರ್ಡರ ಕೆಳಗಿದ್ದ. ಅವಳು ಅವನನ್ನು ಕೂಗಿ ಕರೆದಳು. ಕಂಬಿಗಳೆಡೆಯಲ್ಲಿ ಕೈಯನ್ನು ಹೊರಗೆ ನೀಡಿದಳು. ಅವನು ಬಹಳ ದೂರದಲ್ಲಿದ್ದ.

ಆ ಮೇಲೆ ಅವಳು ಚಟ್ಟನೆ ತನ್ನ ಕುಪ್ಪಸವನ್ನು ಹರಿದು ಕಿಡಕಿಯಿಂದ ಹೊರಗೆ ಚೆಲ್ಲಿಕೊಟ್ಟಳು. ವಾರ್ಡರ್ ಅದನ್ನು ಎತ್ತಿಕೊಂಡ. ಇಬ್ಬರೂ ಒಬ್ಬರನ್ನೊಬ್ಬರು ನೆಟ್ಟನೋಟದಿಂದ ನೋಡುತ್ತ ನಿಂತರು. ಅಷ್ಟರಲ್ಲಿ ಕೆಳಗೆ ಏಣಿಯನ್ನು ತರಿಸಿರಬೇಕು. ಅದರಿಂದ ಮೇಲೇರಿ ಬಂದು ಅವಳನ್ನು ಕೆಳಗೆ ಎಳೆದು ಇಳಿಸಿಕೊಂಡರೆಂದು ಕಾಣುತ್ತದೆ. ಅವಳನ್ನು ಕೊರಡೆಯಿಂದ ಹೊಡೆದರೆಂದು ನಮಗೆ ಸಪ್ಪಳದಿಂದ ಅರ್ಥವಾಯಿತು.

ಅದೇ ರಾತ್ರಿ ವಾರ್ಡರನಿಗೆ ವರ್ಗವಾಗಿ ಆತ ಹೊರಟು ಹೋದ. ಕೆಲ ದಿನಗಳಲ್ಲೇ ಅವಳನ್ನೂ ಬೇರೆಲ್ಲೋ ಸಾಗಿಸಿದರು— ಬಹುಶಃ ಅವಳಿಗೆ ಶಿಕ್ಷೆಯಾಗಿರಬೇಕು.

ನಡೆದದ್ದು ಇಷ್ಟೇ. ಅದರ ಬಗ್ಗೆ ವ್ಯಾಖ್ಯಾನ ಮಾಡುವುದು ಸುಲಭವೂ ಅಲ್ಲ, ಉಚಿತವೂ ಅಲ್ಲ. ಆದರೆ ಅದರಲ್ಲಿ ಅಡಕವಾಗಿರುವ ಮಾನವೀಯ ಭಾವನೆಯ ಸತ್ಯವನ್ನು ಮೌನವಾಗಿ ಸ್ವೀಕರಿಸುವುದಲ್ಲದೆ ಮತ್ತೇನನ್ನೂ ಮಾಡುವ ಹಾಗಿಲ್ಲ. ✡

ಹಿಂದೀ ಕಾಂತಿ "ಅಜ್ಞೇಯ"ರ ನೆನಹುಗಳಿಂದ



ಇಂಗ್ಲಂಡಿನ ಅರಸು ಏಳನೆಯ ಎಡ್ವರ್ಡ್ ೧೮೭೭ರಲ್ಲಿನ್ನೂ ಯುವರಾಜನಾಗಿದ್ದಾಗ ಭಾರತಕ್ಕೆ ಬಂದಿದ್ದನು. ಅವನ ಗೌರವಾರ್ಥ ಈ ದೇಶದಲ್ಲಿ ಅನೇಕ ರಾಜ ಮಹಾರಾಜರು ಅವನಿಗೆ ಛತ್ರಗಳನ್ನು ಕಾಣಿಕೆಯಾಗಿ ಕೊಟ್ಟರು. ಅವುಗಳ ಒಂದೊಂದಕ್ಕೆ ಪೂರ್ಣ ಮುತ್ತುಗಳನ್ನು ಹೆಣೆಯಲಾಗಿತ್ತಾದರೆ ಮತ್ತೆ ಕೆಲವಕ್ಕೆ ಬಂಗಾರದ ತಗಡುಗಳನ್ನು ಕೂಡಿಸಲಾಗಿತ್ತು; ಬಣ್ಣ ಬಣ್ಣದ ಪುಚ್ಛಗಳಿಂದ ಅನೃತ ಮಾಡುವೂ ಇದ್ದವು.

ನವ್ಯ ಪ್ರಜ್ಞೆಯ ಈ ಲೇಖಕರು ನಾಗರಿಕತೆಯ ಸೋಂಕಿಲ್ಲದ ಪ್ರಕೃತಿಯ ಮಡಿಲಲ್ಲಿ ಬೆಳೆದುಬಂದವರು

# ಶ್ರೀಕೃಷ್ಣ ಆಲನಹಳ್ಳಿ

ಸಂದರ್ಶಕರು : ಗುರುಮೂರ್ತಿ ಹೆಗ್ಡೆ
ಮತ್ತು ಕೆ. ಪಿ. ವಾಸುದೇವನ್

ಶ್ರೀ ಶ್ರೀಕೃಷ್ಣ ಆಲನಹಳ್ಳಿಯವರ ನಿಕಟ ಪರಿಚಯವಾದ ಮೇಲೆ ಅವರ ಬರಹಗಳಿಂದ ಅವರನ್ನು ಪ್ರತ್ಯೇಕ ಮಾಡಿ ನೋಡಲು ಅಸಾಧ್ಯವಾಗಿದೆ. ದಷ್ಟಪುಷ್ಟರಾಗಿ ಕಾಣುವ ಆಲನಹಳ್ಳಿ ತಮ್ಮ ಒರಟು ಭಾಷೆಯಿಂದಾಗಿ ಇಂದಿಗೂ ಮೂಲಭೂತವಾಗಿ ಹಳ್ಳಿಗಾಡಿನವರೇ ಆಗಿದ್ದಾರೆ. ಇವರ ಒರಟು ಬಾಹ್ಯ ರೂಪದ ಹಿಂದೆ ಸದಾ ಉಪಕಾರಿ ಮನೋವೃತ್ತಿಯ ಬತ್ತದ ಸೆಲೆಯೊಂದು ಇದ್ದೇ ಇದೆ.

ಶ್ರೀಕೃಷ್ಣ ೧೯೪೭ರ ಎಪ್ರಿಲ್ ಮೂರರಂದು ಹೆಗ್ಗಡೆದೇವನ ಕೋಟೆಯ ದಟ್ಟ ಕಾಡಿನ ಅಂಚಿಗೆ ಅಂಟಿಕೊಂಡ ಆಲನಹಳ್ಳಿಯಲ್ಲಿ ಹುಟ್ಟಿದರು. ಚಿಕ್ಕಂದಿನಲ್ಲಿ ಮನಸ್ಸಿನ ಮೇಲೆ ಗಾಢ ಪರಿಣಾಮ ಮಾಡಿದ್ದು ಪ್ರಕೃತಿ. ಇವರು ಬೆಳೆದಿದ್ದು ಆ ಪ್ರಕೃತಿಯ ಮತ್ತು ಪ್ರಕೃತಿಯಷ್ಟೇ ನಾಗರಿಕತೆಯ ಸೋಂಕಿಲ್ಲದ ಶೂದ್ರ ಪರಿಸರದಲ್ಲೇ. ಈ ಶೂದ್ರ ಪರಿಸರ ಇವರಿಗೆ ಕಾಡು ಗಿಡದ ಹಾಗೆ ಬೆಳೆಯಲು ಪೂರಕವಾಯಿತು. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡ ಆಲನಹಳ್ಳಿ ಬೆಳೆದಿದ್ದು ದಿವಂಗತ ಅಜ್ಜ ಅಜ್ಜಿಯರಾದ ಪಾಪೇಗೌಡ, ಕಾಳಮ್ಮನವರ ಮಡಿಲಲ್ಲಿ. "ನನ್ನ ಜೀವನ ಅಜ್ಜ ಅಜ್ಜಿಯರಿಂದ ರೂಪುಗೊಂಡಿತು," ಎನ್ನುವ ಶ್ರೀಕೃಷ್ಣರಿಗೆ ಅವರ ಬಗ್ಗೆ ಅಪಾರ ಗೌರವ.

ಮೈಸೂರಿನ ಮರಿಮಲ್ಲಪ್ಪ ಶಾಲೆಯಲ್ಲಿ ಪ್ರೌಢ ವಿದ್ಯಾಭ್ಯಾಸ. ಅಲ್ಲೇ ಕನ್ನಡ ಸಾಹಿತ್ಯದ ಅಭಿರುಚಿ ಗಾಢವಾಗತೊಡಗಿತು. ಅದೇ ಕಾಲಕ್ಕೆ, ತಮ್ಮ ಹದಿಮೂರನೇ ವಯಸ್ಸಿನಲ್ಲಿ 'ವಾಣಿ' ಎಂಬ ಶಾಲೆಯ ಕೈಬರೆಹದ ಹೊತ್ತಿಗೆಯಲ್ಲಿ ಇವರ ಕವನವೊಂದು ಪ್ರಕಟವಾಯಿತು. ಇವರ ಶಾಲಾಜೀವನದ ಇನ್ನೊಂದು ಗೀಳು



ಶ್ರೀಕೃಷ್ಣ ಆಲನಹಳ್ಳಿ

ಚಿತ್ರಕಲೆ.

ಮುಂದೆ ಮಹಾರಾಜಾ ಕಾಲೇಜು ಸೇರಿದಾಗ ಜೀವನದಲ್ಲಿ ಹೊಸದೊಂದು ಅಧ್ಯಾಯ ಪ್ರಾರಂಭವಾಯಿತು. ಈ ತರುಣನ ಪ್ರತಿಭೆಯನ್ನು ಗುರುತಿಸಿ, ಬರಹಗಳಿಗೆ ಒಂದು ಹೊಸ ಆಯಾಮ ಬರಲು ಕಾರಣರಾದವರು ಎಚ್. ಎಂ. ಚನ್ನಯ್ಯ, ಜಿ. ಎಚ್. ನಾಯಕ ಮತ್ತು ಸುಜನಾ ಅವರು.

ಈ ಸಮಯದಲ್ಲೇ 'ಸಮೀಕ್ಷೆ'ವನ್ನು ಇವರು ಪ್ರಾರಂಭಿಸಿದರು. ಈ 'ಸಮೀಕ್ಷೆ' ಸಾಹಿತ್ಯ ಪತ್ರಿಕೆ ಇವರಿಗೆ ನಷ್ಟವನ್ನುಂಟುಮಾಡಿದರೂ ಅದರ ಮೂಲಕ ಅನೇಕ ಕವಿಗಳು ಮತ್ತು ವಿಮರ್ಶಾಲೇಖನಗಳು ಬೆಳಕಿಗೆ ಬರಲು ಕಾರಣವಾಯಿತು. ಅನಂತರ "ಮಣ್ಣಿನ ಹಾಡು" ಕವನ ಸಂಕಲನವನ್ನು ಪ್ರಕಟಿಸಿದರು. "ಮಣ್ಣಿನ ಹಾಡು" ಈಗಾಗಲೇ ಮೂರನೇ ಮುದ್ರಣ ಕಾಣುತ್ತಿದೆ. ಕನ್ನಡದಲ್ಲಿ ನವ್ಯಕಾವ್ಯ ಸಂಕಲನವೊಂದು ಮೂರನೇ ಮುದ್ರಣ ಕಾಣುತ್ತಿರುವುದು ಇದೇ ಮೊದಲು. ಈ ಕೃತಿಗೆ ೧೯೭೭ರ ರಾಜ್ಯ ಸಾಹಿತ್ಯ ಅಕಾದಮಿಯ ಪ್ರಶಸ್ತಿ ಕೂಡ ಬಂತು.

ವಿದ್ಯಾರ್ಥಿಜೀವನದಲ್ಲಿ ಆಲನಹಳ್ಳಿಯವರಿಗೆ ಕ್ರಮವಾಗಿ ಮೂರು ಸಲ 'ಪ್ರಜಾವಾಣಿ' ಕಥಾ ಸ್ಪರ್ಧೆಯಲ್ಲಿ ಬಹುಮಾನಗಳು ದೊರೆತವು. ಆ ಕತೆಗಳ ಜೊತೆ ಇನ್ನಷ್ಟು ಕತೆಗಳೂ ಸೇರಿ "ತಪ್ತ" ಕಥಾಸಂಕಲನ ೧೯೭೦ರಲ್ಲಿ ಹೊರಬಂತು.

೧೯೭೧ರಲ್ಲಿ "ಕಾಡು" ಕಾದಂಬರಿ ಮನೋಹರ ಗ್ರಂಥಮಾಲೆಯ ಮೂಲಕ ಹೊರಬಂದು, ಗಿರೀಶ ಕಾರ್ನಾಡರಿಂದ ಚಿತ್ರವಾಗಲಿದೆ. ಈಗ ತಾವು ಓದಿದ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ಇವರು, ಕುವೆಂಪುರವರ ಕಾದಂಬರಿಗಳನ್ನು ತಮ್ಮ ಡಾಕ್ಟರೇಟಿಗಾಗಿ ತೆಗೆದುಕೊಂಡಿದ್ದಾರೆ. ಹಾಗೆಯೇ ರಶಿಯನ್ ಲೇಖಕ ದಾಸ್ತೋವಸ್ಕಿಯ ಜೀವನ ಮತ್ತು ಕೃತಿಗಳನ್ನು ಕುರಿತಾದ ಒಂದು ದೊಡ್ಡ ಹೊತ್ತಿಗೆಯನ್ನು ಸಿದ್ಧಪಡಿಸಿದ್ದಾರೆ.

"ಮಣ್ಣಿನ ಹಾಡು," "ತಪ್ತ," "ಕಾಡು" ಇವರ ಸಾಹಿತ್ಯಕ ಜೀವನದ ಒಂದು ಮಜಲಾದರೆ ಇವರ ಇತ್ತೀಚೆ 'ಪ್ರಜಾವಾಣಿ'ಯಲ್ಲಿ ಬಂದ ಕತೆ "ಫೀನಿಕ್ಸ್," ಕವನ ಸಂಕಲನ "ಆಳು ಕೂಗಿನ ಹಕ್ಕಿ" ಮತ್ತು ಕಾದಂಬರಿಗಳಾದ "ಗೋಡೆ" ಮತ್ತು "ದುರ್ಗಾ" ಇನ್ನೊಂದು ಮಜಲಾಗಿದೆ. ಇಲ್ಲಿ ಅವರು ತಮ್ಮ ಮೊದಲ ಘಟ್ಟದ ಭಾವೋತ್ಕಟತೆಯಿಂದ ಮುಕ್ತರಾಗಿ ಬೌದ್ಧಿಕವಾಗಿ ಬೆಳೆಯುತ್ತಿರುವುದನ್ನು ಕಾಣುತ್ತೇವೆ. "ಮಣ್ಣಿನ ಹಾಡಿ"ನ ಆಲನಹಳ್ಳಿಯವರು, ಕಾಮವನ್ನೇ ಕುರಿತು ಬರೆಯುವ ಕವಿ ಎಂಬ ಅಪವಾದಕ್ಕೆ ಒಳಗಾಗಿದ್ದವರು. ಅವರು ಜೀವನದ ಮೂಲಭೂತ ಸಮಸ್ಯೆಗಳತ್ತ ಹೊರಳುತ್ತಿರುವುದಕ್ಕೆ ಅವರ ಅಪ್ರಕಟಿತ "ಆಳು ಕೂಗಿನ ಹಕ್ಕಿ" ಕವಿತೆ ಸಾಕ್ಷಿ. ಇದು ಐದು ಭಾಗಗಳ ದೀರ್ಘ ಕವನವಾಗಿದೆ.

ಶ್ರೀಕೃಷ್ಣ ಆಲನಹಳ್ಳಿಯವರನ್ನು ಕಂಡಾಗ ಅವರಿಗೆ ಕೇಳಿದ ಕೆಲ ಪ್ರಶ್ನೆಗಳಿಗೆ ಅವರು ಉತ್ತರವಿತ್ತಿದ್ದಾರೆ. ಅದೆಲ್ಲವನ್ನೂ ಪ್ರಶ್ನೋತ್ತರ ರೂಪದಲ್ಲೇ ಇಲ್ಲಿ ಕೊಡಲಾಗಿದೆ. ಅದರಿಂದ ಈ ವ್ಯಕ್ತಿಯ ಆಳ, ಎತ್ತರ, ವಿಸ್ತಾರಗಳ ಕಲ್ಪನೆ ಬರಬಹುದು.

**ಪ್ರ. ಕನ್ನಡ ನವೋದಯ ಸಾಹಿತ್ಯದಿಂದ ನಿಮಗೆ ಕಲಿಯುವುದು ಏನಾದರೂ ಇದೆ ಅನ್ನಿಸುವುದೆ? ನಿಮ್ಮ ಮೇಲೆ ಪ್ರಭಾವ ಬೀರಿದ ಕನ್ನಡ ಮತ್ತು ಇಂಗ್ಲಿಷ್ ಲೇಖಕರಾರು?**

**ಉ.** ಖಂಡಿತ ಇದೆ. ಕುಮಾರವ್ಯಾಸನ ನಂತರ ಬಹಳ ಕಾಲ ಬಂಜರಾಗಿದ್ದ ಕನ್ನಡ ಸಾಹಿತ್ಯ ಫಲವತ್ತಾದ ಬೆಳೆ ಕೊಟ್ಟದ್ದು ಈ ನವೋದಯದಲ್ಲಿ. ಈ ಕಾಲದಲ್ಲಿ ಬಂದ ಸಾಹಿತ್ಯದಲ್ಲೂ ಗಟ್ಟಿಗಿಂತ ಜಳ್ಳೇ ಹೆಚ್ಚೆನಿಸಿದರೂ, ಕುವೆಂಪು, ಬೇಂದ್ರೆ, ಮಾಸ್ತಿ ಮತ್ತು ಕಾರಂತ ಇವರು ಮಾತ್ರ ಯಾವ ಕಾಲಕ್ಕೂ ಉಳಿಯಬಲ್ಲರಷ್ಟೇ ಅಲ್ಲ, ಕನ್ನಡ ಸಾಹಿತ್ಯಾಭ್ಯಾಸ, ಇವರಿಲ್ಲದೇ ಅಪೂರ್ಣ. ಇವರಿಂದ ಬಹಳ ಕಲಿತಿದ್ದೇನೆ. ಅಷ್ಟೇ ಅಲ್ಲ, ಕಾಲೇಜಿನಲ್ಲಿ ಇಟ್ಟ ಪಠ್ಯ ಯಾವುದಾಗಿದ್ದರೂ ನನ್ನ ವಿದ್ಯಾರ್ಥಿಗಳಿಗೆ ಈ ನಾಲ್ಕು ಜನರ ಸಾಹಿತ್ಯಾಭ್ಯಾಸದ ಅನಿವಾರ್ಯತೆಯನ್ನುಂಟುಮಾಡಲು ಪ್ರಯತ್ನಿಸಿದ್ದೇನೆ. ನನ್ನ ಮೇಲೆ ಪ್ರಭಾವ ಬೀರಿದ

ನವೋದಯ ಕನ್ನಡ ಲೇಖಕರೆಂದರೆ ಮೇಲೆ ಹೇಳಿದ ನಾಲ್ಕು ಮಂದಿ. ಹೊಸ ಪ್ರಜ್ಞೆಯ ಲೇಖಕರಲ್ಲಿ ಅಡಿಗ, ರಾಮಚಂದ್ರ ಶರ್ಮ ಮತ್ತು ಗಾಢವಾಗಿ ಅನಂತಮೂರ್ತಿ. ಇಂಗ್ಲೀಷಿನಲ್ಲಿ ಕೀಟ್ಸ್, ನಾನು ವಿದ್ಯಾರ್ಥಿಯಾಗಿದ್ದಾಗ ಇಷ್ಟವಾಗಿದ್ದಷ್ಟೇ ಇವತ್ತೂ ಇಷ್ಟವಾಗಿದ್ದಾನೆ. ಅರ್ಥವಾದಷ್ಟೇ ಈಲಿಯಟ್ ಮತ್ತು ಡಿಲನ್ ಥಾಮಸ್ ನನ್ನ ಪ್ರಜ್ಞೆಯಲ್ಲಿ ಉಳಿದಿದ್ದಾರೆ. ಈಗ ದಾಸ್ತೋವಸ್ಕಿ, ಕಾಮೂ ಮತ್ತು ಕಾಫ್ಕ, ಇವರ ಕೃತಿಗಳು ನನ್ನ ಅನುಭವ ಮತ್ತು ಪ್ರಜ್ಞೆಯನ್ನು ವಿಸ್ತರಿಸುತ್ತಿವೆ.

**ಪ್ರ. ನವ್ಯ ಬರಹಗಾರರ ಮೇಲೆ ಅಡಿಗರ ಪ್ರಭಾವ ಒಂದಲ್ಲ ಒಂದು ರೀತಿ ಇದೆ ಅನ್ನುತ್ತಾರೆ ನಿಮಗೆ ಅಡಿಗರನ್ನು ಓದುವುದು ಅನಿವಾರ್ಯ ಅನ್ನಿಸುತ್ತದೆಯೇ? ನವ್ಯದಲ್ಲಿ ಇನ್ನು ಯಾರು ನಿಮಗೆ ಅಭ್ಯಾಸಕ್ಕೆ ಯೋಗ್ಯರೆನಿಸುತ್ತಾರೆ?**

ಉ. ಅಡಿಗರ ಪ್ರಭಾವದಿಂದ ಮುಕ್ತವಾಗುವುದೇ ಈಗಿನ ಲೇಖಕರ ಮುಖ್ಯ ಹೋರಾಟವಾಗಿದೆ. ಇದರಿಂದಲೇ ಅವರ ಪ್ರಭಾವದ ಗಾಢತೆಯು ಅರಿವಾಗುತ್ತದೆ. ಕೃತಿಯಿಂದ ಕೃತಿಗೆ ಬೆಳೆಯುತ್ತಿರುವ ಅಡಿಗರ ಯಾವುದೇ ಹೊಸ ಕವನ ಬಂದರೂ ಅದರಿಂದ ನಾನು ಕಲಿಯುವುದು ಇದ್ದೇ ಇರುತ್ತದೆ. ಇದೇ ಮಾತು ಅನಂತಮೂರ್ತಿಯವರಿಗೂ ಅನ್ವಯವಾಗುತ್ತದೆ. ಇವರಿಬ್ಬರ ನಂತರ ನನಗೆ ಓದಿದಾಗೆಲ್ಲ ಅರ್ಥಪೂರ್ಣ ಅನ್ನಿಸುವ ಲೇಖಕರೆಂದರೆ ಗಿರೀಶ ಕಾರ್ನಾಡ, ಲಂಕೇಶ ಮತ್ತು ತೇಜಸ್ವಿ.

**ಪ್ರ. ಇಂದಿನ ಕನ್ನಡದಲ್ಲಿನ ವಿಮರ್ಶೆಯ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?**

ಉ. ವಿಮರ್ಶಕನಲ್ಲದ ನಾನು, ಒಬ್ಬ ಲೇಖಕನಾಗಿ ಈ ಬಗ್ಗೆ ಹೇಳುವುದು ಕಷ್ಟ. ಕನ್ನಡ ವಿಮರ್ಶೆಯಲ್ಲಿ ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ಹಳೆಯ ತಲೆಮಾರಿನ ಮಂದಿ ಪ್ರಶಂಸೆಯನ್ನು ವಿಮರ್ಶೆಯೆಂದು ತಿಳಿದಿದ್ದಂತೆ, ಹೊಸ ತಲೆಮಾರಿನವರು ಕೆಲವು ಮಂದಿ ದೋಷಗಳ ಪಟ್ಟಿ ಕೊಟ್ಟು ಇದರಲ್ಲಿ ಅದಿಲ್ಲ, ಇದಿಲ್ಲ ಎಂದು ಇರುವುದನ್ನು ಬಿಡುತ್ತಿದ್ದಾರೆ ಅನ್ನಿಸುತ್ತಿದೆ. ಇದನ್ನೊಂದು ದೃಷ್ಟಾಂತದ ಮೂಲಕ ಸ್ಪಷ್ಟಪಡಿಸಬಹುದು. ಕುವೆಂಪು ಅವರ ಬಗೆಗೆ ಒಂದೆಡೆ ಕವಿಪೂಜಾನಿಷ್ಠ, ಪೆದ್ದ ವಿಮರ್ಶೆ ಬರುತ್ತಿರುವುದರ ಜೊತೆಗೇ ಇನ್ನೊಂದು ಕಡೆ ಅವರ ಕೃತಿಗಳಲ್ಲಿ ಇರುವುದನ್ನು ವಿಶ್ಲೇಷಿಸದೆ ತಮ್ಮ ಸೂತ್ರಗಳಿಗೆ ಒಳಗಾಗುವಂತಹದು ಇಲ್ಲಿಲ್ಲ ಅಂತ ಅವರ ಅಭ್ಯಾಸ ಅನಿವಾರ್ಯವಲ್ಲ ಅನ್ನುವವರೂ ಇದ್ದಾರೆ. ಈ ಎರಡೂ ಅರ್ಥಹೀನ ಅತಿರೇಕಗಳಿಂದ ಮುಕ್ತವಾದ ಆರೋಗ್ಯಪೂರ್ಣ ವಿಮರ್ಶೆಯ ಅನಿವಾರ್ಯತೆ ಕನ್ನಡಕ್ಕಿದೆ. ಪೆದ್ದ ವಿಮರ್ಶೆಯಷ್ಟೇ ಅತಿ ಜಾಣ ವಿಮರ್ಶೆಯೂ ಅಪಾಯಕಾರಿ. ಇದರಿಂದ ಆಗುವ ಅನ್ಯಾಯ ಕೃತಿಗೆ ಮತ್ತು ಇಡೀ ಒಂದು ಸಂಸ್ಕೃತಿಗೆ.

**ಪ್ರ. "ಕಾಡು" ಚಿತ್ರವಾಗುವುದರ ಬಗೆಗೆ ನಿಮಗೆ ಏನನ್ನಿಸುತ್ತಿದೆ?**

ಉ. ನಾನು, ಕಂಡುಂಡ ಬದುಕಿನ ಭಾಗವೊಂದನ್ನು ಶಬ್ದಗಳಲ್ಲಿ ಸೃಷ್ಟಿಸಿದೆ. ಅದು ಕಾರ್ನಾಡರನ್ನು ಆಕರ್ಷಿಸಿತು. ಅದನ್ನೀಗ ಅವರು ತಮ್ಮ ಸಿನಿಮಾ ಮಾಧ್ಯಮದ ಮೂಲಕ ಪುನಃ ಸೃಷ್ಟಿಸಲಿದ್ದಾರೆ. ಸೃಷ್ಟ್ಯಾತ್ಮಕ ವ್ಯಕ್ತಿತ್ವವುಳ್ಳ ಕಾರ್ನಾಡರು ಅದನ್ನು ಸಮರ್ಥವಾಗಿ ರೂಪಿಸಬಲ್ಲರು. ಅವರಿಗೆ ಸಹಾಯಕರಾಗಿ, ಕಾರಂತರೂ ಜೊತೆಗಿದ್ದು ಈ ಖ್ಯಾತ ನಿರ್ದೇಶಕ ಜೋಡಿ ಇನ್ನೊಂದು ಶ್ರೇಷ್ಠ ಮಟ್ಟದ ಚಿತ್ರವನ್ನು ನಿರ್ಮಿಸುತ್ತಾರೆಂಬ ಭರವಸೆ ನನಗಿದೆ. ಇದು ನಿಜಕ್ಕೂ ನನಗೆ ತುಂಬಾ ಆನಂದವನ್ನುಂಟು ಮಾಡಿದೆ. "ಕಾಡು" ಹಸ್ತಪ್ರತಿಯಲ್ಲಿದ್ದಾಗಲೇ ಕಾರ್ನಾಡರ ಮನಸ್ಸನ್ನು ಹೊಕ್ಕಿತು. ಅದಕ್ಕೆ ನಾಮಕರಣ ಮಾಡಿದವರೂ ಅವರೇ. ಈಗ ಅದು ಎಲ್ಲರ ಗಮನವನ್ನು ಸೆಳೆಯಲು ಕಾರಣರಾದವರೂ ಅವರೇ.

**ಪ್ರ. ಭಾರತದ ಆಧುನಿಕ ಸಾಹಿತ್ಯಕ್ಕೆಲ್ಲಾ ಮುಖ್ಯ ಸ್ಫೂರ್ತಿ ಪಾಶ್ಚಾತ್ಯವೇ—ವಿಶೇಷವಾಗಿ ಇಂಗ್ಲೀಷ್-ಆಗಿರುವುದರಿಂದ ನಮ್ಮ ಸಾಹಿತ್ಯದಲ್ಲಿ ಸೀಮಿತತ್ವ ಬಂದಂತೆ ಅನಿಸುವುದಿಲ್ಲವೆ?**

ಉ. ನಮ್ಮ ಒಟ್ಟು ಭಾರತದ ಸಾಹಿತ್ಯ

ಅಂದಾಗ ಕನ್ನಡ ಬಿಟ್ಟು ಇನ್ನುಳಿದ ಪ್ರಾದೇಶಿಕ ಭಾಷೆಗಳ ಸಾಹಿತ್ಯದ ಬಗ್ಗೆ ಅಷ್ಟಾಗಿ ಗೊತ್ತಿಲ್ಲದ ನಾನು ಆಧುನಿಕ ಕನ್ನಡ ಸಾಹಿತ್ಯವನ್ನು ಮಾತ್ರ ಮುಖ್ಯವಾಗಿಟ್ಟುಕೊಂಡು ಪ್ರತಿಕ್ರಿಯಿಸಬಹುದು. ಒಂದು ಭಾಷೆಯ ಸಾಹಿತ್ಯ ಇನ್ನೊಂದು ಭಾಷೆಯ ಸಾಹಿತ್ಯದಿಂದ ಸ್ಫೂರ್ತಿವಾದ ಕಾರಣದಿಂದಲೇ ಸೀಮಿತತ್ವವನ್ನು ಪಡೆದುಕೊಂಡುಬಿಡುವುದಿಲ್ಲ. ಬದಲಾಗಿ ಇನ್ನಷ್ಟು ವ್ಯಾಪ್ತಿಯನ್ನೂ ಪಡೆಯುತ್ತದೆ. ಇದಕ್ಕೆ ಕನ್ನಡ ಸಾಹಿತ್ಯವೇ ಸಾಕ್ಷಿ. ಕನ್ನಡ ಸಾಹಿತ್ಯ ತನ್ನ ಪರಂಪರೆಯ ಉದ್ದಕ್ಕೂ ಸಂಸ್ಕೃತದಿಂದ ಎಷ್ಟು ವಿಧ ಸ್ಫೂರ್ತಿಗೊಂಡಿಲ್ಲ? ಸಂಸ್ಕೃತದ ಸ್ಫೂರ್ತಿ ಪ್ರಭಾವಗಳು ಪಂಪ, ಬಸವಣ್ಣ, ಕುಮಾರವ್ಯಾಸರಂಥ ಯುಗನಿರ್ಮಾಪಕ ಕವಿಗಳ ಕಾವ್ಯಗಳಲ್ಲಿ ಅವರ ಅಭಿವ್ಯಕ್ತಿಯ ಅರ್ಥಪೂರ್ಣತೆಗಾಗಿಯೇ ದುಡಿದಿವೆ; ಅವನ್ನು ಗಾಢವಾಗಿಸಿವೆ. ಅಂತೆಯೇ ನವೋದಯ ಕನ್ನಡ ಕಾವ್ಯ ಕೂಡ ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದಿಂದ ನೇರವಾಗಿ ಸ್ಫೂರ್ತವಾದದ್ದಾಗಿಯೂ ಕನ್ನಡ ಕಾವ್ಯ ಪರಂಪರೆಗೆ ಹೊಸ ತಿರುವನ್ನು ತಂದಿತು ಮತ್ತು ಕನ್ನಡ ಭಾಷೆಯ ಸಾಧ್ಯತೆಗಳನ್ನು ಹೆಚ್ಚಿಸಿತು. ಈ ನವೋದಯ ಕನ್ನಡ ಕಾವ್ಯದ ಸತ್ವವೂ ಮುಗಿಯಿತೇನೋ ಅನ್ನುವಷ್ಟರಲ್ಲೆ ಇನ್ನೊಮ್ಮೆ ಕನ್ನಡ ಕಾವ್ಯ ಇಂಗ್ಲಿಷ್ ನವ್ಯಕಾವ್ಯದಿಂದಲೇ ಪ್ರಭಾವಿತವಾಗಿ ಅತ್ಯುತ್ತಮವಾದುದನ್ನು ಕೊಡುತ್ತಿದೆ. ಅಂದರೆ ಈ ಎಲ್ಲ ಪ್ರಭಾವ, ಸ್ಫೂರ್ತಿಗಳು ಕನ್ನಡ ಸಾಹಿತ್ಯವನ್ನು ಅನುಕರಣೆಯ ಅಪಾಯಕ್ಕೊಳಪಡಿಸದೆ ಕನ್ನಡ ನೆಲದ್ದೆ ಆದ ಸತ್ವವನ್ನು ಒಳಗೊಂಡ ಜೀವಂತ ಪರಂಪರೆಯನ್ನಾಗಿ ರೂಪಿಸಿವೆ.

ಪ್ರ. ಅನಾಥಪ್ರಜ್ಞೆ ಮತ್ತು ಪರಕೀಯ ಪ್ರಜ್ಞೆಯ ಬಗ್ಗೆ ಆಗಾಗ್ಗೆ ಗೊಂದಲವೇಳುತ್ತಿದೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು? ಯುರೋಪ್ ಅಮೇರಿಕಗಳಲ್ಲಿ ಎರಡನೆಯ ಮಹಾಯುದ್ಧಾನಂತರದ ಕಾಲದಲ್ಲಿ ಬಂದ ರೀತಿಯಲ್ಲೆ ಅನಾಥಪ್ರಜ್ಞೆ ಮುಂತಾದ ಭಾವನೆಗಳು ಇನ್ನೂ ಕುಟುಂಬ ವ್ಯವಸ್ಥೆ ಬಲವಾಗಿರುವ **ಭಾರತದಲ್ಲಿ ಬಂದಿವೆ ಎನ್ನುತ್ತೀರಾ? ಇಲ್ಲದಿದ್ದರೆ ಇದು ಸಾಹಿತ್ಯದಲ್ಲಿ ಸೆಕೆಂಡ್ ಹ್ಯಾಂಡ್ ಪ್ರತಿಬಿಂಬವಾಗುವುದಿಲ್ಲವೇ?**

**ಉ.** ಆ ಬಗ್ಗೆ ನನಗೆ ಗೊಂದಲವಿಲ್ಲ. ವೈಯಕ್ತಿಕವಾಗಿ ಈ ಪರಕೀಯತೆ, ಅನಾಥಪ್ರಜ್ಞೆಗಳು ನನಗೆ ತೀವ್ರ ಸಂವೇದನೆಯನ್ನುಂಟುಮಾಡಿವೆ: ಸದ್ಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿಯೇ ಇವು ಇವೆ ಅನ್ನಿಸುತ್ತಿದೆ. ನನ್ನ ಬದುಕಿಗೆ ಯಾವ ಅರ್ಥಪೂರ್ಣ ಅನಿವಾರ್ಯತೆಯನ್ನೂ ಉಂಟುಮಾಡದಿರುವ ನನ್ನ ಅಜ್ಜ–ಅಪ್ಪಂದಿರ ಮೌಲ್ಯಗಳನ್ನು ಬಿಡುತ್ತಿದ್ದ ಹಾಗೆ ಗಟ್ಟಿಯಾದ ಹೊಸ ಮೌಲ್ಯಗಳು ಇಲ್ಲದೇ ಒಂದು ರೀತಿ ತ್ರಿಶಂಕು ಸ್ಥಿತಿಯಲ್ಲಿದ್ದೇನೆ. ಇಂಥ ಮಾನಸಿಕ ಅಸ್ವಸ್ಥತೆಯಿಂದ ಯಾವ ಬಗೆಯ ಸಂಬಂಧವೂ ಸಾಧ್ಯವಾಗದೇ ಈ ಅನಿಸಿಕೆ ಉಂಟಾಗಿದೆ.

ಯುರೋಪ್, ಅಮೇರಿಕಗಳಲ್ಲಿ ಅನಾಥಪ್ರಜ್ಞೆಯ ಉದ್ಭವಕ್ಕೆ ಕಾರಣವಾದ ಘಟನೆಗಳು ಭಾರತದಲ್ಲಿ ಆಗಿಲ್ಲದಿದ್ದರೂ ಇನ್ನೊಂದು ರೀತಿಯಲ್ಲಿ ಇಲ್ಲೂ ಅನಾಥಪ್ರಜ್ಞೆ ಉದ್ಭವಿಸಿದೆ. ಅನಾಥಪ್ರಜ್ಞೆಯಂಥ ಭಾವನೆಗಳ ಮೂಲ ವ್ಯಕ್ತಿ-ವ್ಯಕ್ತಿಗಳ, ವ್ಯಕ್ತಿ-ಸಮಾಜದ ನಡುವಿನ ಸಂಬಂಧಗಳು ಮುರಿದು ಬೀಳುವಿಕೆ. ಯುದ್ಧದ ಮತ್ತು ಅತಿಯಾದ ಯಾಂತ್ರಿಕತೆಯ ಪರಿಣಾಮಗಳು ಇಂಥ ಸಂಬಂಧಗಳನ್ನು ಯುರೋಪ್, ಅಮೇರಿಕಗಳಲ್ಲಿ ಇಲ್ಲವಾಗಿಸಿದ್ದರೆ ನಮ್ಮ ಭಾರತದಲ್ಲಿ ಅರ್ಥಹೀನ ಸಾಂಸ್ಕೃತಿಕ ಮೌಲ್ಯಗಳ, ದೃಢವಾದ ನಿಲುವಿಲ್ಲದ ರಾಜಕೀಯ ವಿರೋಧಾಭಾಸಗಳಿಂದ ಕೂಡಿದ ಸಾಮಾಜಿಕ ಪರಿಸ್ಥಿತಿ ಕಾರಣವಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ಒಂದು ಆದರ್ಶ ಕೂಡ ಸ್ವಾತಂತ್ರ್ಯಾನಂತರ ಇಲ್ಲವಾಗಿ, ಇರುವುದೆಲ್ಲ ವ್ಯಕ್ತಿಯ ಬದುಕಿಗೆ ಯಾವ ಬಗೆಯಲ್ಲೂ ಅರ್ಥಪೂರ್ಣತೆಯನ್ನಾಗಲೀ ಪರಿಸರದೊಡನೆ ಸಾಂಗತ್ಯವನ್ನಾಗಲೀ ಇಲ್ಲದಂತಾಗಿಸಿದೆ. ಇದರಿಂದಾಗಿ ಸೂಕ್ಷ್ಮಸಂವೇದನೆ ಇದ್ದವರೆಲ್ಲರಲ್ಲೂ ಒಂದು ಬಗೆಯ ಮಾನಸಿಕ ಅಸ್ವಸ್ಥತೆ, ನಿರಾಶೆ, ಗೊಂದಲ, ಅನುಮಾನಗಳು ಉಂಟಾಗಿವೆ. ಈ ತಪ್ತಸ್ಥಿತಿಗೆ ಒಳಗಾದ ಸೂಕ್ಷ್ಮ ಸಂವೇ

ದನಶೀಲ ಲೇಖಕ ಇಂಥ ಪರಿಸರದಲ್ಲಿ ತನ್ನ ಕ್ರಿಯೆಗಳೆಲ್ಲ ವಿಫಲವಾಗಿರುವುದನ್ನು ಕಾಣುತ್ತಾನೆ. ಆ ಮೂಲಕ ಅನಾಥತೆಯನ್ನು ಅನುಭವಿಸುತ್ತಾನೆ ಅನಿಸುತ್ತದೆ. ಹೀಗೆ ಹೇಳುವಾಗಲೂ ಪರಕೀಯಪ್ರಜ್ಞೆ, ಅನಾಥಪ್ರಜ್ಞೆ ಮುಂತಾದ ಅನಿಸಿಕೆಗಳನ್ನು ಕೆಲವು ನಮ್ಮ ಲೇಖಕರು ಕೂಡ ಕಾಮು, ಕಾಫ್ಕರಿಂದ ಕಲಿತು ಕನ್ನಡಕ್ಕೂ ತುರುಕುತ್ತಿದ್ದಾರೆ. ಇಂಥವರ ಅನುಭವ ಸೆಕೆಂಡ್ ಹ್ಯಾಂಡ್ ಹೌದು. ಆದರೆ ಕೆಲವರಾದರೂ ಇಂಥ ಒಂದು ಸ್ಥಿತಿಯನ್ನು ಜೀವಂತವಾಗಿಯೇ ಅನುಭವಿಸಿರುವ ಸಾಧ್ಯತೆಗಳಾಗಿ ತಮ್ಮ ಅಭಿವ್ಯಕ್ತಿಯಲ್ಲಿ ಅರ್ಥಪೂರ್ಣವಾಗಿಸಿರುವುದನ್ನು ಮರೆಯುವಂತಿಲ್ಲ. ಒಟ್ಟಾರೆ ಯಾವ ಬಗೆಯ ಪ್ರಜ್ಞೆಯೇ ಆಗಿರಲಿ, ಅದು ಯಾವ ಕಾರಣಕ್ಕೇ ಬಂದಿರಲಿ, ಆ ಪ್ರಜ್ಞೆ ಲೇಖಕನ ಮಾನಸಿಕ ಲೋಲುಪತೆಯಾಗದೆ ಪರಿಸರದ ಕ್ರಿಯೆಗಳಲ್ಲಿ ಜೀವಂತವಾಗಿ, ಕಲಾಕೃತಿಯಲ್ಲಿ ಎಷ್ಟರ ಮಟ್ಟಿಗೆ ಅದು ನಿಜವಾಗಿದೆ, ಗಾಢವಾಗಿದೆ ಅನ್ನುವುದಷ್ಟೇ ಮುಖ್ಯವಾಗುತ್ತದೆ.

**ಪ್ರ. ಜರ್ಮನಿ, ಫ್ರಾನ್ಸ್ ಮತ್ತು ರಷ್ಯಾಗಳಲ್ಲಿ ಸಾಹಿತ್ಯದ ಪ್ರತ್ಯೇಕ 'ಛಾಪು'ಗಳು ಹುಟ್ಟಿದ ಹಾಗೆ ಭಾರತದಲ್ಲಿ ಹುಟ್ಟದಿರಲು ಏನು ಕಾರಣವೆಂದು ನಿಮ್ಮೆಣಿಕೆ? ಹುಟ್ಟವೆಯೆಂದಾದರೆ ಉದಾಹರಣೆ ಕೊಡುವಿರಾ?**

**ಉ.** ಅಂಥಾ 'ಛಾಪು'ಗಳು ಅಂದರೆ ಜರ್ಮನಿಯ ಕಾಫ್ಕ, ಬ್ರೆಕ್ಟ್; ಫ್ರಾನ್ಸಿನ ಕಾಮು, ಬೆಕೆಟ್; ಹಾಗೆಯೇ ರಷ್ಯಾದ ದಾಸ್ತೋವಸ್ಕಿ, ಟಾಲ್‌ಸ್ಟಾಯ್ ಮತ್ತು ಶೋಲೋಕೊವ್ ರೀತಿಯ 'ಛಾಪುಗಳು' ಹುಟ್ಟಿಲ್ಲವೆಂದೇ ನನ್ನ ಅಭಿಪ್ರಾಯ. ಯಾಕೆ ಹುಟ್ಟಿಲ್ಲವೆಂದು ಉತ್ತರ ಹೇಳುವುದು ಕಷ್ಟ. ಆದರೂ ನನಗೆ ತುಂಬ ನಿಜ ಅನ್ನಿಸಿರುವ ಕಾರಣಗಳೂ ಇವೆ. ನಾನು ಮೇಲೆ ಹೆಸರಿಸಿದ ಪ್ರತಿಯೊಬ್ಬ ಲೇಖಕರಿಗೂ ಅವರವರವೇ ಆದ ಒಂದು ತಾತ್ತ್ವಿಕ ಸಿದ್ಧಾಂತಗಳಿದ್ದವು. ಆ ತಾತ್ತ್ವಿಕತೆ ಕಾಲಕಾಲಕ್ಕೆ ಅನೇಕ ಬಗೆಯ ಪರಿವರ್ತನೆಗಳ, ಕ್ರಾಂತಿಗಳ ಅವಸ್ಥಾಂತರಗಳನ್ನು ತೀವ್ರವಾಗಿ ಅನುಭವಿಸಿದ ಆ ದೇಶಗಳ ಬದುಕಿನೊಡಲಿಂದಲೇ ಅನಿವಾರ್ಯ ಅನ್ನುವಂತೆ ಹೊರಹೊಮ್ಮಿತ್ತು. ಅಂದರೆ ಆ ಪರಿಸರವೇ ಆಯಾ ಸಂದರ್ಭದಲ್ಲಿ ಹುಟ್ಟಿದ ಪ್ರತಿಭಾವಂತನನ್ನು ಹೊಸ ಸಿದ್ಧಾಂತಗಳಿಗೆ ದನಿಯಾಗಲು ಆಹ್ವಾನಿಸಿತ್ತು. ಆದರೆ, ಭಾರತದಲ್ಲಿ ಎಂದೂ ಇಂಥದೊಂದು ಸ್ಥಿತಿ ಸಾಧ್ಯವಾಗಿಲ್ಲ. ಕಾರಣ, ಭಾರತ ಮೂಲಭೂತ ಕ್ರಾಂತಿಗೆ ಯಾವತ್ತೂ ಒಳಗಾಗಲೇ ಇಲ್ಲ. ಇದಕ್ಕೆ ಬಹಳ ಮಟ್ಟಿಗೆ ನಮ್ಮ ವೈದಿಕ ಸಂಸ್ಕೃತಿ ಕಾರಣ. ಈ ಸಂಸ್ಕೃತಿ ಈ ನೆಲದಲ್ಲಿ ಏನನ್ನೂ ಸ್ವತಂತ್ರವಾಗಿ ಮೊಳೆಯಲು ಬಿಡಲಿಲ್ಲ. ಉದಾಹರಣೆಗೆ ಬುದ್ಧ ಸಂಘ ಕ್ರಾಂತಿಕಾರಿ ತಾತ್ತ್ವಿಕನನ್ನೂ, ಅವನಿಗೆ ದೇವರ ಕಲ್ಪನೆಯೇ ಇಲ್ಲದಿದ್ದರೂ ಅವನನ್ನೇ ಈ ಸಂಸ್ಕೃತಿ ತನ್ನ ವಿಷ್ಣು ಪರಮಾತ್ಮನ ಒಂಭತ್ತನೆಯ ಅವತಾರವಾಗಿ, ಅವತಾರಗಳ ಸಾಲಿನಲ್ಲಿ ಮೊಳೆ ಜಡಿದು ತೂಗುಹಾಕಿ, ಅವನ ವಿಚಾರಗಳನ್ನು ಅವನು ಹುಟ್ಟಿದ ನೆಲದಿಂದಲೇ ಗಡೀಪಾರು ಮಾಡಿಬಿಟ್ಟಿತು. ಹೀಗೆ ಎಲ್ಲವನ್ನೂ ಸರಳಗೊಳಿಸಿ ಜೀರ್ಣೋಭವ ಎಂದುಬಿಡುವ ಈ ಸಂಸ್ಕೃತಿಯ ಕೆಟ್ಟ ಪ್ರಭಾವ ನಮ್ಮ ಕನ್ನಡದಲ್ಲೂ ಒಡೆದುಕಾಣುವಂತೆ ಯಾವ ಮೂಲಭೂತ ಕ್ರಾಂತಿಯೂ ಆಗಲು ಬಿಟ್ಟಿಲ್ಲ.

ಇನ್ನೊಂದು ಮುಖ್ಯ ಕಾರಣ—ಭಾಷೆ. ಭಾರತದ ಯಾವುದೇ ಪ್ರಾದೇಶಿಕ ಭಾಷೆಗೂ ಫ್ರೆಂಚ್, ಜರ್ಮನ್, ರಷ್ಯನ್ ಭಾಷೆಗಳಿಗಿದ್ದಂಥ ರಾಜಕೀಯ ಮಾನ್ಯತೆ ಇಲ್ಲದ್ದರಿಂದ ಒಂದು ಭಾಷೆ ಯಾವ ಯಾವ ರೀತಿಯಲ್ಲಿ ಏನೇನೆಲ್ಲ ಪಡೆದು ಬೆಳೆಯಬೇಕೋ ಅದೆಲ್ಲದರಿಂದ ನಮ್ಮ ಪ್ರಾದೇಶಿಕ ಭಾಷೆಗಳು ವಂಚಿತವಾದವು. ನಮ್ಮ ಸಾಹಿತ್ಯ ಪರಂಪರೆಗಳು ಧಾರ್ಮಿಕತೆಯ ಪ್ರಸಾರಕ್ಕಾಗಿಯೇ ಬಹಳ ಮಟ್ಟಿಗೆ ಬೆಳೆದುಬಂದದ್ದು ನಮ್ಮ ಭಾಷೆಗಳಲ್ಲಿ ಮಹತ್ವದ್ದೇನೂ ಸಂಭವಿಸಲಾಗದಂತೆ ಆಯಿತು. ಇದೀಗ ಭಾಷಾವಾರು ಪ್ರಾಂತ್ಯಗಳ ವಿಂಗಡಣೆ ಮತ್ತು ಆಯಾ ಭಾಷೆಯ ಆಡಳಿತ ಸಾಧ್ಯತೆಗಳಿಂದಾಗಿ ಪ್ರಾದೇಶಿಕ ಭಾಷೆಗಳು ಒಂದಿಷ್ಟು ಮಾನ್ಯತೆಯೊಡನೆ ಬಳಕೆಯ ಹೆಚ್ಚು ಸಾಧ್ಯತೆಗಳನ್ನು ಪಡೆಯುತ್ತಿವೆ. ✡

ಜಿ. ಆರ್. ಶಾನಭಾಗ

# ತಂತೀ ಕಂಬದಲ್ಲಿ ದೇವರು

೧೯೫೦ರ ಆಗಸ್ಟ್. ಭಟಕಳದಲ್ಲಿ ಕಾರ್ಗಾಲದ ತಾಂಡವ. ಮಳೆ ಆವೇಶದಿಂದ ಬೀಳುತ್ತಿತ್ತು. ಬಿರುಗಾಳಿ ಪಶ್ಚಿಮ ಘಟ್ಟದ ಒರೆಯಲ್ಲಿರುವ ಸಣ್ಣ ಸಣ್ಣ ಮರಗಳನ್ನು ಕಿತ್ತು ಚೆಲ್ಲಿತು. ಇಂಥ ಕೆಲವು ಮರಗಳು ಸಮೀಪದಿಂದ ಹಾಯ್ದುಹೋದ ಭಟಕಳ–ಬೈಂದೂರು ತಂತಿ ಕಂಬ ಕಿತ್ತು ಒಗೆದಿದ್ದವು.

ಮುಂಜಾನೆ ತಂತಿ ಕಚೇರಿಯಲ್ಲಿ ಬೈಂದೂರಿಗೆ ತಂತಿ ಕಳಿಸಲಿಕ್ಕಾಗಲಿಲ್ಲ. ಆಗ ಅಲ್ಲಿಯ ಲೈನ್ ಮನ್ ಜಾನ್ ಮಸ್ಕಾರನಿಸರನ್ನು ಬೈಂದೂರು ಬದಿಯ ತಂತಿ ಕಂಬಗಳನ್ನು ಸರಿ ಮಾಡಲಿಕ್ಕೆ ಕಳಿಸಿದ್ದಾಯಿತು.

ಸುರಿಯುವ ಮಳೆ, ಘೋರ್ಗರೆಯುವ ಗಾಳಿಯಲ್ಲಿ ಜಾನ್ ತಮ್ಮ ರೇನ್‌ಕೋಟ್ ಧರಿಸಿ ತಮ್ಮ ಕರ್ತವ್ಯಕ್ಕೆ ಹೊರಟರು.

ಒಂದು ತಾಸಿನ ನಂತರ ತಂತಿ ಸರಿಯಾಗಿ ಬೈಂದೂರು ಕೆಲಸ ಮಾಡಲಿಕ್ಕೆ ಶುರುವಾಯ್ತು.

ಮಧ್ಯಾಹ್ನದಲ್ಲಿ ಲೈನ್‌ಮನ್ ವಾಪಸು ಬಂದು ತಂತಿ ಸರಿ ಮಾಡಿದ ವರದಿಯನ್ನು ಒಪ್ಪಿಸಿದರು. ವರದಿಯ ಜೊತೆಗೆ ಒಂದು ಸಿಗರೇಟ್ ಡಬ್ಬಿಯಲ್ಲಿ ಬೆಳ್ಳಿಯ ಐದು ರೂಪಾಯಿಗಳನ್ನು ತಂದು, ಅವು ಒಂದು ತಂತಿಯ ಕಂಬದ ಬುಡದಲ್ಲಿ ಇದ್ದವೆಂದು ಹೇಳಿದರು. ಆ ಐದು ರೂಪಾಯಿಗಳನ್ನು ಆ ದಿವಸ ಸರಕಾರಕ್ಕೆ ಜಮಾ ಮಾಡಲಾಯಿತು.

ಒಂದು ತಿಂಗಳ ನಂತರ ಐದು ರೂಪಾಯಿಯ ರಹಸ್ಯ ಬಯಲಾಯಿತು. ಸಪ್ಟಂಬರ್ ೧೯೫೦ರಲ್ಲಿ ಅಂಚೆ ಕಚೇರಿಗೆ ಭೂಮನೆಂಬ ಒಬ್ಬ ಅಶಿಕ್ಷಿತ ಮನುಷ್ಯ ಬಂದು, ತಾನು ಕಳೆದ ತಿಂಗಳಲ್ಲಿ ತಂತಿ ಮನಿಯಾರ್ಡರಿನಿಂದ ಐದು ರೂಪಾಯಿ ಶಿರಡಿ ಸಂಸ್ಥಾನಕ್ಕೆ ಕಳಿಸಿದ್ದು, ಅದರ ಪಾವತಿಯಾಗಲೀ ಶಿರಡಿಯ ಪ್ರಸಾದವಾಗಲೀ ಬಂದಿಲ್ಲವೆಂದು ತಕರಾರು ಮಾಡತೊಡಗಿದನು. ಆತನಿಗೆ ಹಣವನ್ನು ಕಳಿಸಿದ ವಿವರ ಕೇಳಲಾಗಿ ಆತನು ಕೆಳಗಿನಂತೆ ಹೇಳಿದನು:

ಆತನ ಮಗಳಾದ ಸರೂ ಪ್ರಥಮ ಪ್ರಸವಕ್ಕೆ ಆತನಲ್ಲಿ ಬಂದಿದ್ದು, ಪ್ರಸವ ಸಮಯದಲ್ಲಿ ಆಕೆಗೆ ಬಹಳ ತ್ರಾಸವಾಗಿ ಎಚ್ಚರವಿಲ್ಲದೆ ಬಿದ್ದುಕೊಂಡಿದ್ದಳು.

ಸುರಿಯುವ ಮಳೆ, ಘೋರ್ಗರೆಯುವ ಗಾಳಿ, ಥಳಥಳಿಸುವ ಮಿಂಚು, ಧಡಧಡಿಸುವ ಗುಡುಗು. ಆ ರಾತ್ರಿ ಭಯಾನಕವಾಗಿತ್ತು. ಭೂಮನು ಭಟಕಳದ ಸಮೀಪದ ಘಟ್ಟದ ಮಧ್ಯದಲ್ಲಿ ಚಿಕ್ಕ ಗುಡಿಸಲಿನಲ್ಲಿ ವಾಸಿಸುತ್ತಿದ್ದನು. ಭೀಕರ ರಾತ್ರಿಯಲ್ಲಿ ತನ್ನ ಪ್ರೀತಿಯ ಮೊದಲ ಮಗಳಾದ ಸರೂ ಪ್ರಥಮ ಪ್ರಸವದಲ್ಲಿ ಎಚ್ಚರವಿಲ್ಲದೇ ಬಿದ್ದದ್ದನ್ನು ಕಂಡು ಭೂಮನು ಕಂಗಾಲಾದನು.

ಆತನು ಭಕ್ತಿಯಿಂದ ತಾನು ನಂಬಿದ್ದ ಸಾಯಿಬಾಬಾನನ್ನು ಪ್ರಾರ್ಥಿಸಿದನು. ತನ್ನ ಮಗಳು

ಬದುಕಿ ಸುರಕ್ಷಿತ ಹಡೆದಲ್ಲಿ ಹುಟ್ಟಿದ ಶಿಶುವಿನ ಕೈಯಿಂದ ಐದು ರೂಪಾಯಿಗಳನ್ನು ತಂತಿ ಮನಿ ಆರ್ಡರ್ ಕಳಿಸುವೆನೆಂದು ಹರಕೆ ಹೊತ್ತನು.

ಕೆಲವು ಸಮಯದ ನಂತರ ಸರೂ ಚೇತರಿಸಿಕೊಂಡು ಗಂಡು ಮಗು ಹಡೆದಳು. ಭೂಮನು ಸಂತಸದ ಸಾಗರದಲ್ಲಿ ತೇಲಿದನು. ತೇಲುತ್ತ ತೇಲುತ್ತ ಸಾಯಿಬಾಬಾ ಧ್ಯಾನದಲ್ಲಿ ಮಗ್ನನಾದನು. ಅವನಿಗೆ ಅನ್ನಿಸಿತು, "ದೇವರು ಸತ್ಯ; ಸತ್ಯ, ಸರಳತೆಯಲ್ಲಿರುವವನನ್ನು ದೇವರು ಸದಾ ಕಾಪಾಡುವನು," ಎಂದು.

ಮರುದಿನ ಮುಂಜಾನೆ ಆತನು ಬೆಳ್ಳಿಯ ಐದು ರೂಪಾಯಿಗಳನ್ನು ತಂದು, ಹುಟ್ಟಿದ ಮಗುವಿನ ಕೈಯಿಂದ ಮುಟ್ಟಿಸಿ ಅವುಗಳನ್ನು ಒಂದು ಸಿಗರೇಟ್ ಡಬ್ಬಿಯಲ್ಲಿ ಹಾಕಿ ತಂತಿಯಿಂದ ಶಿರಡಿಗೆ ಕಳಿಸಲಿಕ್ಕೆ ಮನಸ್ಸು ಮಾಡಿದನು. ತಂತಿಯಲ್ಲಿ ಮನಿಯಾರ್ಡರು ಕಳಿಸಿದರೆ ಬೇಗ ಹೋಗುತ್ತದೆಂದು ಅಶಿಕ್ಷಿತ ಭೂಮ ಕೇಳಿದ್ದನೇ ಹೊರತು, ತಂತಿಯಿಂದ ಏಕೆ, ಸಾಮಾನ್ಯ ಮನಿಯಾರ್ಡರು ಕಳಿಸುವ ಕ್ರಮವೂ ಅವನಿಗೆ ಗೊತ್ತಿಲ್ಲವಾಗಿತ್ತು. ಹುಟ್ಟಾ ಅಂಚೆ ಕಚೇರಿ ನೋಡದಿದ್ದ ಭೂಮನು, ಆ ಡಬ್ಬಿಯನ್ನು ತೆಗೆದುಕೊಂಡು ಸಮೀಪದಲ್ಲಿ ತಂತಿ ಕಂಬದ ಹತ್ತಿರ ಹೋಗಿ, ಸಣ್ಣ ತಗ್ಗನ್ನು ತೋಡಿ, ನಮಸ್ಕರಿಸಿ, ಆ ಡಬ್ಬಿಯನ್ನು ಅಲ್ಲಿ ಹುಗಿದು ತಂತಿಯಲ್ಲಿ ಮನಿಯಾರ್ಡರು ಹೋಗುವುದೆಂದು ನಂಬಿ, ಮನೆಗೆ ಬಂದನು.

ಸರೂ ಚೆನ್ನಾಗಿ ಇದ್ದು, ಮಗು ಆನಂದದಿಂದ ಆಡಿ ಬೆಳೆಯುತ್ತಿತ್ತು. ಮಗುವಿಗೆ ತಿಂಗಳಾದಾಗ, ಅಜ್ಞ ಭೂಮನಿಗೆ ಸಾಯಿಬಾಬಾನ ನೆನಪಾಯಿತು. ತನ್ನ ತಂತಿ ಮನಿಯಾರ್ಡರಿಗೆ ಪ್ರಸಾದ ಬಂದಿಲ್ಲವಾದ್ದರಿಂದ ಭೂಮನಿಗೆ ಚಿಂತೆ ಸುರುವಾಯಿತು. ಕೊನೆಗೆ ಅವನು ಯಾರನ್ನೋ ವಿಚಾರಿಸಿದನು. ಅವರು ಹೇಳಿದ ಪ್ರಕಾರ ಘಟಕಳ ಅಂಚೆ ಕಚೇರಿಗೆ ಈಗ ಪ್ರಸಾದ ಕೇಳಲು ಬಂದಿದ್ದನು. ಅವನನ್ನು ನಮ್ಮಲ್ಲಿಗೆ ಕಳಿಸಿದವರು ಹಾಸ್ಯಕ್ಕಾಗಿಯೆ ಹಾಗೆ ಮಾಡಿದ್ದರೆಂಬಲ್ಲಿ ನನಗೆ ಸಂಶಯ ಉಳಿಯಲಿಲ್ಲ.

ಭೂಮನ ಕಥೆಯನ್ನು ಕೇಳಿ ನನಗೆ ಕರುಣೆ ಬಂತು. ಆತನ ಸರಳ ಹೃದಯ, ನಿಷ್ಕಪಟ ಸ್ವಭಾವ ನನ್ನನ್ನು ಮರುಳು ಮಾಡಿದವು. ಆತನಿಗೆ ಕುರ್ಚಿಯಲ್ಲಿ ಕೂಡ್ರಲಿಕ್ಕೆ ಹೇಳಿದೆನು. ಕುರ್ಚಿಬಿಟ್ಟು ಕಚೇರಿಯಲ್ಲಿ ನೆಲದ ಮೇಲೆ ಕುಳಿತನು. ಕುಳಿತು ತನ್ನ ಹಳ್ಳಿಯ ಸಮಾಚಾರ ಹೇಳುತ್ತ, ಚಂಚಿ ಬಿಚ್ಚಿ ಎಲೆ ಅಡಿಕೆ ತಂಬಾಕನ್ನು ಜಗಿಯುತ್ತ ಆದರದಿಂದ ನಮಗೂ ಅದನ್ನು ಕೊಟ್ಟನು. ಭೂಮನ ಸಂಗಡ ಕಚೇರಿಯ ಕೆಲಸದ ಜಂಜಾಟ ಮರೆತು, ಒಂದು ತಾಸನ್ನು ಕಳೆದೆ. ನನ್ನ ನೌಕರಿಯಲ್ಲಿ, ಭೂಮನ ಸಂಗಡ ಕಳೆದ ಒಂದು ತಾಸು ಎಂದೂ ಮರೆಯದಂತಹದು.

ಭೂಮನ ಕಥೆಯನ್ನು ಕೇಳಿ ಪ್ರಸಾದದ ಸಲುವಾಗಿ ವ್ಯವಸ್ಥೆ ಮಾಡಲಾಗುವದೆಂದು ಹೇಳಿ, ಅವನ ಕಥೆಯನ್ನು ಸಂಕ್ಷಿಪ್ತದಲ್ಲಿ ಒಂದು ಪತ್ರದಲ್ಲಿ ಬರೆದು, ಶಿರಡಿಗೆ ಕಳಿಸಿದೆ. ಪ್ರಸಾದ ತರಿಸಲಾಗುವುದೆಂದು ಹೇಳಿದೆ.

ಒಂದು ವಾರದಲ್ಲಿ ಶಿರಡಿ ಸಂಸ್ಥಾನದಿಂದ ಭೂಮನ ಹೆಸರಿನಲ್ಲಿ ಒಂದು ಪಾರ್ಸಲು ಬಂದಿತು. ಅದನ್ನು ಅವನಿಗೆ ಕಳಿಸಿದೆವು.

ಪಾರ್ಸಲ್ ತೆಗೆದುಕೊಂಡ ಭೂಮನು ತಿರುಗಿ ಕಚೇರಿಗೆ ಬಂದು, ಶಿರಡಿಯಿಂದ ಬಂದ ಪ್ರಸಾದ, ಸಾಯಿಬಾಬಾ ತಾಳಿಗಳನ್ನು ನಮಗೆಲ್ಲ ತೋರಿಸಿ, ಪ್ರಸಾದವನ್ನು ನಮಗೆಲ್ಲರಿಗೆ ಹಂಚಿದನು.

ಕೊನೆಗೆ ಅಂಚೆ ವ್ಯವಹಾರವನ್ನು ಅವನಿಗೆ ಸ್ವಲ್ಪದರಲ್ಲಿ ವಿವರಿಸಿ, ನಾವು ಆತನಿಗೆ ಹೇಳಿದೆವು: "ಏನಾದರೂ ವ್ಯವಹಾರ ಮಾಡುವುದಿದ್ದರೆ, ಅಂಚೆ ಕಚೇರಿಯಲ್ಲಿ ಬಂದು ಮಾಡಬೇಕು." ಆದರೆ ಆತ ಹೇಳಿದ್ದೇನು? "ಅಂಚೆ ಕಚೇರಿ ಏಕೆ? ತಂತಿಕಂಬದಲ್ಲಿ ಸಹ ಸತ್ಯ ಇದೆ," ಎಂದು. ✡





# ವಿಜ್ಞಾನ ಸ್ವಾರಸ್ಯ

ಸಂಗ್ರಹ : ಪಿ. ನರಹರಿ

## ಅಧೋಮುಖ ಲಂಘನ

"ಕೋಟಿ ಕೋಟಿ ರೈತರು ಭಾರೀ ಬಿರುಗಾಳಿಯಂತೆ ಎದ್ದು ನಿಲ್ಲುವರು. ಈ ಕ್ಷಿಪ್ರದ ಹಾಗೂ ರಭಸದ ಶಕ್ತಿಯನ್ನು ಯಾವ ಬಲವೂ, ಅದೆಷ್ಟೇ ದೊಡ್ಡದಾಗಿರಲಿ, ತಡೆದು ನಿಲ್ಲಿಸಲಾರದು" ಎಂದು ಚೀನಾದ ಮಾವೋ ೧೯೨೭ರ ಮಾರ್ಚಿನಲ್ಲೇ ಸಾರಿದ್ದನು. ಅಲಾಸ್ಕಾ ವಿಶ್ವವಿದ್ಯಾನಿಲಯದ ಭೌತಶಾಸ್ತ್ರಜ್ಞ ಡೇವಿಡ್ ಸ್ಟೋನ್ ಈಚೆಗೆ ನಿರೂಪಿಸಿದ ಜಾಣ ಯೋಜನೆಯನ್ನು ನಾಲ್ಕೂವರೆ ದಶಕಗಳ ಹಿಂದೆಯೇ ಮಾವೋ ಯೋಚಿಸಿದ್ದನೆ ? ಮಾವೋ ತನ್ನ ಕರೆಯನ್ನು ಸ್ಟೋನ್ ನಿರೂಪಿಸಿದಂತೆ ಮುಂದುವರೆಸಿದ್ದಲ್ಲಿ ಚೀನ ಪರಮಾಣು ಬಾಂಬು ಮತ್ತು ದೂರಗಾಮಿ ಕ್ಷಿಪಣಿಗಳನ್ನು ಅಭಿವೃದ್ಧಿಪಡಿಸುವ ಕಷ್ಟ ಇಲ್ಲದೆ ದೂರದ ಶತ್ರುಗಳನ್ನು ಸಾಮೂಹಿಕವಾಗಿ ನಾಶಮಾಡಬಹುದಾಗಿತ್ತು. ಸ್ಟೋನನ ಯೋಜನೆ ಹೀಗೆ:

ಒಂದು ನಿರ್ದಿಷ್ಟ ಕ್ಷಣದಲ್ಲಿ ಚೀನದ ಎಲ್ಲಾ ೭೫ ಕೋಟಿ ಜನತೆಯೂ ಆರೂವರೆ ಅಡಿ ಎತ್ತರದ ವೇದಿಕೆಯಿಂದ ಏಕಕಾಲಕ್ಕೆ ಕೆಳಕ್ಕೆ ನೆಗೆಯುವಂತೆ ಮಾಡಿದಲ್ಲಿ, ಆಗ ಅದೊಂದು ಭೂಭೌತ ಬ್ರಹ್ಮಾಸ್ತ್ರವಾದೀತು. ಇದು ಹೇಗೆ? ಸರಾಸರಿ ಚೀನೀವ್ಯಕ್ತಿ ೧೧೦ ಪೌಂಡು ತೂಕವಿದ್ದಾನೆಂದು ಊಹಿಸಿಕೊಳ್ಳಿ. ಆಗ ಈ ಸಾಮೂಹಿಕ ನೆಗೆತದಿಂದ ಬಿಡುಗಡೆಯಾಗುವ ಶಕ್ತಿಯು ರಿಚ್ಟರ್ ಅಳತೆಯ ರೀತ್ಯಾ ೪.೫ ಪ್ರಮಾಣದ ಭೂಕಂಪಕ್ಕೆ ಸಮನಾಗುತ್ತದೆ. ಆದರೆ ಹಾಗೆ ಮಾಡಿದಲ್ಲಿ ಅದು ಚೀನದಲ್ಲಿ ವ್ಯಾಪಕವಾಗಿ ನಾಶವನ್ನುಂಟುಮಾಡೀತು ನಿಜ. ಅದಕ್ಕೆ ಪ್ರತಿಯಾಗಿ ಪ್ರತಿ ೫೪ ನಿಮಿಷಗಳಿಗೊಮ್ಮೆ (ಭೂಮಿಯ ಮೇಲ್ಮೈ ಸುತ್ತ ಹರಿಯುವ, ಕಣ್ಣಿಗೆ ಕಾಣಿಸದ ಸ್ವಾಭಾವಿಕ ಅಲೆಯ ಶಿಖರವು ಚೀನವನ್ನು ಹಾದುಹೋಗುವ ಸಮಯಕ್ಕೆ ಸರಿಯಾಗಿ) ಸಾಮೂಹಿಕವಾಗಿ ಜಿಗಿಯುವಂತೆ ವ್ಯವಸ್ಥೆ ಮಾಡಿದರೆ ಆಗ ಚೀನದಲ್ಲಿ ವಿಶೇಷ ಅನರ್ಥವಾಗದೇನೇ ದೂರದ ಪ್ರದೇಶಗಳಲ್ಲಿ ಹೆಚ್ಚಿನ ನಾಶವುಂಟಾಗುವಂತೆ ಹೆಚ್ಚು ಗಾತ್ರದ ಭೂ ಅಲೆಯನ್ನುಂಟುಮಾಡಬಹುದು. ಇದರಿಂದ ಶಾಂತಸಾಗರ ತೀರದ "ಭೂಕಂಪ ವಲಯ"ದ ಉದ್ದಕ್ಕೂ (ಕ್ಯಾಲಿಫೋರ್ನಿಯಾದಲ್ಲೂ ಇದು ಸಂಭವನೀಯ) ತೀವ್ರ ತರದ ಭೂಕಂಪಗಳುಂಟಾಗುವಂತೆ ಭೂ ಅಲೆಗಳನ್ನು ಉತ್ಪಾದಿಸಬಹುದು. ಭಾರತಕ್ಕೂ ಇದರ ಭೀತಿ ತಪ್ಪಬಹುದು.

ಇದರ ವಿರುದ್ಧ ಏನಾದರೂ ರಕ್ಷಣೆಯಿದೆಯೇ ? ಹೌದು ಎನ್ನುತ್ತಾನೆ ಸ್ಲೋನ್. ಅಪಾಯಭೀತ ದೇಶವು ತನ್ನ ಜನತೆಯನ್ನು ಚೀನವು ಉತ್ಪಾದಿಸಿದ ಅಲೆಗಳ ಎರಡು ಶಿಖರಗಳ ನಡುವೆ ಸಾಮೂಹಿಕವಾಗಿ ಹಾಗೂ ಏಕಕಾಲದಲ್ಲಿ ಅದೇ ರೀತಿ ಜಿಗಿಯುವಂತೆ ಮಾಡಬೇಕು. ಆಗ ಚೀನ ಎಬ್ಬಿಸಿನ ಅಲೆಯು ವಿನಾಶಕಾರಿಯಾಗುವ ಮೊದಲೇ ಅದನ್ನು ತಡೆದು ಅದರ ಪ್ರಾಬಲ್ಯವನ್ನು ಕುಗ್ಗಿಸಬಹುದು. ಆದರೆ ಒಂದೇ ಕಷ್ಟ. ಯಾವ ದೇಶವೂ ಚೀನವಷ್ಟು ಜನಸಂಖ್ಯೆ ಹೊಂದಿಲ್ಲ. ಹಾಗಾದರೆ ಉಳಿದ ದೇಶಗಳಿಗೆ ತರಣೋಪಾಯವೇ ಇಲ್ಲವೇ? ಇವೆ. ಚೀನಿಯರ ಭೂಭೌತ ಆಕ್ರಮಣವನ್ನು ಪರಿಣಾಮಕಾರಿಯಾಗಿ ತಡೆಗಟ್ಟಬೇಕಾದರೆ ಭಯಗ್ರಸ್ತ ದೇಶದ ಜನತೆ ಹೆಚ್ಚು ಎತ್ತರದ ವೇದಿಕೆಯಿಂದ ನೆಗೆಯಬೇಕು ಅಷ್ಟೇ !

*

## ಅಸ್ವಾಭಾವಿಕ ನೀರು

ಅಮೇರಿಕದ ಬೆಲ್ ಪ್ರಯೋಗಶಾಲೆಯ ರಸಾಯನ ಶಾಸ್ತ್ರಜ್ಞ ಡೇವಿಸ್ ರೂಸೋ ಒಂದು ದಿನ ಚೆನ್ನಾಗಿ ಚೆಂಡಾಟವಾಡಿ ಕೆಲಸಕ್ಕೆ ಬಂದು ಬೆವರಿಂದ ಒದ್ದೆಯಾಗಿದ್ದ ತನ್ನ ಟೀಷರ್ಟನ್ನು ಬಿಚ್ಚಿ ಒಂದು ಗಾಜಿನ ಪಾತ್ರೆಗೆ ಚೆನ್ನಾಗಿ ಹಿಂಡಿದನು. ಅನಂತರ ಅದನ್ನು ಬಿಸಿಮಾಡಿದನು. ಅದು ಮುಲಾಮಿನಷ್ಟು ದಪ್ಪ ಆದಮೇಲೆ ರಕ್ತಾತೀತ ವರ್ಣಪಟಲ ದರ್ಶಕದಡಿ ಅದನ್ನು ಪರೀಕ್ಷಿಸಿದನು. ಅವನು ಹುಡುಕುತ್ತಿದ್ದುದು ಅವನಿಗೆ ಸಿಕ್ಕಿತು. ಅತ್ಯಂತ ವಿವಾದಾಸ್ಪದ ವಸ್ತುವಾದ ಅಸ್ವಾಭಾವಿಕ ಜಲದ ವಿಶೇಷ ಗುಣಗಳನ್ನಾತ ಅಲ್ಲಿ ಕಂಡನು.

೧೯೬೨ರಲ್ಲಿ ರಶಿಯದ ರಸಾಯನ ಶಾಸ್ತ್ರಜ್ಞರಾದ ಎನ್. ಫೆಡ್ಯಾಕಿನ್ ಮತ್ತು ಬೋರಿಸ್ ಡೆರಿಯಾಗಿನ್ ಈ "ಬಹುಜಲ" (Polywater)ವನ್ನು ಕಂಡುಹಿಡಿದರು. ಬಹುಜಲವು ಅಸ್ವಾಭಾವಿಕ ನೀರಾಗಿದ್ದು ಇದನ್ನು ಹೊಸತರದ ನೀರೆನ್ನಬಹುದು. ನೀರಿನ ಈ ರೂಪ ತುಂಬಾ ಸ್ಥಿರತೆಯುಳ್ಳದ್ದು. ಇದು ೫೦೦° ಸೆಂಟಿಗ್ರೇಡ್ ಕೆಳಗೆ ಕುದಿಯುವುದೇ ಇಲ್ಲ. ಇದು ಆವಿಯಾಗುವುದೂ ಇಲ್ಲ.—೪೦° ಸೆಂಟಿಗ್ರೇಡಿಗಿಂತಲೂ ಕೆಳಗಿನ ಉಷ್ಣತೆಯಲ್ಲಿ ಘನೀಕೃತವಾಗುತ್ತದೆ. ಸಾದಾ ನೀರಿನ ಸಾಂದ್ರತೆ ೧, ಆದರೆ ಇದರದ್ದು ೧.೪೫.

ಇದುವರೆಗೆ ಪ್ರಪಂಚದಲ್ಲಿ ತಯಾರಾದ ಬಹುಜಲದ ಒಟ್ಟು ಪ್ರಮಾಣ ಒಂದು ಗಾಜಿನ ಸೀಸೆ ತುಂಬುವಷ್ಟು ಮಾತ್ರವಿದೆ. ಅದರ ವಿಚಿತ್ರ ಗುಣಗಳಿಂದಾಗಿ ಅದನ್ನು ಅತ್ಯುತ್ತಮ ಕೀಲೆಣ್ಣೆಯಾಗಿ ಉಪಯೋಗಿಸಬಹುದೆಂದು ವಿಜ್ಞಾನಿಗಳ ಮತ!

ಪೆನ್ಸಿಲ್ವೇನಿಯದ ಭೌತ ಶಾಸ್ತ್ರಜ್ಞ ಫ್ರಾಂಕ್ ಡೋನಹೋ ಎಂಬುವರು ಮಾತ್ರ ಬಹುಜಲವು ಜೀವಕೋಟಿಗೇ ಅಪಾಯಕರವೆಂದು ಹೇಳುತ್ತಾರೆ. ಇದನ್ನು ವಾತಾವರಣದಲ್ಲಿ ಸೇರಲು ಬಿಟ್ಟರೆ ಸ್ವಾಭಾವಿಕ ನೀರಿನಲ್ಲಿ ಇದರ ಪ್ರಮಾಣ ಹೆಚ್ಚಾಗುತ್ತಾ ಬರಬಹುದು. ಇಂತಹ ಸಾಂದ್ರವಾದ, ಜಡ ದ್ರವದ ಪ್ರಸರಣ ಎಲ್ಲಾ ಜೀವನಕ್ರಮಗಳನ್ನೂ ಸ್ತಬ್ಧಮಾಡಿ ಭೂಮಿಯನ್ನು ಶುಕ್ರಗ್ರಹದ ಪಡಿಯಚ್ಚಿನಂತೆ ಮಾಡೀತು. ಭಾರವಾದ ಬಹುಜಲವು ಸಮುದ್ರದ ತಳದಲ್ಲಿರಬಹುದೆಂಬ ಊಹೆಯೂ ಇದೆ. ಇದರ ಬಗ್ಗೆ ಹೆಚ್ಚು ತಿಳುವಳಿಕೆ ಸಿಗುವವರೆಗೂ ಅದನ್ನು ಜಾಗರೂಕತೆಯಿಂದ ನಿರ್ವಹಿಸಬೇಕೆಂಬ ಬಗ್ಗೆ ಎಲ್ಲರ ಒಮ್ಮತವೂ ಇದೆ.

*

## ಆಕಾಶಕ್ಕೊಂದು ಹಗ್ಗ

ಕೃತಕ ಭೂಉಪಗ್ರಹದ ಅನೇಕ ಸಂಭವನೀಯ ಕಕ್ಷೆಗಳಲ್ಲಿ ೨೨,೦೦೦ ಮೈಲಿ ದೂರದಲ್ಲಿರುವ ಕಕ್ಷೆ ಹಲವು ಕಾರಣಗಳಿಂದ ವಿಶಿಷ್ಟವಾದುದು. ಆ ಎತ್ತರಕ್ಕೆ ಹಾರಿಸಿದ ಉಪಗ್ರಹವು

ಭೂಮಿಗೆ ಒಂದು ಸಲ ಸುತ್ತಿಬರಲು ೨೪ ಗಂಟೆಗಳನ್ನು (ಅಂದರೆ ಭೂಮಿ ತನ್ನ ಅಕ್ಷದಲ್ಲಿ ಒಂದು ಸುತ್ತು ತಿರುಗುವಷ್ಟೇ ಕಾಲವನ್ನು) ತೆಗೆದು ಕೊಳ್ಳುತ್ತದೆ. ಇಷ್ಟೆತ್ತರದಲ್ಲಿ ಭೂಮಿಯ ಗುರುತ್ವಾಕರ್ಷಣ ಶಕ್ತಿ ಮತ್ತು ಉಪಗ್ರಹವನ್ನು ಕಕ್ಷೆಯಿಂದ ದೂರಕ್ಕೆಳೆಯುವ ಮಧ್ಯೋತ್ಸಾರಿ ಶಕ್ತಿಗಳೆರಡೂ ಸಮಸಮವಾಗಿರುತ್ತವೆ. ಅಷ್ಟೆತ್ತರದಲ್ಲಿ ಅಥವಾ ಅದಕ್ಕೂ ಎತ್ತರದಲ್ಲಿ ನೇರವಾಗಿ ಭೂಮಧ್ಯರೇಖೆಯ ಮೇಲಿನ ಕಕ್ಷೆಯಲ್ಲಿ ಉಪಗ್ರಹವನ್ನಿರಿಸಿದರೆ ಅದು ಸದಾ ನಿಶ್ಚಲ ಸ್ಥಿತಿಯಲ್ಲಿರುವಂತೆ ತೋರುತ್ತದೆ. ಅಂದರೆ ಅದು ನಿರಂತರವಾಗಿ ಒಂದೇ ಪೃಥ್ವಿಯ ಸ್ಥಳದ ಮೇಲೆಯೇ ಇರುತ್ತದೆ.

ಆಕಾಶದಲ್ಲಿನ ಇಂತಹ ಸ್ಥಿರ ಉಪಗ್ರಹದಿಂದ ಭೂಮಿಗೊಂದು ತಂತಿಯ ಸಂಪರ್ಕ ಜೋಡಿಸಿ ಒಂದು ಲಿಫ್ಟ್ ಸ್ಥಾಪಿಸಿದರೆ ಮಾನವ ಬಾಹ್ಯಾಕಾಶಕ್ಕೇರಿ ಹೋಗಬಲ್ಲನೆಂಬ ಒಂದು ಸಿದ್ಧಾಂತವನ್ನು ಲೆನಿನ್‌ಗ್ರಾಡ್‌ನ ವಿಜ್ಞಾನಿಯೊಬ್ಬರು ಮುಂದಿಟ್ಟಿದ್ದಾರೆ. ಈ ಸ್ಥಿತಿಯಲ್ಲಿ ಉಪಗ್ರಹ, ಭೂಮಿಗಳೆರಡೂ ಕತ್ತು ಮುರಿಯುವಷ್ಟು ವೇಗವಾಗಿ ಚಲಿಸುತ್ತಿದ್ದರೂ ಸಾಪೇಕ್ಷವಾಗಿ ನಿಶ್ಚಲವಾಗಿರುತ್ತವೆ. ಜೆಟ್ ಯಂತ್ರದ ನೆರವಿಲ್ಲದೆ ಪ್ರಯಾಣಿಕರನ್ನೂ ಸರಕನ್ನೂ ಈ ಲಿಫ್ಟ್ ಸಹಾಯದಿಂದ ಸಾಗಿಸಬಹುದು. ಬಾಹ್ಯಾಕಾಶ ಉಡ್ಡಯನಕ್ಕಿದು ಬಹು ಪ್ರಯೋಜನಕಾರಿ. ಇಂತಹ ನಾಲ್ಕಾರು ಉಪಗ್ರಹಗಳನ್ನು ಬೇರೆ ಬೇರೆಡೆ ಸ್ಥಾಪಿಸಿ ಖಂಡಾಂತರ ಜಾಲವನ್ನು ನಿರ್ಮಿಸಬಹುದು.

ಸೈದ್ಧಾಂತಿಕವಾಗಿ ಇದು ಸಾಧ್ಯವಿದ್ದರೂ ವಾಸ್ತವ ಸಮಸ್ಯೆಗಳೇನು ? ಜೋಡಿಸಿದ ತಂತಿ ಎಷ್ಟು ಬಲವಾಗಿರಬೇಕು ? ತಂತಿಯುದ್ದಕ್ಕೂ ಅಸಾಧ್ಯವಾದ ಬಿಗಿತವಿರುತ್ತದೆನ್ನುವುದು ನಿರ್ವಿವಾದ. ಏಕೆಂದರೆ ಅದು ತನ್ನ ಭಾರವನ್ನಷ್ಟೇ ಅಲ್ಲದೆ ಪ್ರಯಾಣಿಕರ, ಸರಕಿನ ಮತ್ತು ಬೋಗಿಯ ಭಾರವನ್ನೂ ಧರಿಸಬೇಕಷ್ಟೆ. ಲೆಕ್ಕಾಚಾರಗಳ ಪ್ರಕಾರ ತಂತಿಯ ದಪ್ಪವು ಉದ್ದಕ್ಕೂ ಒಂದೇ ರೀತಿಯಾಗಿರಬಾರದು. ಅದು ಉಪಗ್ರಹದ ಬಳಿ ಹೆಚ್ಚು ದಪ್ಪವಾಗಿದ್ದು ಮೀಟರೊಂದಕ್ಕೆ ಸರಾಸರಿ ಒಂದು ಗ್ರಾಂ ತೂಕವಿರಬೇಕಲ್ಲದೆ ಒಂದೂವರೆ, ಎರಡು ಟನ್ನಿನ ಸೆಳೆತದ ಶಕ್ತಿಯನ್ನು ತಡೆದುಕೊಳ್ಳುವಂತಿರಬೇಕು. ಈ ಅಗತ್ಯಗಳನ್ನು ಪೂರೈಸಬಲ್ಲ ಹಗುರ ಲೋಹವನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷಿಸಿ ನೋಡಲಾಗಿದೆ. ೩೧,೦೦೦ ಮೈಲಿಯಷ್ಟು ಉದ್ದದ ಇಂತಹ ತಂತಿಯ ತೂಕ ೯೦೦ ಟನ್ನುಗಳಾಗುತ್ತವೆ.

ಈ ಲಿಫ್ಟಿನ ತುದಿಯಲ್ಲಿರತಕ್ಕ ವೇದಿಕೆ ಕೆಲ ಸಾವಿರ ಟನ್ ತೂಕವಿರಬೇಕು. ಇಡೀ ರಚನೆಯನ್ನು ಭೂಮಿಯು ಕೆಳಗೆ ಸೆಳೆದುಕೊಳ್ಳದಂತೆ ಈ ವೇದಿಕೆ ಮೇಲಕ್ಕೆಳೆದು ಹಿಡಿಯುತ್ತದೆ. ಈ ರಚನೆಯ ೨೦೦೦ ಟನ್ ತೂಕದ ಬಿಡಿಭಾಗಗಳನ್ನು ಮೊದಲು ರಾಕೆಟ್ ಮೂಲಕ ಇಚ್ಛಿತ ಕಕ್ಷೆಗೆ ಹಾರಿಸಿ, ಅನಂತರ ಅವನ್ನು ಜೋಡಿಸಬೇಕು. ಭೂಮಿಯಿಂದ ೨೮,೦೦೦ ಮೈಲಿಗಳನ್ನು ದಾಟಿದ ಮೇಲೆ ಲಿಫ್ಟ್ "ಬಿಡುಗಡೆಯ ವೇಗ"ವನ್ನು ಪಡೆಯುವುದರಿಂದ ಅನಂತರ ಅದನ್ನು ನಡೆಸಲು ಇಂಧನದ ವೆಚ್ಚವಿರುವುದಿಲ್ಲ. ಗಂಟೆಗೆ ೬೦೦ ಮೈಲಿ ವೇಗದಲ್ಲಿ ಲಿಫ್ಟ್ ಚಲಿಸಿದರೆ ಅದು ದಿನಕ್ಕೆ ೧೨,೦೦೦ ಟನ್ನುಗಳನ್ನು ಮೇಲಕ್ಕೆ ಅಥವಾ ಕೆಳಕ್ಕೆ ಸಾಗಿಸಬಲ್ಲದು.

ಭೂಮಿಯ ಭ್ರಮಣದಿಂದ ಹೀಗೆ ಪುಕ್ಕಟೆಯಾಗಿ ದೊರೆತ ಶಕ್ತಿಯನ್ನು ಮಾನವ ಸದುಪಯೋಗಪಡಿಸಿಕೊಂಡಾನು. ಇಂತಹುದೇ ಸರಬರಾಜು ವ್ಯವಸ್ಥೆಯನ್ನು ಚಂದ್ರ, ಮಂಗಳ ಮತ್ತಿತರ ಗ್ರಹಗಳಲ್ಲಿಯೂ ನಿರ್ಮಿಸಬಹುದು. ✡



ಮರಿನರ್-೯ ಮಂಗಳನ ಬಗ್ಗೆ ಹೊರಗೆಡವಿದ
ಅನೇಕ ಅಂಶಗಳು ವಿಸ್ಮಯಕರವಾಗಿವೆ

# ಮಂಗಳನಲ್ಲೇನಿದೆ?

ಶ್ರೀಕಾಂತ

ನಮ್ಮ ನೆರೆಗ್ರಹವಾದ ಮಂಗಳ ಖಗೋಲ ಶಾಸ್ತ್ರಜ್ಞರಿಂದ ಕೂಡ ತುಂಬಾ ತಪ್ಪು ತಿಳಿವಳಿಕೆಗೊಳಗಾದ ಗ್ರಹ. ಭಾರತೀಯರು ಅವನನ್ನು ಪಾಪಗ್ರಹಗಳ ಸಾಲಿನಲ್ಲಿ ಸೇರಿಸಿದರೆ ರೋಮನ್ನರು ಅವನನ್ನು ತಮ್ಮ ಯುದ್ಧ ದೇವತೆಯ ಹೆಸರಿಂದ ಕರೆದು ಹಿಂಸ್ರ ಗ್ರಹವನ್ನಾಗಿಯೆ ಭಾವಿಸಿದರು. ದೂರದರ್ಶಕಗಳಲ್ಲಿ ಅದರ ಮೈಮೇಲೆ ಕಾಲುವೆಗಳನ್ನು ಹೋಲುವಂಥ ಗೆರೆಗಳಿದ್ದಂತೆ ಕಂಡದ್ದರಿಂದ ಅಲ್ಲಿ ಮಾನವರು ಅಥವಾ ಮಾನವರಂತೆಯೆ ಬುದ್ಧಿಶಾಲಿ ಜೀವಿಗಳು ಇರಬಹುದೆಂಬ ಊಹಾಪೋಹಗಳನ್ನು ಗಂಭೀರರೆನಿಸುವ ಖಗೋಲಶಾಸ್ತ್ರಜ್ಞರೂ ಮಾಡಿದರು. ಆದರೆ ಈ ಶತಮಾನದ ಮಧ್ಯದಲ್ಲಿ ಪೃಥ್ವಿಯಿಂದಲೇ ನಡೆದ ಪರಿಶೀಲನೆಗಳು ನೀರಾಗಲಿ ಆಮ್ಲಜನಕ (ಪ್ರಾಣವಾಯು) ವಾಗಲಿ ಮಂಗಳ ಗ್ರಹದಲ್ಲಿ ತೀರ ಅಲ್ಪಪ್ರಮಾಣದಲ್ಲಿ ಮಾತ್ರ ಇರಬಹುದೆಂದು ತೋರಿಸಿಕೊಟ್ಟಿದ್ದರಿಂದ ಮಂಗಳಲೋಕದ ಮಾನವ ಸಾವಕಾಶವಾಗಿ ಮಾಯವಾಗತೊಡಗಿದ್ದಾನೆ. ೧೯೬೫ರಿಂದ ೧೯೭೨ರವರೆಗೆ ಅಮೇರಿಕನ್ ಮತ್ತು ರಶಿಯನ್ ಯಾನಗಳು ಮಂಗಳ ಲೋಕವನ್ನು ಸುತ್ತುಹಾಕಿ ಕಳಿಸಿದ ಮಾಹಿತಿಗಳು ಕೊನೆಗೊಮ್ಮೆ ಮಂಗಳನಲ್ಲಿ ಜೀವಿಗಳ ಅಸ್ತಿತ್ವದ ಕಲ್ಪನೆಗೇ ಕೊಡಲಿಯೇಟು ಹಾಕಿದವು.

ಈ ಯಾನಗಳು ನಮ್ಮ ಮುಂದೆ ಮಂಡಿಸಿದ ಮಂಗಳನ ಚಿತ್ರ, ಮಂಗಳನೆಂಬುದು ಒಂದು ದೊಡ್ಡ ಗಾತ್ರದ ಚಂದ್ರನೇ, ಅಂದರೆ ಸಂಪೂರ್ಣ ಮೃತ ಗ್ರಹ, ಎಂಬಂತಿತ್ತು. ಮೊದಲೇ ತರ್ಕಿಸಿದಂತೆ ಅಲ್ಲಿನ ವಾತಾವರಣ ತೀರ ವಿರಳ. ೩೫೦ ಕೋಟಿ ವರ್ಷಗಳ ಕಾಲ ಉಲ್ಕೆಗಳ ಹೊಡೆತದಿಂದ ಚಂದ್ರನಂತೆ ಮಂಗಳನ ಮೈಯೂ ಗುಳಿಗುಳಿಯಾಗಿದೆ. ಯುಗಾಂತರಗಳಿಂದ ಅದರ ಮೈಯಲ್ಲಿ ಏನಾದರೂ ಬದಲಾವಣೆಗಳಾಗಿದ್ದರೆ ಅಲ್ಲಿನ ವಿರಳ ವಾತಾವರಣದಲ್ಲಿ ಬೀಸುವ ಬಿರುಗಾಳಿಗಳಿಂದ ಆಗಿರಬೇಕು. ಇದು ನಮಗೆ ದೊರಕಿದ ಮಂಗಳನ ಹೊಸ ಕಲ್ಪನಾಚಿತ್ರ.

ಆದರೆ ಇದೂ ಪೂರ್ಣ ಸತ್ಯವಲ್ಲ, ಅರ್ಧ ಸತ್ಯವೆಂದು ಮೊನ್ನೆ ನವೆಂಬರದಲ್ಲಿ ಅಮೇರಿಕದ ಮರಿನರ್-೯ ತೆಗೆದ ಚಿತ್ರಗಳು ಹೇಳುತ್ತವೆ.

ಈ ಮೊದಲು ಕಳಿಸಿದ ಉಪಗ್ರಹಗಳು ಮಂಗಳನ ಪೂರ್ವಭಾಗದ ಚಿತ್ರಗಳನ್ನು ಮಾತ್ರ ತೆಗೆದಿದ್ದರೆ ಮರಿನರ್-೯ ಮಂಗಳಗ್ರಹವನ್ನು ಸಂಪೂರ್ಣವಾಗಿ ಸುತ್ತುಹಾಕಿ ಎಲ್ಲ ಭಾಗಗಳನ್ನೂ ಚಿತ್ರಿಸಿದೆ. ಅದು ಕಳಿಸಿದ ಏಳು ಸಾವಿರಕ್ಕೂ ಮಿಕ್ಕಿದ ಚಿತ್ರಗಳನ್ನು ವಿಜ್ಞಾನಿಗಳು ಅಭ್ಯಸಿಸಿ ಇನ್ನೊಂದು ಹೊಸ ಮಂಗಳನನ್ನು ನಮ್ಮ ಮುಂದೆ ನಿಲ್ಲಿಸಿದ್ದಾರೆ.

ಮಂಗಳನಿಂದ ಬಂದ ಚಿತ್ರಗಳ ಅಭ್ಯಾಸ ಮುಂದುವರೆದ ಹಾಗೆ ಮಂಗಳನ ಬಗೆಗೆ ಎಷ್ಟೋ ಆಶ್ಚರ್ಯಕರವಾದ ಸಂಗತಿಗಳು ಹೊರಬೀಳುತ್ತಿವೆ. ಮೊದಲು ಭಾವಿಸಿದ ಹಾಗೆ ಮಂಗಳ ಶಾಂತಗ್ರಹವಲ್ಲ. ಅಲ್ಲಿನ ಬೃಹದಾಕಾರದ ಜ್ವಾಲಾಮುಖಿಗಳು ಸ್ಫೋಟಗೊಂಡುದರ ಪರಿಣಾಮವಾಗಿ ಲಾವಾರಸದ ಮಹಾ ಪ್ರವಾಹಗಳೇ ಹರಿದ ನಿಶ್ಚಿತ ಕುರುಹುಗಳು ಕಾಣಿಸಿವೆ. ಅಲ್ಲಿ ಒಮ್ಮೊಮ್ಮೆ ತಾಸಿಗೆ ಇನ್ನೂರು ಮೈಲಿಗಿಂತಲೂ ಹೆಚ್ಚಿನ ವೇಗದಿಂದ ಬಿರುಗಾಳಿ ಬೀಸುವುದುಂಟು. ಇಂಥ ಒಂದು ಬಿರುಗಾಳಿಯಿಂದೆದ್ದ ಧೂಳಿನಿಂದ ಮರಿನರ್-೯ ಅನೇಕ ವಾರಗಳ ವರೆಗೆ ಯಾವ ಚಿತ್ರವನ್ನೂ ಕಳಿಸಲು ಅಸಮರ್ಥವಾಯಿತು. ಮಂಗಳನ ಭೂಗರ್ಭದಲ್ಲಿ ನಡೆದ ಉಗ್ರಕ್ರಿಯೆಗಳಿಂದಾಗಿ ಅಲ್ಲಿಯೂ ಪೃಥ್ವಿಯ ಹಾಗೆ ಭೂಖಂಡಗಳು ಸರಿದು ಬಹು ಆಳವಾದ ಕೊಳ್ಳಗಳನ್ನು ನಿರ್ಮಿಸಿವೆ ಎಂಬುದನ್ನು ಮರಿನರ್-೯ ತೆಗೆದ ಚಿತ್ರಗಳು ಹೊರಗೆಡಹಿವೆ. ಮಂಗಳಗ್ರಹವಿನ್ನೂ ಶೀತಲವಾಗಿಲ್ಲ; ಅದು ಈಗಲೂ ಒಳಗೊಳಗೆ ಕುದಿಯುತ್ತಿದೆ.

ಅಂಗಾರಾಮ್ಲ ಪ್ರಧಾನವಾದದ್ದು ಮಂಗಳನ ವಾತಾವರಣ. ಅದೂ ತೀರಾ ವಿರಳವಾಗಿದೆ. ಮಂಗಳನ ಪೃಷ್ಠಭಾಗದಲ್ಲಿ ನೀರನ್ನು ಹಿಡಿದಿಡುವಷ್ಟು ವಾತಾವರಣದ ಒತ್ತಡವಿಲ್ಲದಿರುವುದರಿಂದ ಅಲ್ಲಿ ದ್ರವರೂಪದಲ್ಲಿ ನೀರಿನ ಅಸ್ತಿತ್ವ ಇರಲು ಸಾಧ್ಯವೇ ಇಲ್ಲ. ಆಕಸ್ಮಾತ್ತಾಗಿ ಅಲ್ಲಿ ಒಂದು ಹನಿ ನೀರು ಉದ್ಭವಗೊಂಡರೂ ಕ್ಷಣಾರ್ಧದಲ್ಲಿ ಅದು ಆವಿಯಾಗಿ ವಾತಾವರಣವನ್ನು ಸೇರುವುದು. ಅಪರಾಹ್ನ ವೇಳೆಯಲ್ಲಿ ಜ್ವಾಲಾಮುಖಿಗಳ ಮೇಲೆ ಮೋಡಗಳು ನಿರ್ಮಾಣವಾಗುತ್ತಿರುವುದನ್ನು ಮರಿನರ್-೯ರ ಚಿತ್ರಗಳು ಗುರುತಿಸಿವೆ. ಅಲ್ಲಿನ ವಾತಾವರಣದ ಒತ್ತಡ, ಉಷ್ಣತೆಗಳನ್ನು ಅನುಲಕ್ಷಿಸಿದಾಗ ನೀರಿನ ಬಾಷ್ಪದಿಂದ ನಿರ್ಮಿತವಾದ ಮೋಡಗಳು ಮಾತ್ರ ಅಲ್ಲಿರುವುದು ಸಾಧ್ಯ ಎಂದು ವಿಜ್ಞಾನಿಗಳು ಹೇಳುತ್ತಾರೆ.

ಮಂಗಳಗ್ರಹದಲ್ಲಿ ನೀರು ದ್ರವರೂಪದಲ್ಲಿಲ್ಲವಾದರೂ ಘನರೂಪದಲ್ಲಿ, ಅಂದರೆ ಹಿಮದ ರೂಪದಲ್ಲಿದೆಯೆಂದರೆ ಆಶ್ಚರ್ಯವಾದೀತು. ಮಂಗಳನ ಧ್ರುವಪ್ರದೇಶಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಹಿಮದ ಸಂಗ್ರಹವಿದೆ. ಅದು ಎಷ್ಟು ಪ್ರಮಾಣದಲ್ಲಿದೆಯೆಂಬುದನ್ನು ಇನ್ನೂ ನಿರ್ಧರಿಸಲಾಗಿಲ್ಲ. ಈ ಹಿಮರಾಶಿಯ ಮೇಲೆ ಅಲ್ಲಿನ ಅತಿ ಶೈತ್ಯದಿಂದಾಗಿ ಅಂಗಾರಾಮ್ಲ-ವಾಯುವು ಘನೀಭೂತವಾಗಿ ಸಂಗ್ರಹಗೊಂಡಿದೆ. ಕೆಲವೆಡೆಗಳಲ್ಲಿ ಈ ಘನೀಕೃತ ಅಂಗಾರಾಮ್ಲದ ಪದರ ಒಂದು ಕಿಲೋಮೀಟರಿಗಿಂತಲೂ ದಪ್ಪವಾಗಿದೆ. ಬೇಸಿಗೆಕಾಲದಲ್ಲೂ ಅದು ವ್ಯತ್ಯಾಸಗೊಳ್ಳುವುದಿಲ್ಲ ಎಂದು ಕ್ಯಾಲಿಫೋರ್ನಿಯಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ವಿಜ್ಞಾನಿ ಸೆಗಾನರು ಹೇಳುತ್ತಾರೆ.

ಮರಿನರ್-೯ ತೆಗೆದ ಚಿತ್ರಗಳಲ್ಲಿ ಸುಮಾರು ಇನ್ನೂರಾಐವತ್ತು ಮೈಲುಗಳಷ್ಟು ಉದ್ದವಾದ ಕೊಳ್ಳವನ್ನು ತೋರಿಸುವ ಚಿತ್ರವೂ ಒಂದಿದೆ. ಆ ಕೊಳ್ಳದಿಂದ ಕವಲುಗಳೂ ಪಡಿಕವಲುಗಳೂ ಒಡೆದಿರುವುದರಿಂದ ಒಂದಾನೊಂದು ಕಾಲದಲ್ಲಿ ಅಲ್ಲಿ ನೀರು ಪ್ರವಹಿಸುತ್ತಿರಬಹುದೆಂದು ಊಹಿಸಲಾಗಿದೆ. ಅನೇಕ ಸ್ಥಳಗಳು ಬಣಗಿಹೋದ ನದಿಯ ಪಾತ್ರದಂತೆ ಕಾಣಿಸುತ್ತಿವೆ. ಅಲ್ಲಿ ನೀರಿನ ಅಸ್ತಿತ್ವವಿರುವುದೇ ಸಾಧ್ಯವಿಲ್ಲದಾಗ ನದಿಗಳ ಅಸ್ತಿತ್ವ ಹೇಗೆ ಬಂತು? ಇದಕ್ಕೆ ಕೆಲ ವಿಜ್ಞಾನಿಗಳು ಕೊಡುವ ಉತ್ತರವೇ ಬೇರೆ. ಅವರ

ಪ್ರಕಾರ, ಮಂಗಳನ ಅಕ್ಷ ಸರ್ವಕಾಲದಲ್ಲೂ ಒಂದೇ ಸಮನಾಗಿಲ್ಲ. ಐವತ್ತು ಸಾವಿರ ವರ್ಷಗಳ ವರೆಗೆ ಕ್ರಮೇಣ ಒಂದು ಕಡೆಗೆ ವಾಲುತ್ತ ಹೋಗಿ, ಒಂದು ನಿಶ್ಚಿತ ಕೋನವನ್ನು ತಲುಪಿ, ಅನಂತರ ಮತ್ತೆ ತನ್ನ ಮೊದಲಿನ ಸ್ಥಾನದತ್ತ ವಾಲತೊಡಗುತ್ತದೆ. ಹೀಗೆ ಅದು ಒಂದು ಕಡೆಗೆ ವಾಲಿ ಸೂರ್ಯನನ್ನು ಪರಿಭ್ರಮಿಸುವಾಗ ಮಂಗಳನ ಉತ್ತರ ಧ್ರುವ ಸೂರ್ಯನಿಗೆ ಮೊದಲಿಗಿಂತ ಸಮೀಪವಾಗುತ್ತದೆ. ಮಂಗಳನಿಗೆ ಈ ಸ್ಥಿತಿ ಸುಮಾರು ಇಪ್ಪತ್ತೆಂಟು ಸಾವಿರ ವರ್ಷಗಳ ಹಿಂದೆ ಪ್ರಾಪ್ತವಾಗಿತ್ತೆಂದು ಲೆಕ್ಕ ಹಾಕಿದ್ದಾಗಿದೆ. ತತ್ಪರಿಣಾಮವಾಗಿ ಉತ್ತರಧ್ರುವದಲ್ಲಿ ಕೂಡಿ ಬಿದ್ದ ಅಂಗಾರಾಮ್ಲ ಆವಿಯಾಯಿತಲ್ಲದೆ ವಾತಾವರಣದ ಒತ್ತಡವೂ ಉಷ್ಣತಾಮಾನವೂ ಹೆಚ್ಚಿತು. ಒಳಗಿದ್ದ ಹಿಮಕರಗಿ ಮಹಾಪ್ರವಾಹಗಳಾಗಿ ಹರಿಯಿತು. ಅಲ್ಲಲ್ಲಿ ಸರೋವರಗಳೂ ಸೃಷ್ಟಿಗೊಂಡವು. ಮಂಗಳ ತನ್ನ ಮೊದಲಿನ ಸ್ಥಾನಕ್ಕೆ ಮರಳಿದಂತೆ ಅಂಗಾರಾಮ್ಲ ಮತ್ತೆ ಘನೀಭೂತವಾಯಿತು; ನೀರು ಹೆಪ್ಪುಗಟ್ಟಿತು ಇಲ್ಲವೆ ಆವಿಯಾಗಿ ವಾತಾವರಣವನ್ನು ಸೇರಿತು; ಹಾಗೂ ವಾತಾವರಣದ ಒತ್ತಡ ಕಡಿಮೆಯಾಗಿ ಅದು ಮೊದಲಿನ ಹಾಗೆಯೆ ವಿರಳವಾಯಿತು.

ವಾತಾವರಣದ ಒತ್ತಡವನ್ನು ವಿರಳಗೊಳಿಸಲು ನದಿ ಸರೋವರಗಳನ್ನು ಬತ್ತಿಸಲು ಮಂಗಳಗ್ರಹವು ಅತ್ಯಧಿಕ ಪ್ರಮಾಣದಲ್ಲಿ ಶಕ್ತಿಯನ್ನು ಸಂಗ್ರಹಿಸಿಟ್ಟುಕೊಳ್ಳಬೇಕು. ಅಲ್ಲದೆ ಅದನ್ನು ಹೊರಹೊಮ್ಮಿಸಬೇಕು. ಇವೆರಡೂ ಕಲ್ಪನಾತೀತವಾಗಿವೆ. ಮಂಗಳಗ್ರಹದ ಮೇಲೆ ಉಲ್ಕಾಘಾತದಿಂದ ಉಂಟಾದ ಗುಳಿಗಳು ಮುನ್ನೂರು ನಾನ್ನೂರು ಕೋಟಿ ವರ್ಷಗಳಷ್ಟು ಹಳೆಯವು. ಸುಮಾರು ಇಪ್ಪತ್ತೆಂಟು ಮೂವತ್ತು ಸಾವಿರ ವರ್ಷಗಳ ಹಿಂದೆ ನದೀ ಸರೋವರಗಳು ಉದ್ಭವಿಸಿ ಬತ್ತಿಹೋದವೆಂಬ ವಾದವನ್ನು ಒಪ್ಪಿಕೊಳ್ಳುವುದಾದಲ್ಲಿ ನೀರಿನ ಪ್ರವಾಹ ಈ ಗುಳಿಗಳನ್ನು ಸವೆಸಿದ ಕುರುಹನ್ನು ನಾವು ಏಕೆ ಕಾಣುವುದಿಲ್ಲ? ಎಂಬುದನ್ನು ಉತ್ತರಿಸುವುದು ಕಠಿಣವಾಗುತ್ತದೆ. ಆದ್ದರಿಂದ ಇದಕ್ಕೆಲ್ಲ ಬೇರೆಯೆ ಕಾರಣವಿರಬೇಕು ಎಂದು ಹೇಳುವ ವಿಜ್ಞಾನಿಗಳೂ ಇದ್ದಾರೆ. ಮರಿನರ್-೯ ಕಳಿಸಿದ ಚಿತ್ರಗಳನ್ನೂ ವೈಜ್ಞಾನಿಕ ವಿವರಗಳನ್ನೂ ವಿಜ್ಞಾನಿಗಳು ಅಭ್ಯಸಿಸಿ ಈ ಬಗ್ಗೆ ತೀರ್ಮಾನಕ್ಕೆ ಬರಬೇಕಿದೆ. ಆದರೂ ಈಗ ರಶಿಯವು ಕಳಿಸಿರುವ ಉಪಗ್ರಹದಿಂದ ಬರುವ ಮಾಹಿತಿಯನ್ನೂ ೧೯೭೬ ರಲ್ಲಿ ಅಮೇರಿಕ ಕಳಿಸುವ ಉಪಗ್ರಹದಿಂದ ದೊರೆಯುವ ಮಾಹಿತಿಯನ್ನೂ ತಾಳೆಹಾಕಿದ ಮೇಲೆ ಈ ಬಗ್ಗೆ ಒಂದು ನಿಖರವಾದ ನಿರ್ಣಯಕ್ಕೆ ಬರಬಹುದು.

ಹತ್ತೊಂಭತ್ತನೆಯ ಶತಮಾನದಷ್ಟು ಪೂರ್ವದಲ್ಲೆ ಖಗೋಳಶಾಸ್ತ್ರಿಗಳು ತಮ್ಮ ದುರ್ಬೀನಿನಿಂದ ಮಂಗಳಗ್ರಹದ ಮೇಲೆ ಒಂದು ಮಹಾ ಜ್ವಾಲಾಮುಖಿ ಪರ್ವತವನ್ನು ಪತ್ತೆ ಹಚ್ಚಿ



"ನಿಮ್ಮ ಫೈಲನ್ನು ಎಂಟು ತಿಂಗಳ ಹಿಂದೆ ಇಲ್ಲೇ ಎಲ್ಲೋ ಇಟ್ಟ ಹಾಗೆ ನೆನಪಿದೆ ಸಾರ್ !! ಇನ್ನೊಂದೆರಡು ತಿಂಗಳು ಬಿಟ್ಟುಕೊಂಡು ಬನ್ನಿ ಹುಡುಕಿ ಕೊಡ್ತೀನಿ..."

ಅದಕ್ಕೆ 'ನಿಕ್ಸ್ ಒಲಿಂಪಿಯಾ' ಎಂದು ಹೆಸರಿಸಿದ್ದಾರು. ಪೃಥ್ವಿಯ ಉಳಿದಾವ ಜ್ವಾಲಾಮುಖಿ ಪರ್ವತಕ್ಕಿಂತಲೂ ಇದು ಬೃಹತ್ತಾಗಿದೆ. ಇದರ ತಳ ಮುನ್ನೂರು ಮೈಲುಗಳಷ್ಟು ಅಗಲವಾಗಿದ್ದು ಜ್ವಾಲಾಮುಖಿಯ ಬಾಯಿ ನಲವತ್ತು ಮೈಲುಗಳಷ್ಟು ಅಗಲವಾಗಿದೆ ಎಂದು ವಿಜ್ಞಾನಿಗಳು ಲೆಕ್ಕ ಹಾಕಿದ್ದಾರೆ. ಇದಲ್ಲದೆ ಇನ್ನೂ ಅನೇಕ ಜ್ವಾಲಾಮುಖಿಗಳನ್ನೂ ಲಾವಾರಸ ಪ್ರವಾಹಗಳನ್ನೂ ಮರಿನರ್-೯ ಪತ್ತೆ ಹಚ್ಚಿದೆ. ಕೆಲ ಜ್ವಾಲಾಮುಖಿಗಳ ಸ್ಫೋಟ ಕೆಲವೇ ಸಾವಿರ ಅಥವಾ ದಶಸಾವಿರ ವರ್ಷಗಳ ಹಿಂದೆ ಆಗಿರಬಹುದು. ಆದರೆ ಈ ಜ್ವಾಲಾಮುಖಿಗಳ ವಿಷಯದಲ್ಲಿಯೂ ಒಂದು ರಹಸ್ಯ ಉಳಿದುಕೊಂಡಿದೆ. ಅವೆಲ್ಲ ಇರುವುದು ಮಂಗಳನ ಪಶ್ಚಿಮಭಾಗದಲ್ಲಿ. ಪೂರ್ವಭಾಗ ಸಂಪೂರ್ಣವಾಗಿ ಶಾಂತವಾಗಿದ್ದು ಉಲ್ಕಾಪಾತದಿಂದುಂಟಾದ ಗುಳಿಗುಂಪುಗಳು ಎಷ್ಟೋ ಕೋಟಿ ವರ್ಷಗಳಿಂದಲೂ ಇದ್ದಂತೆಯೇ ಇವೆ. ಹೀಗೆ ಒಂದು ದಿಕ್ಕಿನಲ್ಲೆಲ್ಲ ಚಂದ್ರನಲ್ಲಿದ್ದಂತೆ ಉಲ್ಕಾಘಾತದ "ಕಲೆ"ಗಳು ಇನ್ನೊಂದು ಕಡೆಗೆಲ್ಲ ಜ್ವಾಲಾಮುಖಿ ಜಲಪ್ರವಾಹಗಳ ಗುರುತುಗಳು ಇದ್ದದ್ದರಿಂದಲೇ ಹಿಂದೆ ಕಳಿಸಿದ ಯಾನಗಳು ಒಂದೇ ದಿಕ್ಕಿನಿಂದ ತೆಗೆದು ಕಳಿಸಿದ ಚಿತ್ರಗಳು ಜ್ವಾಲಾಮುಖಿ, ಜಲಪ್ರವಾಹಗಳ ಗುರುತುಗಳನ್ನು ತೋರಿಸಲಿಲ್ಲ. ಅದುದರಿಂದಲೇ ಮಂಗಳವೊಂದು ಮೃತ ಗ್ರಹವೆಂಬ ಭ್ರಮೆ ಹುಟ್ಟಿತು.

ಆದರೆ ಮಂಗಳನ ಒಂದು ಒಂದೇ ಪಕ್ಕದಲ್ಲಷ್ಟೇ ಈ ಚಟುವಟಿಕೆಗಳ ಕುರುಹುಗಳೇಕೆ ? ಇನ್ನೊಂದು ಪಕ್ಕ ಕೋಟ್ಯಂತರ ವರ್ಷಗಳಿಂದ ಶಾಂತವಾಗಿದ್ದೇಕೆ ? ಚಟುವಟಿಕೆ—ಜಲಪ್ರವಾಹ ಅಥವಾ ಲಾವಾಪ್ರವಾಹ—ಇದ್ದಿದ್ದರೆ ಉಲ್ಕಾಘಾತದಿಂದುಂಟಾದ ಗುಳಿಗಳು ಮುಚ್ಚಿ ಹೋಗುತ್ತಿದ್ದವು. ಇವಕ್ಕೆ ಕೆಲವರು ಕೊಡುವ ಉತ್ತರ ಹೀಗೆ :

ಭೂಗರ್ಭಶಾಸ್ತ್ರದ ರೀತ್ಯಾ ಮೂಲತಃ ತಂಪಾಗಿದ್ದ ಈ ಗ್ರಹ ಇತ್ತೀಚೆ, ಅಂದರೆ ಕಳೆದ ಕೆಲ

ಮಂಗಳಗ್ರಹದಲ್ಲಿ ಜಲಪ್ರವಾಹ ?





ಮಂಗಳಗ್ರಹದ ಈ ಅದ್ಭುತ ಚಿತ್ರವನ್ನು ಅಮೇರಿಕ ಸರಕಾರ ಬಿಡುಗಡೆ ಮಾಡಿದೆ.

ಆ ಗ್ರಹದ ರೂಪಣೆಯಲ್ಲಿ ನೀರು ಮಹತ್ವದ ಪಾತ್ರ ವಹಿಸಿತೆಂದು ಈ ಚಿತ್ರ ಸೂಚಿಸುತ್ತದೆ

ಶತಕೋಟಿ ವರ್ಷಗಳಿಂದ, ಬಿಸಿಯೇರುತ್ತಿದೆ. ಈಗ ಆ ಗ್ರಹ ಸಾಕಷ್ಟು ಬಿಸಿಯಾಗಿದ್ದು ಒಂದು ಪಕ್ಕದಲ್ಲಿ ಶಿಲಾಖಂಡಗಳನ್ನು ಕರಗಿಸಲೂ ಹೀಗೆ ಕರಗಿ ತಯಾರಾದ ಲಾವಾರಸವನ್ನು ಉಗುಳಲೂ ಶಕ್ತವಾಗಿದೆ. ಈ ಪಶ್ಚಿಮ ಭಾಗದಲ್ಲಿ ಕಂಡು ಬಂದ ಪರಿಣಾಮವೇ ಮುಂದೆ ಪೂರ್ವಭಾಗದಲ್ಲೂ ಕಂಡುಬರಬಹುದು. ಈ ವಾದವನ್ನು ಕ್ಯಾಲಿಫೋರ್ನಿಯಾ ಟೆಕ್ನಲಾಜಿಕಲ್ ಸಂಸ್ಥೆಯ ಬ್ರೂಸ್ ಮುರ್ರೇ ಮುಂದೊಡ್ಡಿದ್ದಾರೆ. ಇದು ಎಷ್ಟು ಮಟ್ಟಿಗೆ ನಿಜವೋ ಹೇಳುವುದು ಕಷ್ಟ. ಕದಾಚಿತ್ ಈ ವಾದ ನಿಜವಾದದ್ದೇ ಆದರೆ ಭೂಗರ್ಭ ಶಾಸ್ತ್ರಿಗಳು ರೋಮಾಂಚನಗೊಳ್ಳುವುದು ಖಂಡಿತ. ಪೃಥ್ವಿಯ ಒಳಭಾಗ ಲಕ್ಷಾಂತರ ವರ್ಷಗಳಿಂದ ಕುದಿಯುತ್ತಿದೆ. ಈ ಕುದಿತದಿಂದಾಗಿಯೆ ನೀರೂ ವಾತಾವರಣವೂ ಸೃಷ್ಟಿಗೊಂಡವೆಂದು ಹೇಳಲಾಗುತ್ತಿದೆ. ಪೃಥ್ವಿ ಎಂದು ಬಿಸಿಯೇರ ತೊಡಗಿತೆಂಬುದು ಇನ್ನೂ ಸಂದಿಗ್ಧವಾಗಿದೆ. ಮಂಗಳ 'ಇದೀಗ' ಬಿಸಿಯೇರತೊಡಗಿದ್ದರಿಂದ ಮಂಗಳನ ಬಗೆಗಿನ ಅಭ್ಯಾಸ ಪೃಥ್ವಿಯ ಇತಿಹಾಸದ ಮೇಲೆ ಹೊಸ ಬೆಳಕನ್ನು ಬೀರಬಲ್ಲದು.

ಮಂಗಳನಲ್ಲಿರುವ ಮಹಾ ಜ್ವಾಲಾಮುಖಿ ಪ್ರದೇಶದ ಆಗ್ನೇಯಕ್ಕೆ ಇನ್ನೂರಾಐವತ್ತು ಮೈಲುದ್ದದ ಕೊಳ್ಳವಿದೆ. ಕಲವೆಡೆ ಇದು ಎಪ್ಪತ್ತೈದು ಮೈಲುಗಳಷ್ಟು ಅಗಲವಾಗಿದ್ದು, ಸರಾಸರಿಯಾಗಿ ನಾಲ್ಕು ಮೈಲುಗಳಷ್ಟು ಆಳವಾಗಿದೆ. ಇದು ಹೇಗೆ ಉದ್ಭವಗೊಂಡಿತೆಂಬುದು ಇನ್ನೂ ಸ್ಪಷ್ಟವಾಗಿಲ್ಲ. ಮೊಝಾಂಬಿಕ್‌ನಿಂದ ಕೆಂಪು ಸಮುದ್ರದವರೆಗೆ ಈ ಬಗೆಯ ಕೊಳ್ಳ ಹೊಂದಿದ್ದು ಅದು ಭೂಗರ್ಭ ಕ್ರಿಯೆಗಳಿಂದ ಭೂಖಂಡಗಳು ಪರಸ್ಪರ ದೂರ ಸರಿದುದರಿಂದಾಗಿದೆಯೆಂದು ಭಾವಿಸಲಾಗಿದೆ. ಪ್ರಾಯಶಃ ಮಂಗಳನಲ್ಲೂ ಭೂಖಂಡಗಳು ದೂರ ಸರಿಯುತ್ತಿದ್ದು, ತತ್ಪರಿಣಾಮವಾಗಿ ಮಂಗಳನಲ್ಲಿ ಆ ಕೊಳ್ಳ ಉದ್ಭವಗೊಂಡಿರಬಹುದೆ?

ಪೃಥ್ವಿಯ ವಾತಾವರಣದ ಮೇಲೆ ಸಾಗರಗಳು ಎಷ್ಟು ಮಟ್ಟಿಗೆ ಪ್ರಭಾವ ಬೀರುತ್ತದೆಂಬ ಬಗ್ಗೆ ಬಹು ಕಾಲದಿಂದ ಸಂಶೋಧನೆಗಳು ನಡೆಯುತ್ತಿವೆಯಾದರೂ ಈ ಬಗ್ಗೆ ಸ್ಥಿರವಾದ ನಿರ್ಣಯಕ್ಕೆ ಬರಬೇಕಾದರೆ ಸಾಗರಗಳನ್ನೇ ಇಲ್ಲದಂತೆ ಮಾಡಿ ಪ್ರಯೋಗಗಳನ್ನು ನಡೆಸಬೇಕು. ಆದರೆ ಇದು ಪೃಥ್ವಿಯ ಮೇಲೆ ಸಾಧ್ಯವಾಗದ ಸಂಗತಿಯೆಂಬುದು ಸ್ಪಷ್ಟವೇ ಇದೆ. ಮಂಗಳನ ಅಕ್ಷ ಪೃಥ್ವಿಯ ಅಕ್ಷದಷ್ಟೆ ಸೂರ್ಯನತ್ತ ವಾಲಿದೆ; ಮಂಗಳನೂ ಪೃಥ್ವಿಯ ಹಾಗೆ ಇಪ್ಪತ್ತನಾಲ್ಕು ಗಂಟೆಗಳಿಗೊಮ್ಮೆ ತನ್ನ ಅಚ್ಚಿನ ಸುತ್ತ ತಿರುಗುತ್ತಾನೆ. ಮೇಲಾಗಿ ಅಲ್ಲಿ ಸಾಗರಗಳಿಲ್ಲ. ಹೀಗಾಗಿ ಮಂಗಳನ ಮೇಲೆ ಈ ಬಗ್ಗೆ ಸಂಶೋಧನೆಯನ್ನು ನಡೆಸಿ ಪೃಥ್ವಿಯ ವಾತಾವರಣದ ಮೇಲೆ ಸಾಗರಗಳು ಯಾವ ರೀತಿಯಲ್ಲಿ ಪ್ರಭಾವವನ್ನು ಬೀರುತ್ತವೆಂಬುದನ್ನು ತಿಳಿದುಕೊಳ್ಳಬಹುದು.

ಮರಿನರ್-೯ ಮಂಗಳನನ್ನು ಸುತ್ತುತ್ತಿದ್ದಾಗ ಅಲ್ಲಿನ ವಾತಾವರಣದಲ್ಲಿ ಒಮ್ಮೆಲೆ ಅಸಂಖ್ಯಾತ ಸಂಖ್ಯೆಯಲ್ಲಿ ಕಣಗಳು ತುಂಬಿಕೊಂಡದ್ದನ್ನೂ ಕೆಲ ವೇಳೆಯ ನಂತರ ವಾತಾವರಣ ತಿಳಿಯಾದದ್ದನ್ನೂ ಆ ಉಪಗ್ರಹ ಗುರುತಿಸಿತು. ಇವಕ್ಕೆ ಕಾರಣ ಮಾತ್ರ ಇನ್ನೂ ಗೊತ್ತಾಗಿಲ್ಲ. ಕಾರಣ ಗೊತ್ತಾದಾಗ ಪೃಥ್ವಿಯಲ್ಲಿ ವಾತಾವರಣದಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕಲ್ಮಶಗಳು ಸಂಗ್ರಹಗೊಂಡರೆ ಪರಿಣಾಮವೇನಾಗಬಹುದೆಂಬ ಬಗ್ಗೆ ಹೆಚ್ಚಿನ ವಿವರ ದೊರೆಯುವುದು. ಕಲುಷಿತ ವಾತಾವರಣ ಅಧಿಕಗೊಳ್ಳುತ್ತಿರುವ ಈ ದಿನಗಳಲ್ಲಿ ಇಂತಹ ಸಂಶೋಧನೆಗಳು ವಾತಾವರಣವನ್ನು ತಿಳಿಗೊಳಿಸಲು ಕೆಲಮಟ್ಟಿಗೆ ಸಹಾಯಕವಾಗಬಹುದು.

ಹೀಗೆ ಉಪಗ್ರಹಗಳು ಕಲೆಹಾಕಿದ ವೈಜ್ಞಾನಿಕ ಅಂಶಗಳಿಂದ ಮಂಗಳನ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವವಲ್ಲದೆ ಪೃಥ್ವಿಯ ಇತಿಹಾಸದ ಬಗೆಗೂ ಬಿಡಿಸಲಾಗದೆ ಉಳಿದುಕೊಂಡ ಇನ್ನಿತರ ಸಮಸ್ಯೆಗಳ ಬಗೆಗೂ ಹೆಚ್ಚಿನ ಮಾಹಿತಿ ದೊರೆಯುವುದು. ✡

# ಹಚ್ಚೆ

'ಸಾಕಿ'

ಆಕೆ ಕಲೆಯ ಬಗ್ಗೆ ಹರಟುತ್ತಲೇ ಇರುತ್ತಾಳೆ. ಕೇಳಿ ಕೇಳಿ ತಲೆ ಚಿಟ್ಟೇರಿಹೋಗುತ್ತದೆ. ಕೆಲ ಚಿತ್ರಗಳು ನಮ್ಮನ್ನು ಆವರಿಸಿಕೊಂಡುಬಿಡುತ್ತವೆ ಎಂದು ಅವಳು ಮೇಲಿಂದ ಮೇಲೆ ಹೇಳುವುದಿದೆ. "ಶುದ್ಧ ಬುಡಬುಡಿಕೆ! ಆವರಿಸಲಿಕ್ಕೇನು ಅವು ಬಳ್ಳಿಗಳೆ?" ಎಂದು ಕ್ಲೋವಿಸ್ ಬದಿಯಲ್ಲೇ ಕುಳಿತಿದ್ದ ಪತ್ರಿಕೋದ್ಯೋಗಿಗೆ ಹೇಳಿದ. ಅದನ್ನು ಕೇಳಿ ಪತ್ರಿಕೋದ್ಯೋಗಿ, "ಅಂದ ಹಾಗೆ ಇದನ್ನು ಕೇಳಿದೊಡನೆ ನನಗೆ ಹೆನ್ರಿ ಡೆಪ್ಲಿಸ್ಸನ ನೆನಪು ಬಂತು, ನೋಡು. ಮತ್ತೆ, ಎಂದಾದರೂ ನಾನು ಅವನ ವಿಷಯ ನಿನಗೆ ಹೇಳಿದ್ದೇನೆಯೆ?" ಎಂದು ಕೇಳಿದ ಆ ಪತ್ರಿಕೋದ್ಯೋಗಿ.

ಕ್ಲೋವಿಸ್ "ಇಲ್ಲ" ಎಂದು ತಲೆಯಾಡಿಸಿದಾಗ ಪತ್ರಿಕೋದ್ಯೋಗಿ ಪ್ರಾರಂಭಿಸಿದ :

"ಹೆನ್ರಿ ಡೆಪ್ಲಿಸ್ ಎಂಬಾತ ಲಕ್ಸೆಂಬರ್ಗಿನ ನಿವಾಸಿ. ಆತ ಬಹಳ ಯೋಚಿಸಿ ಟ್ರಾವ್‌ಲಿಂಗ್ ಏಜಂಟನ ಕೆಲಸಕ್ಕೆ ಸೇರಿಕೊಂಡ. ಹೇಳಿ ಕೇಳಿ ಲಕ್ಸೆಂಬರ್ಗ್ ತೀರಾ ಚಿಕ್ಕ ದೇಶ. ಹೀಗಾಗಿ ಅವನು ಆಗಾಗ್ಗೆ ಹೊರ–ದೇಶಗಳಲ್ಲಿ ಸಂಚರಿಸಬೇಕಾಗುತ್ತಿತ್ತು. ಹೀಗೆಯೆ ಒಮ್ಮೆ ಡೆಪ್ಲಿಸ್ ಇಟಲಿಯ ಉತ್ತರ ಭಾಗದಲ್ಲಿ ಒಂದೆಡೆ ಇದ್ದಾಗ, ಆತನ ದೂರದ ಸಂಬಂಧಿಕನೊಬ್ಬನು ಸತ್ತುಹೋದನೆಂದೂ ಅವನು ಹೆನ್ರಿ ಡೆಪ್ಲಿಸ್ಸನ ಪಾಲಿಗೆ ಸ್ವಲ್ಪ ಆಸ್ತಿಯನ್ನು ಬಿಟ್ಟು ಹೋಗಿದ್ದಾನೆಂದೂ ಸುದ್ದಿ ಬಂತು.

"ಹೆನ್ರಿ ಡೆಪ್ಲಿಸ್ ಪ್ರತಿಯೊಂದು ಕಾಸನ್ನೂ ಎಣಿಸೆಣಿಸಿ ಖರ್ಚು ಮಾಡುವ ಪ್ರವೃತ್ತಿಯುವನಾಗಿದ್ದ. ಅಂಥವನ ದೃಷ್ಟಿಯಲ್ಲೂ ಆ ಆಸ್ತಿ ಚಿಕ್ಕದಾಗಿತ್ತೆಂದರೆ ಅದರ ಗಾತ್ರವನ್ನು ನೀನೇ ಊಹಿಸಬೇಕು. ಹಣದ ಮೊತ್ತ ಚಿಕ್ಕದಾಗಿದ್ದರೇನಂತೆ, ಹೇಗೂ ಅದು ತಂತಾನೆ ಒದಗಿಬಂದದ್ದು; ಅಂಥಾದ್ದರಲ್ಲಿ ಸ್ವಲ್ಪ ಮಜಾ ಮಾಡಿದರೆ ತಪ್ಪೇನು ಎಂಬ ವಿಚಾರ ಹೆನ್ರಿ ಡೆಪ್ಲಿಸ್ಸನಿಗೆ ಬಂತು.

"ಆತ ಇಳಿದುಕೊಂಡಿದ್ದ ಊರಿನಲ್ಲೇ ಆ್ಯಂಡ್ರಿಯಾಸ್ ಪಿಂಚಿನಿ ವಾಸಿಸುತ್ತಿದ್ದ. ಹಚ್ಚೆ ಚುಚ್ಚುವುದರಲ್ಲಿ ಆತ ಇಡಿ ಇಟಲಿಯಲ್ಲೇ ನಿಸ್ಸೀಮನಾಗಿದ್ದ, ಅವನ ಬಳಿ ಡೆಪ್ಲಿಸ್ ಹೋಗಿ ಕುತ್ತಿಗೆಯಿಂದ ಸೊಂಟದ ವರೆಗೆ ಪೂರ್ತಿ ಬೆನ್ನನ್ನೆಲ್ಲಾ ಹಚ್ಚೆ ಚುಚ್ಚುತ್ತೀಯಾ? ಎಂದು ಕೇಳಿದ. ಅವನ ಆರ್ಥಿಕ ಪರಿಸ್ಥಿತಿ ಅಷ್ಟು ಚೆನ್ನಾಗಿದ್ದಿಲ್ಲವಾದ್ದರಿಂದ ಪಿಂಚಿನಿ ಬರೇ ಆರುನೂರು ಫ್ರಾಂಕುಗಳಿಗೆ ಈ ಕೆಲಸ ಕೈಕೊಳ್ಳಲು ಒಪ್ಪಿದ. ಇಕಾರಸ್ಸನ ಪತನವನ್ನು ಚಿತ್ರಿಸುವುದೆಂದು ನಿರ್ಧಾರವಾಯಿತು. ಪಿಂಚಿನಿ ಕೆಲಸವನ್ನು ಪೂರ್ತಿಗೊಳಿಸಿದಾಗ ಹೆನ್ರಿ ಡೆಪ್ಲಿಸ್ಸನಿಗೆ ನಿರಾಶೆಯೆ ಆಯಿತು. ಆತ ಭಾವಿಸಿದ್ದೇ ಬೇರೆ, ಪಿಂಚಿನಿ ಚಿತ್ರಿಸಿದ್ದೇ ಬೇರೆ. ಮೂವತ್ತು ವರ್ಷಗಳ ಯುದ್ಧದಲ್ಲಿ ವಾಲೆನ್‌ಸ್ಟೀನ್ ಗೆದ್ದ ಕೋಟೆಯ ಹೆಸರು ಇಕಾರಸ್ ಎಂದು ಹೆನ್ರಿ ಡೆಪ್ಲಿಸ್ ಭಾವಿಸಿದ್ದ. ಆ ಹಚ್ಚೆಯನ್ನು ನೋಡಿದವರೆಲ್ಲರೂ ಅದನ್ನು ಪಿಂಚಿನಿಯ ಅತ್ಯುತ್ಕೃಷ್ಟ ಕಲಾಕೃತಿ ಎಂಬ ತೀರ್ಮಾನಕ್ಕೆ ಬಂದಿದ್ದರಿಂದ ತಾನು ಭಾವಿಸಿದ್ದು ತಪ್ಪಾದ ಬಗ್ಗೆ ಅವನಿಗೇನೂ ಅಸಮಾಧಾನವಾಗಿರಲಿಲ್ಲ.

"ಅದು ಆ್ಯಂಡ್ರಿಯಾಸ್ ಪಿಂಚಿನಿಯ ಅತ್ಯುತ್ತಮ ಕಲಾಕೃತಿಯಷ್ಟೆ ಅಲ್ಲ, ಕೊನೆಯ ಕಲಾಕೃತಿಯೂ ಆಗಿತ್ತು. ಏಕೆಂದರೆ ಚಿತ್ರ ಮುಗಿದ ನಂತರ, ಹೆನ್ರಿ ಡೆಪ್ಲಿಸ್ ಹಣ ಸಲ್ಲಿಸುವ ಮೊದಲೆ

ಪಿಂಚಿನಿ ಸತ್ತುಹೋದ. ಆತನನ್ನು ಸಕಲ ಸನ್ಮಾನಗಳೊಂದಿಗೆ ದಫನಗೊಳಿಸಲಾಯಿತಲ್ಲದೆ ಮೇಲೆ ಕಲಾಕುಸುರುಗಳುಳ್ಳ ಸುಂದರವಾದ ಗೋರಿಯನ್ನು ನಿರ್ಮಿಸಲಾಯಿತು. ಆತ ಸತ್ತು ಹೋದರೇನಂತೆ, ಅವನ ಹೆಂಡತಿಯಿದ್ದಾಳಲ್ಲ. ಕೊಡುವ ಹಣವನ್ನು ಆವಳಿಗೇ ಕೊಟ್ಟರಾಯಿತು ಅಂದುಕೊಂಡ ಡೆಪ್ಲಿಸ್. ದೂರದ ಸಂಬಂಧಿಕ ಅವನಿಗೆ ಬಿಟ್ಟುಹೋದ ಮೊತ್ತ ಮೊದಲೇ ಚಿಕ್ಕದಾಗಿತ್ತು; ತನ್ನ ಇತರೇ ಸಾಲದ ಬಾಕಿಯನ್ನೆಲ್ಲಾ ತೀರಿಸಿ ಸರಾಯಿಯ ಬಿಲ್ಲನ್ನು ಚುಕ್ತಾ ಮಾಡಿದ ಮೇಲೆ ಡೆಪ್ಲಿಸ್ ಬಳಿ ಕೇವಲ ೪೩೦ ಫ್ರಾಂಕುಗಳಷ್ಟು ಮಾತ್ರ ಉಳಿದಿತ್ತು. ಅಷ್ಟನ್ನು ತೆಗೆದುಕೊಂಡು ಡೆಪ್ಲಿಸ್ ವಿಧವೆಯ ಮನೆಗೆ ಹೋದ. ಹಣದ ಮೊತ್ತವನ್ನು ಕೇಳಿದೊಡನೆ ಆಕೆ ಸಿಟ್ಟಿನಿಂದ ಪುಟಿದೆದ್ದಳು. ಡೆಪ್ಲಿಸ್ ತಾನು ಮೊದಲು ಒಪ್ಪಿಕೊಂಡದ್ದಕ್ಕಿಂತ ೧೭೦ ಫ್ರಾಂಕುಗಳಷ್ಟು ಕಡಿಮೆ ಕೊಡುತ್ತಾನೆಂಬುದಕ್ಕಿಂತಲೂ; ತನ್ನ ಗಂಡನ ಅತ್ಯುತ್ತಮ ಕಲಾಕೃತಿಗೆ ಕಡಿಮೆ ಬೆಲೆ ಕಟ್ಟುತ್ತಾನಲ್ಲಾ ಎಂಬುದಕ್ಕೆ ಅವಳಿಗೆ ಸಿಟ್ಟು ಬಂದಿತ್ತು. ಹೆನ್ರಿ ಡೆಪ್ಲಿಸ್ ಹಾಗೆಯೇ ಮರಳಿ ಹೋದ. ಒಂದು ವಾರದ ನಂತರ ಮತ್ತೆ ಅವಳ ಕಡೆ ಬಂದ. ಹಣ ಇನ್ನೂ ಕರಗಿಹೋಗಿ ಬರೇ ೪೦೫ ಫ್ರಾಂಕುಗಳಷ್ಟು ಉಳಿದಿತ್ತು. ಅಂಥಾ ಕಲಾಕೃತಿಯ ಬೆಲೆಯನ್ನು ಇನ್ನೂ ಕೆಳಗಿಳಿಸಿದ್ದಾನಲ್ಲಾ ಎಂದಾಕೆಗೆ ಈ ಸಲ ಬ್ರಹ್ಮಾಂಡದಂಥ ಸಿಟ್ಟೇ ಬಂತು. ಮುಂದೆ ಕೆಲ ದಿನಗಳ ನಂತರ ಅವಳು ಅವನೊಡನೆ ಈ ವಿಷಯ ಮಾತುಕತೆಗೆ ನಿರಾಕರಿಸುವುದಾಗಿ ಸಾರಿದಳು. ಹೆನ್ರಿ ಡೆಪ್ಲಿಸ್ಸನಿಗೆ ಇದರಿಂದೇನೂ ಅನಿಸಲಿಲ್ಲ. ಆದರೆ ಆಕೆ ತನ್ನ ಗಂಡನ ಆ ಅಮೋಘವಾದ ಕಲಾಕೃತಿಯನ್ನು ಬಗ್ನ್ಯಾರ್ಮೋ ನಗರಸಭೆಗೆ ಕೊಟ್ಟುಬಿಟ್ಟಿದ್ದಾಗಿ ಸಾರಿದಾಗ ಮಾತ್ರ ಕೊಂಚ ಹೆದರಿಕೆಯಾಯಿತು. ನಗರಸಭೆಯೂ ಅದನ್ನು ಧನ್ಯವಾದಗಳೊಂದಿಗೆ ಸ್ವೀಕರಿಸಿದ್ದಾಗಿ ಪ್ರಕಟಪಡಿಸಿದಾಗ ದಿಗಿಲೇ ಆಯಿತು. ಹೆನ್ರಿ ಡೆಪ್ಲಿಸ್ ತಾನಿರುತ್ತಿದ್ದ



ಸ್ಥಳದಿಂದ ಜಾರಿಕೊಂಡು ರೋಮ್ ನಗರಕ್ಕೆ ಹೋದ. ಹೇಗೂ ತನ್ನನ್ನೂ ತನ್ನ ಚಿತ್ರವನ್ನೂ ಅಲ್ಲಿ ಯಾರೂ ಗುರುತು ಹಿಡಿಯುವುದಿಲ್ಲವಲ್ಲ ಎಂಬ ಭರವಸೆ ಅವನಿಗೆ.

"ಆದರೇನು? ಮೃತ ಕಲಾವಿದನ ಪ್ರತಿಭೆಯನ್ನು ಬೆನ್ನ ಮೇಲೆ ಹೊತ್ತುಕೊಂಡೇ ಆತ ತಿರುಗಬೇಕಿತ್ತು. ಒಂದು ದಿನ ಡೆಪ್ಲಿಸ್ ಸಾರ್ವಜನಿಕ ಸ್ನಾನ ಘಟ್ಟಕ್ಕೆ ಹೋದಾಗ ಅಲ್ಲಿನ ಇಟಾಲಿಯನ್ ಪಾಲಕ ಅವನ ಬತ್ತಲೆ ಬೆನ್ನನ್ನು ನೋಡಿ ಆ್ಯಂಡ್ರಿಯಾಸ್ ಪಿಂಚಿನಿಯ ಕಲಾಕೃತಿ ಅಲ್ಲಿರುವುದನ್ನು ಗುರುತಿಸಿಬಿಟ್ಟ. ಕೂಡಲೆ ಡೆಪ್ಲಿಸ್ಸನ ಸುತ್ತ ಬಟ್ಟೆ ಸುತ್ತಿದ. ಯಾಕಂದರೆ ಬಗ್ನ್ಯಾರ್ವೋ ನಗರಸಭೆಗೆ ಸೇರಿದ ಈ ಕಲಾಕೃತಿಯನ್ನು ಸಾರ್ವಜನಿಕರಿಗೆ ಪ್ರದರ್ಶಿಸಬೇಕಾದರೆ ನಗರಸಭೆಯ ಅನುಮತಿ ಬೇಕೇ ಬೇಕು ಎಂದು ಅವನ ಅಭಿಪ್ರಾಯವಾಗಿತ್ತು. ಅಷ್ಟೇ ಹೇಳಿ ಅವನು ಸುಮ್ಮನೆ ಕೂತಿದ್ದರೆ ತೊಂದರೆ ಇರಲಿಲ್ಲ. ಆದರೆ ಆ ಇಟಾಲಿಯನ್ ಮನುಷ್ಯ ಅಷ್ಟಕ್ಕೆ ಬಿಡದೆ ಈ ವಿಷಯವನ್ನು ನಾಲ್ಕು ಜನರೆದುರು ಪ್ರಕಟಪಡಿಸಿಬಿಟ್ಟ. ಸುದ್ದಿ ಬಾಯಿಂದ ಬಾಯಿಗೆ ಹಬ್ಬಿತು. ಡೆಪ್ಲಿಸ್ಸನ ಬೆನ್ನ ಮೇಲಿನ ಚಿತ್ರ ಸಾರ್ವಜನಿಕರ ಚರ್ಚೆಯ ವಿಷಯವಾಯಿತು. ಗುಪ್ತಚಾರರೂ ಅವನ ಬೆನ್ನು ಹತ್ತಿದರು. ಹೆನ್ರಿ ಡೆಪ್ಲಿಸ್ಸನಿಗೆ ತುಂಬಾ ತೊಂದರೆಗಿಟ್ಟುಕೊಂಡಿತು. ಮಟ ಮಟ ಮಧ್ಯಾಹ್ನದಲ್ಲಿ ಸೆಕೆ ತಾಳಲಾರದೆ ನದಿಯಲ್ಲೊ ಸಮುದ್ರದಲ್ಲೊ ಒಮ್ಮೆ ಮುಳುಗುಹಾಕಬೇಕೆಂದರೆ ಕುತ್ತಿಗೆಯ ವರೆಗೆ ಬಟ್ಟೆಗಳನ್ನು ತೊಟ್ಟುಕೊಂಡೇ ನೀರಿಗಿಳಿಯಬೇಕಾಗುತ್ತಿತ್ತು. ಸಾಲದ್ದಕ್ಕೆ ಆತನಿಗೆ ಮತ್ತೊಂದು ದುರ್ದೈವ ಎದುರಾಯಿತು. ಸಮುದ್ರದ ಉಪ್ಪು ನೀರು ಪಿಂಚಿನಿಯ ಕಲಾಕೃತಿಗೆ ಧಕ್ಕೆಯುಂಟುಮಾಡಬಹುದೆಂಬ ವಿಚಾರ ಬಗ್ನ್ಯಾರ್ವೋ ನಗರ ಸಭೆಯ ಯಾವ ಪುಣ್ಯಾತ್ಮನ ತಲೆಯಲ್ಲಿ ಬಂತೋ, ಕೆಲ ದಿನಗಳಲ್ಲೇ ಆ ನಗರಸಭೆ ಕೋರ್ಟಿನಿಂದ ಶಾಶ್ವತ ತಡೆಯಾಜ್ಞೆಯನ್ನು ತಂದು ಹೆನ್ರಿ ಡೆಪ್ಲಿಸ್ಸನನ್ನು ಎಂದೆಂದಿಗೂ ಸಮುದ್ರದಲ್ಲಿ ಇಳಿಯದಂತೆ ಪ್ರತಿಬಂಧಿಸಿತು. ಕೆಲ ದಿನಗಳ ನಂತರ ಆತ ಕೆಲಸಮಾಡುತ್ತಿದ್ದ ಕಂಪನಿ ಡೆಪ್ಲಿಸ್ಸನನ್ನು ಫ್ರಾನ್ಸಿನಲ್ಲಿರುವ ಪೋರ್‌ಡೋಕ್ಕೆ ವರ್ಗ ಮಾಡಿದ್ದರಿಂದ ಆತ ಪಾರಾದೆ ಎಂದುಕೊಂಡ. ಆದರೆ ಈ ಸಮಾಧಾನ ಬಹಳ ಕಾಲ ಉಳಿಯಲಿಲ್ಲ. ಗಡಿ ಮುಟ್ಟಿದಾಗ ಅಲ್ಲಿ ಗಡಿಯಧಿಕಾರಿಗಳ ಒಂದು ಪಡೆಯೇ ಸಿದ್ಧವಾಗಿತ್ತು. ಡೆಪ್ಲಿಸ್ಸನನ್ನು ಅವರು ದೇಶದಿಂದ ಹೊರಗೆ ಹೋಗಲು ಬಿಡುವುದಿಲ್ಲ ಎಂದರು. ಏಕೆ, ಎಂದು ಕೇಳಿದರೆ ಇಟಲಿಯ ಕಲಾಕೃತಿಗಳನ್ನು ದೇಶದ ಹೊರಗೆ ಸಾಗಿಸುವುದು ಕಾನೂನಿಗೆ ಸಕತ್ ವಿರುದ್ಧವಾಗುತ್ತದೆ; ಆದ್ದರಿಂದ ಎಂತಹ ಪರಿಸ್ಥಿತಿಯಲ್ಲೂ ಆತ ದೇಶದಿಂದ ಹೊರಗೆ ಹೋಗಲಾರ ಎಂದು ಹೇಳಿಬಿಟ್ಟರು. ಈಗ ಡೆಪ್ಲಿಸ್ ತುಂಬಾ ಫಜೀತಿಗೆ ಸಿಕ್ಕಿಕೊಂಡ.

"ಹೆನ್ರಿ ಡೆಪ್ಲಿಸ್ಸನ ಬಗ್ಗೆ ಈ ವೇಳೆಗೆ ಎಲ್ಲರಲ್ಲೂ ಆಸಕ್ತಿ ಹುಟ್ಟಿತ್ತು. ಅವನು ಲಕ್ಸೆಂಬರ್ಗಿಗೆ ಸೇರಿದವನೋ ಅಥವಾ ಇಟಲಿಗೆ ಸೇರಿದವನೋ ಎಂಬ ಬಗ್ಗೆ ರಾಜತಾಂತ್ರಿಕ ಮಟ್ಟದಲ್ಲೀಗ ಚರ್ಚೆ ಆರಂಭವಾಯಿತು. ಮೊದಲಿಂದಲೂ ಇಟಾಲಿಯನ್ ಸರಕಾರ ಬಿಗುವಿನ ಧೋರಣೆ ತಳೆದಿತ್ತು. ಕೊನೆಗೆ ಅದು, ಹೆನ್ರಿ ಡೆಪ್ಲಿಸ್ ಇದ್ದರೂ ಸರಿ, ಸತ್ತರೂ ಸರಿ, ಆತನ ಬೆನ್ನ ಮೇಲಿನ ಕಲಾಕೃತಿ ಬಗ್ನ್ಯಾರ್ವೋ ನಗರ ಸಭೆಗೆ ಸೇರಿದ್ದರಿಂದ ತಾನು ಅವನನ್ನು ಬಿಟ್ಟು ಕೊಡುವುದು ಸಾಧ್ಯವೇ ಇಲ್ಲ ಎಂದು ಹೇಳಿ ಬಿಟ್ಟಿತು.

"ಕ್ರಮೇಣ ಈ ವಿಷಯದಲ್ಲಿ ಸಾರ್ವಜನಿಕರ ಆಸಕ್ತಿ ಕುಗ್ಗಿತು: ಡೆಪ್ಲಿಸ್ ತನ್ನ ಪಾಡಿಗೆ ತಾನು ಇಟಲಿಯಲ್ಲಿ ಜೀವಿಸುತ್ತಿದ್ದ. ಅಂಥಾದ್ದರಲ್ಲಿ, ಅವನ ಸುದೈವವೋ ದುರ್ದೈವವೋ, ಒಂದು ದಿನ ಜರ್ಮನ್ ಕಲಾತಜ್ಞನೊಬ್ಬ ಬಗ್ನ್ಯಾರ್ವೋ ನಗರ ಸಭೆಗೆ ಬಂದು ಡೆಪ್ಲಿಸ್ಸನ ಬೆನ್ನ ಮೇಲೆ ಇರುವ

ಚಿತ್ರವನ್ನು ಪರೀಕ್ಷಿಸಲು ಅನುಮತಿ ಬೇಡಿದ. ಅನುಮತಿ ಸಿಕ್ಕ ಕೂಡಲೆ ಆತ ಡೆಪ್ಲಿಸ್ಸನ ಬಳಿಗೆ ಬಂದು, ಚಿತ್ರವನ್ನು ಪರೀಕ್ಷಿಸಿ, ಆ ಚಿತ್ರ ಆ್ಯಂಡ್ರಿಯಾಸ್ ಪಿಂಚಿನಿ ತೆಗೆದದ್ದೇ ಅಲ್ಲ, ಅದನ್ನು ಅವನ ಶಿಷ್ಯರಾರೋ ತೆಗೆದಿರಬೇಕು ಎಂದು ಪ್ರಕಟಣೆ ಹೊರಡಿಸಿದ. ಮತ್ತೆ ಗೊಂದಲ ಪ್ರಾರಂಭವಾಯಿತು. ಹಚ್ಚೆ ಚುಚ್ಚುವಾಗ ನೋವು ತಿಳಿಯಬಾರದೆಂದು ಡೆಪ್ಲಿಸ್ಸನಿಗೆ ಪ್ರಜ್ಞೆ ತಪ್ಪಿಸಿದ ನಂತರವೇ ಪಿಂಚಿನಿ ಕೆಲಸ ಪ್ರಾರಂಭಿಸುತ್ತಿದ್ದುದರಿಂದ ಈ ಮಾತಿನ ಸತ್ಯ ನಿರ್ಣಯಕ್ಕೆ ಡೆಪ್ಲಿಸ್ಸನ ಸಾಕ್ಷ್ಯಕ್ಕೆ ಬೆಲೆಯೇ ಇರಲಿಲ್ಲವೆಂದು ಆತನ ವಾದವಾಗಿತ್ತು. ಇಟಲಿಯ ಕಲಾ ಪತ್ರಿಕೆಯ ಸಂಪಾದಕನೊಬ್ಬ ಜರ್ಮನ್ ತಜ್ಞನ ಅಭಿಪ್ರಾಯವನ್ನು ಖಂಡಿಸಿ ಒಂದು ಲೇಖ ಬರೆದು ತನ್ನ ಪತ್ರಿಕೆಯಲ್ಲಿ ಪ್ರಕಟಿಸಿದ. ಕೂಡಲೆ ಇಟಲಿ–ಜರ್ಮನಿಗಳಲ್ಲಿ ಈ ಬಗ್ಗೆ ಭಾರಿ ವಿವಾದವೊಂದು ಪ್ರಾರಂಭವಾಗಿ ಸಮಸ್ತ ಯುರೋಪಿನಲ್ಲೆಲ್ಲಾ ಪಸರಿಸಿತು. ಡೆಪ್ಲಿಸ್ಸನ ಬೆನ್ನ ಮೇಲಿನ ಚಿತ್ರ ಒಮ್ಮೆಯಂತೂ ಇಟಾಲಿಯನ್ ಪಾರ್ಲಿ-ಮೆಂಟಿನಲ್ಲಿ ಕೋಲಾಹಲವೇಳುವುದಕ್ಕೂ ಕಾರಣವಾಯಿತು. ಕೋಪನ್‌ಹೇಗನ್ ವಿಶ್ವವಿದ್ಯಾಲಯ ಒಂದು ಸುವರ್ಣ ಪದಕವನ್ನು ಕೊಟ್ಟು ಆ ಜರ್ಮನ್ ಕಲಾ ತಜ್ಞನನ್ನು ಗೌರವಿಸಿತು. (ಅನಂತರ ಅವನ ಅಭಿಪ್ರಾಯ ಸರಿಯೊ ತಪ್ಪೋ ಎಂಬುದನ್ನು ನಿಷ್ಕರ್ಷಿಸಲು ತಜ್ಞರ ತಂಡವೊಂದನ್ನು ಪನ್ರಿ ಡೆಪ್ಲಿಸ್ಸನ ಬಳಿ ಕಳಿಸಿತು.)

"ಇತ್ತ ಡೆಪ್ಲಿಸ್ಸನ ಸ್ಥಿತಿಗತಿಯೂ ಅಷ್ಟು ನೆಟ್ಟಗಿರಲಿಲ್ಲ. ಹೀಗಾಗಿ ತೀರಾ ಸಂಭಾವಿತ ಪ್ರಾಣಿಯೆಂದು ಹೆಸರಾಗಿದ್ದ ಆತ, ಕೊನೆಗೆ ರೋಸಿ ಹೋಗಿ ಅರಾಜಕತಾವಾದಿಗಳ ತಂಡವನ್ನು ಸೇರಿಕೊಂಡ. ಇದು ತಿಳಿದು ದೇಶದ ಹಿತಾಸಕ್ತಿಗಳಿಗೆ ಅಪಾಯಕರ ವ್ಯಕ್ತಿಯೆಂದು ನಾಲ್ಕು ಸಲ ಅವನ ಮೇಲೆ ಗಡಿಪಾರಾಜ್ಞೆ ಹೊರಟಿತು. ಆದರೆ ಅವನು ಪ್ರತಿ ಸಲ ಗಡಿ ತಲುಪುತ್ತಲೇ ಆ್ಯಂಡ್ರಿಯಾಸ್ ಪಿಂಚಿನಿಯ ಕಲಾಕೃತಿ ಅವನ ಬೆನ್ನ ಮೇಲಿದ್ದುದನ್ನು ಬಲ್ಲ ಗಡಿಯಧಿಕಾರಿಗಳು ಡೆಪ್ಲಿಸ್ಸನನ್ನು ತಿರುಗಿ ಕಳಿಸಿದರು. ಒಮ್ಮೆ ಜಿನೋವಾದಲ್ಲಿ ಅರಾಜಕತಾವಾದಿಗಳ ಸಭೆ ಭರ್ಜರಿಯಾಗಿ ನಡೆದಿತ್ತು. ಯಾವುದೋ ವಿಷಯದ ಮೇಲೆ ಚರ್ಚೆ ಬಿರುಸಾಗಿ ಸಾಗಿತ್ತು. ಒಬ್ಬಾತ ಅದಾವ ಕಾರಣದಿಂದಲೋ ಭಾವಾವೇಶದಲ್ಲಿ ದ್ರಾವಕದ ಬಾಟಲಿಯನ್ನು ಡೆಪ್ಲಿಸ್ಸನ ಬೆನ್ನಿಗೆ ಒಗೆದ. ಗಟ್ಟಿಯಾದ ಅಂಗಿಯನ್ನು ತೊಟ್ಟುಕೊಂಡಿದ್ದುದರಿಂದ ಡೆಪ್ಲಿಸ್ ಜೀವದಿಂದ ಪಾರಾದ. ಆದರೆ ದ್ರಾವಕ ಅವನ ಬೆನ್ನಿನ ಮೇಲಿನ ಚಿತ್ರವನ್ನು ಗುರುತು ಸಹ ಸಿಗದಷ್ಟು ವಿದ್ರೂಪಗೊಳಿಸಿಬಿಟ್ಟಿತ್ತು. ಸಹ ಕಾರ್ಯಕರ್ತನ ಮೇಲೆ ಹೀಗೆ ಹಲ್ಲೆ ಮಾಡಿದ್ದಕ್ಕಾಗಿ ದ್ರಾವಕ ಬಾಟಲಿಯನ್ನು ಒಗೆದಾತನನ್ನು ಸಭೆ ಒಮ್ಮತದಿಂದ ಖಂಡಿಸಿತು. ದೇಶದ ಅಮೋಘವಾದ ಕಲಾಕೃತಿಯೊಂದನ್ನು ಹಾಳು ಮಾಡಿದ್ದಕ್ಕಾಗಿ ಸರಕಾರ ಅವನಿಗೆ ಏಳು ವರ್ಷಗಳ ಶಿಕ್ಷೆ ವಿಧಿಸಿತು. ಆಸ್ಪತ್ರೆಯಿಂದ ಹೊರಬಿದ್ದ ಕೂಡಲೆ ಸರಕಾರ ಡೆಪ್ಲಿಸ್ಸನನ್ನು ಗಡೀಪಾರು ಮಾಡಿಬಿಟ್ಟಿತು.

"ನೀನು ಪ್ಯಾರೀಸಿಗೆ ಹೋದರೆ ಗದ್ದಲವಿಲ್ಲದ ಬೀದಿಗಳಲ್ಲಾಗಲಿ ಮಿನಿಸ್ಟ್ರಿ ಆಫ್ ಫೈನ್ ಆರ್ಟ್ಸ್ನ ಕಚೇರಿಗಳ ಮುಂದಾಗಲಿ ಒಬ್ಬ ನಿರ್ವಿಣ್ಣನಾದ ಮನುಷ್ಯ ತಿರುಗುತ್ತಿರುವುದನ್ನು ಕಾಣಬಹುದು. ಅವನು ಲಕ್ಸೆಂಬರ್ಗಿನ ಜನರ ಧಾಟಿಯಲ್ಲಿ ಮಾತಾಡುತ್ತಾನೆ. ತಾನೊಂದು ಅಮೂಲ್ಯವಾದ ಕಲಾಕೃತಿಯ ಅವಶೇಷ; ಒಂದಿಲ್ಲೊಂದು ದಿನ ತನ್ನನ್ನು ಕೊಂಡುಕೊಳ್ಳುವಂತೆ ಫ್ರೆಂಚ್ ಸರಕಾರದ ಮನವೊಲಿಸಬಹುದು ಎಂಬ ಭ್ರಮೆಯಲ್ಲಿ ಅವನಿರುವುದನ್ನು ನೀನು ಒಂದೆರಡು ನಿಮಿಷಗಳಲ್ಲೆ ಕಂಡುಕೊಳ್ಳಬಹುದು. ಇವನ್ನೊಂದು ಹೊರತುಪಡಿಸಿದರೆ ಉಳಿದೆಲ್ಲ ವಿಷಯಗಳಲ್ಲಿ ಅವನು ಸಾಮಾನ್ಯ ಜನರಂತೆಯೆ ವರ್ತಿಸುತ್ತಾನೆ."

# ಕಪ್ಪು ಪರ್ವತದ ಮೇಲೆ ಭಗೀರಥ ಪ್ರಯತ್ನ

ಮೂಲ: ಅಬ್ದುಲ್ ವಹಾಬ ಚಾಂದಾ ಆಳಂದಕರ
ಅನುವಾದ: ಲೀಲಾಧರ

ಅಮೇರಿಕದ ಡಕೋಟಾ ರಾಜ್ಯದ ದಕ್ಷಿಣ ಭಾಗದಲ್ಲಿ ಥಂಡರ್‌ಹೆಡ್ ಪರ್ವತದ ಮೇಲೆ ಪ್ರಪಂಚದ ಎಂಟನೆ ಆಶ್ಚರ್ಯ ಉದಿಸುತ್ತಿದೆ. ಅಶ್ವಾರೋಹಿಯಾದ ರೆಡ್ ಇಂಡಿಯನ್ನನೊಬ್ಬನ ಶಿಲಾಮೂರ್ತಿಯೇ ಅದು. ಇದರ ಎತ್ತರ ೫೬೩ ಅಡಿಗಳಷ್ಟು. ಅಂದರೆ ಇದು ಪ್ಯಾರಿಸ್ಸಿನ ಎಫೆಲ್ ಗೋಪುರಕ್ಕಿಂತಲೂ ಎತ್ತರವಾಗಿದೆ. ಸಮಗ್ರ ಶಿಲ್ಪದ ಉದ್ದಳತೆ ೬೪೧ ಅಡಿಗಳಷ್ಟು. ಅರ್ಥಾತ್ ಎರಡು ಫುಟ್‌ಬಾಲ್ ಗ್ರೌಂಡುಗಳಿಗಿಂತಲೂ ಅದರ ಉದ್ದಳತೆ ಹೆಚ್ಚಾಗಿದೆ. ಕುದುರೆಯ ಮುಖದ ಉದ್ದಳತೆ ಸುಮಾರು ೮೭ ಅಡಿಗಳಷ್ಟು. ಅದರ ಪ್ರತಿಯೊಂದು ಮೂಗಿನ ಹೊರಳೆಯಲ್ಲಿ ಹನ್ನೆರಡು ವಿಶಾಲವಾದ, ಸುಸಜ್ಜಿತವಾದ ಕೋಣೆಗಳನ್ನು ಕಟ್ಟಿಸುವ ಯೋಜನೆಯುಂಟೆಂದಮೇಲೆ ಶಿಲ್ಪದ ಗಾತ್ರ ಎಷ್ಟು ಅದ್ಭುತವಾಗಿದೆ ಎಂಬುದನ್ನು ಊಹಿಸಬಹುದು.

ಈ ಮಹಾನ್ ಕಲಾಕೃತಿಯ ಶಿಲ್ಪಿ ಇದಕ್ಕಿಂತ ಅದ್ಭುತವಾಗಿದ್ದಾನೆನ್ನುವುದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಕಳೆದ ಇಪ್ಪತ್ತು ಮೂರು ವರ್ಷಗಳಿಂದ ಆತ ಬೆಳಗಿನ ನಾಲ್ಕರಿಂದ ಹೊತ್ತು ಮುಳುಗುವವರೆಗೆ ದುಡಿಯುತ್ತಿದ್ದಾನೆ. ಪೂರ್ವ ಯೋಜನೆಯ ಪ್ರಕಾರ ಇನ್ನು ಆರು ವರ್ಷಗಳಲ್ಲಿ

ರೆಡ್ ಇಂಡಿಯನ್ ಯೋಧ



ಮರಾಠಿ “ವಿಚಿತ್ರ ವಿಶ್ವ”ದಿಂದ

ತನ್ನ ಕಲಾಕೃತಿಯನ್ನು ಪೂರ್ಣಗೊಳಿಸುವ ಭರ ವಸೆ ಅವನಿಗಿದೆ.

ಯಾರೀತ? ಅವನೇ ೬೩ ವರ್ಷದ ಕೊರ-ಚಾಕ್ ಜ್ಯೂವೆಲ್ ಕಫಸ್ಕಾಯ್. ಪೋಲಿಶ್ ಮೂಲದವನಾದ ಕಫಸ್ಕಾಯ್ ಈ ಮೊದಲು ಅನೇಕ ಶಿಲ್ಪ ಕಲಾಕೃತಿಗಳನ್ನು ನಿರ್ಮಿಸಿದ್ದು, ಅವುಗಳಲ್ಲಿ ಪ್ರಸಿದ್ಧ ಅಭಿನೇತ್ರಿ ಕ್ಯಾಥರೀನ್ ಕಾರ್ನೆಲ್, ಕನೆಕ್ಟಿಕಟ್ ಪ್ರಾಂತದ ಮಾಜಿ ಗವರ್ನರ್ ವಲ್ಬರ್ ಕ್ರಾಸ್ ಹಾಗೂ ಸುಪ್ರಸಿದ್ಧ ಹಸ್ತರೇಖಾ ತಜ್ಞ ಪೆಡ್ರೆಯುಸ್ಕಿಯವರ ಮೂರ್ತಿಗಳಿಗೆ ಅಮೇರಿಕದಲ್ಲಿ ತುಂಬಾ ಪ್ರಶಂಸೆ ದೊರೆತಿದೆ. ೧೯೩೯ರಲ್ಲಿ ನ್ಯೂಯಾರ್ಕಿನಲ್ಲಿ ನಡೆದ ವಿಶ್ವ ಮೂರ್ತಿಶಿಲ್ಪ ಸ್ಪರ್ಧೆಯಲ್ಲಿ ಕಫಸ್ಕಾಯ್ ಪ್ರಥಮ ಸ್ಥಾನವನ್ನು ಗಿಟ್ಟಿಸಿದ. ಅದೇ ವರ್ಷ ಡಕೋಟಾದ ರೆಡ್ ಇಂಡಿಯನ್ ಮುಖ್ಯಸ್ಥ ಸ್ಟ್ಯಾಂಡಿಂಗ್ ಬೇರ್ ಅವನಿಗೊಂದು ಪತ್ರ ಬರೆದು, ೧೮೭೭ರಲ್ಲಿ ಬಿಗ್‌ಹಾರ್ನ್ ಸಮರದಲ್ಲಿ ಜನರಲ್ ಕಸ್ಟರ್ ಎಂಬಾತನನ್ನು ಸೋಲಿಸಿದ್ದರ ಕುರುಹಾಗಿ ಕ್ರೇಜಿ ಹಾರ್ಸ್‌ನೆಂಬ ರೆಡ್ ಇಂಡಿಯನ್ ಯೋಧನ ಮೂರ್ತಿಯನ್ನು ನಿರ್ಮಿಸುವಂತೆ ಕಫಸ್ಕಾಯನನ್ನು ಕೇಳಿಕೊಂಡ. ಅಮೇರಿಕದ ಮೂಲ ನಿವಾಸಿಗಳಲ್ಲಿ ನಾಗರಿಕ ಬಿಳಿಯ ಸಮಾಜದ ಸೇನಾಪತಿಯೊಬ್ಬನನ್ನು ಸೋಲಿಸುವಷ್ಟು ಯೋಗ್ಯತಾಸಂಪನ್ನರೂ ಇದ್ದರೆಂಬುದನ್ನು ಇಂದಿನ ಅಮೇರಿಕದ ಬಿಳಿಯರಿಗೆ ನೆನಪು ಮಾಡಿಕೊಡಲು ಆತ ಉದ್ದೇಶಿಸಿದ್ದ. ಈ ನಾಯಕನ ಅಶ್ವಾರೂಢ ರೂಪ ಅವನ ಕಾಲದ ಬಿಳಿಯರ ಚಿತ್ತದಲ್ಲಿ ನಟ್ಟುಬಿಟ್ಟಿತ್ತು.

ಕಫಸ್ಕಾಯ್



ಈ ಪ್ರಚಂಡ ಕೆಲಸದಲ್ಲಿ ತನಗೆ ಯಾರೂ ನೆರವಾಗಬಾರದು ಎಂಬ ವಿಚಿತ್ರ ಕರಾರಿನೊಂದಿಗೆ ಕಫಸ್ಕಾಯ್ ಕೆಲಸಕ್ಕೆ ಒಪ್ಪಿಕೊಂಡ. ಅನಂತರ ಕನೆಕ್ಟಿಕಟ್ಟಿನಲ್ಲಿನ ತನ್ನ ಆಸ್ತಿಯೆಲ್ಲವನ್ನೂ ಮಾರಿ ಬ್ಲ್ಯಾಕ್‌ಹಿಲ್ಸ್‌ನ ಮೇಲೆ ನೆಲೆಯೂರಿದ. ರೆಡ್ ಇಂಡಿಯನ್ನರಿಗೆ ಕಪ್ಪುಪರ್ವತ ಪವಿತ್ರವಾಗಿರುವುದರಿಂದ ಅಲ್ಲಿನ ಪರ್ವತ ಪ್ರದೇಶದಲ್ಲಿ ಅವನು ಮೂರ್ತಿಯನ್ನು ನಿರ್ಮಿಸಲು ನಿಶ್ಚಯಿಸಿದನು. ಕಫಸ್ಕಾಯ್ ತನ್ನ ಸಂಗಡ ಒಯ್ದುದ್ದು ಒಂದು ಆಕಳು ಮತ್ತು ಒಂದು ಆಡು ಮಾತ್ರ. ಆತ ಬ್ಲ್ಯಾಕ್ ಹಿಲ್ಸ್ ಮೇಲೆ ಥಂಡರ್‌ಹೆಡ್ ಶಿಖರದಲ್ಲಿ ಮೂರ್ತಿ ನಿಲ್ಲಿಸುವ ಏಕಾಧಿಪತ್ಯವನ್ನು ಮೊದಲು ಬರೆಸಿಕೊಂಡನು. ಆ ಮೇಲೆ ಅಲ್ಲಿ ೭೦ ಅಡಿಗಳಷ್ಟು ಎತ್ತರವಾಗಿ ಬೆಳೆದಿದ್ದ ಮರಗಳನ್ನು ಏಕಾಕಿಯಾಗಿ ಕಡಿದು, ನೆಲವನ್ನು ಸ್ವಚ್ಛಗೊಳಿಸಿ ತನ್ನ ವಾಸಕ್ಕಾಗಿ ಮನೆ ಕಟ್ಟಿಕೊಂಡ. ೧೯೪೮-೪೯ರಲ್ಲಿ ಅವನ ಸಾಹಸ ಪ್ರಾರಂಭವಾಯಿತು. ಮೊದಲು ಪರ್ವತಶಿಖರವನ್ನೇರಲು ೭೦೦ ಅಡಿ ಎತ್ತರದ ಒಂದು ಏಣಿಯನ್ನು ಕಟ್ಟಿಗೆಯಿಂದ ಸಿದ್ಧಪಡಿಸಿದನು. ಬಳಿಕ ಡೈನಮೈಟಿನಿಂದ ಯೋಜನಾಬದ್ಧವಾಗಿ ಕೆಲ ಶಿಲಾಭಾಗಗಳನ್ನು ಹಾರಿಸಿದ್ದಾಯಿತು. ಅನಂತರ ಪರ್ವತದಡಿಯಲ್ಲಿ ಒಂದು ಕಾರ್ಯಾಗಾರವನ್ನು ಕಟ್ಟಿದ್ದಲ್ಲದೆ ಎಂಟು ಟನ್ ಭಾರದ ಏರ್ ಕಂಪ್ರೆಸರನ್ನು ಕೂಡಿಸಿದ. ಅಷ್ಟೇ ಅಲ್ಲ, ಎರಡು ಮೈಲುಗಳವರೆಗೆ ಅಲ್ಲಲ್ಲಿ ಕಟ್ಟಿಗೆ ಕಂಬಗಳನ್ನು ನಿಲ್ಲಿಸಿ ಮೇಲೆ ವಿದ್ಯುತ್ ತಂತಿಗಳನ್ನೆಳೆದು

ವಿದ್ಯುತ್ಪೂರೈಕೆಯ ವ್ಯವಸ್ಥೆಯನ್ನು ತಾನೆ ಮಾಡಿಕೊಂಡನು. ಈ ಕೆಲಸಕ್ಕಾಗಿ ಕಥಸ್ಕಾಯ್ ಒಂದು ಹಳೆಯ ಟ್ರಕ್ಕನ್ನು ಉಪಯೋಗಿಸಿದ-ನಾದರೂ ಒಂಟಿಯಾಗಿ ಎಲ್ಲವನ್ನೂ ನಿರ್ವಹಿ-ಸಿದನು.

ಕೆಲಸವನ್ನು ಪ್ರಾರಂಭಿಸುವುದಕ್ಕಿಂತ ಮೊದಲು ಪರ್ವತಾಗ್ರದ ಮಹಾ ಬಂಡೆಯ ಮೇಲೆ ಅಶ್ವಾರೋಹಿ ರೆಡ್ ಇಂಡಿಯನ್ ಮೂರ್ತಿಯ ಹೊಳವನ್ನು ಹಾಕಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಅತ ದಟ್ಟವಾದ ಸುಣ್ಣದ ದ್ರವವನ್ನು ಉಪಯೋಗಿಸಿದನು. ಪರ್ವತದ ಮೇಲೆ ಕ್ರೇಜಿಹಾರ್ಸನ ರೂಪದ ರೇಖೆಯನ್ನು ಎಳೆಯುವುದಕ್ಕೆ ೧೪೦ ಗ್ಯಾಲನ್ನುಗಳಷ್ಟು ಸುಣ್ಣದ ದ್ರವ ಬೇಕಾಯಿತು ಎಂದು ಹೇಳಿದರೆ ನಿಮಗೆ ಆಶ್ಚರ್ಯವಾದೀತು. ಅಂದಿನಿಂದಲೂ, ಎಂದರೆ, ಕಳೆದ ಇಪ್ಪತ್ತುಮೂರು ವರ್ಷಗಳಿಂ-ದಲೂ ಕೊರಚಾಕ್ ಕಥಸ್ಕಾಯ್ ಮೂರ್ತಿ ನಿರ್ಮಾಣಕ್ಕಾಗಿ ಬೆಳಗಿನಿಂದ ಬೈಗಿನವರೆಗೆ ದುಡಿಯುತ್ತಿದ್ದಾನೆ.

೧೯೪೭ರಿಂದಲೇ ಅವನ ಮಹಾನ್ ಕಾರ್ಯವನ್ನು ವೀಕ್ಷಿಸಲು ಪ್ರಪಂಚದ ಮೂಲೆ ಮೂಲೆಗಳಿಂದ ಜನ ಬರುತ್ತಿದ್ದಾರೆ. ಅವರು ಪ್ರೋತ್ಸಾಹಕ್ಕೆಂದು ಕೊಟ್ಟ ೭೦ ಲಕ್ಷ ರೂಪಾಯಿಗಳನ್ನು ಕಥಸ್ಕಾಯ್ ಸ್ವಂತಕ್ಕಾಗಿ ಉಪಯೋಗಿಸದೆ ಮೂರ್ತಿನಿರ್ಮಾಣಕ್ಕಾಗಿ ಉಪಯೋಗಿಸಿದ್ದಾನೆ.

ಈ ಅಗಾಧ ಗಾತ್ರದ ಮೂರ್ತಿಯನ್ನು ಕೊರೆಯುವುದಕ್ಕೆ ಹಳೆಗಾಲದ ಕೈಚಾಣ ಏಕೆ ಬಂದೀತು? ಶಿಲ್ಪಿ ವಿದ್ಯುತ್ತಿನ ಛೈರಿಗೆ ಮೂಲಕ ಸುಣ್ಣದ ಗೆರೆಗಳನ್ನನುಸರಿಸಿ ಕೊರೆಯುವುದಕ್ಕೆ ಪ್ರಾರಂಭಿಸಿದ. ಎರಡೂವರೆ ದಶಕಗಳ ಕಾಲದ ಶ್ರಮದ ನಂತರ ಕುದುರೆ ಸವಾರನ ಆಕೃತಿ ಈಗ ಸ್ಪಷ್ಟವಾಗಿ ಕಾಣಿಸುತ್ತಿದೆ. ಬುಲ್‌ಡೋಜರ್, ಡ್ರಿಲ್ಲಿಂಗ್ ಮಶೀನ್, ಏರ್ ಕಾಂಪ್ರೆಸರ್ ಮುಂತಾದವುಗಳನ್ನೀಗ ಬೆಟ್ಟದ ಮೇಲೆಯೆ ಸಾಗಿಸಲಾಗಿದ್ದು ಅವನು ದಿನವೂ ಫರ್ಲಾಂಗ್ ಎತ್ತರದ ಏಣಿ ಹತ್ತಬೇಕಾಗಿಲ್ಲ. ಕಾರ್ಯ ಭರದಿಂದ ಸಾಗುತ್ತಿದೆ. ಕಳೆದ ಇಪ್ಪತ್ತನಾಲ್ಕು ವರ್ಷಗಳಲ್ಲಿ ಕಥಸ್ಕಾಯ್ ೩೦ ಲಕ್ಷ ಟನ್ನುಗಳಿಗಿಂತಲೂ ಹೆಚ್ಚು ಅನವಶ್ಯಕ ಶಿಲಾಖಂಡಗಳನ್ನು ಡೈನಮೈಟಿನಿಂದ ಹಾರಿಸಿ ದೂರ ಸ್ಥಳಕ್ಕೆ ಸಾಗಿಸಿದ್ದಾನೆ. ಮೂರ್ತಿನಿರ್ಮಾಣಕ್ಕೆ ಅವಶ್ಯವಾದ ಸಾಮಗ್ರಿಯನ್ನು ತರಲು ಹಾಗೂ ನಿರುಪಯುಕ್ತ ವಸ್ತುಗಳನ್ನು ದೂರ ಸಾಗಿಸಲು ಅನುವಾಗಲೆಂದು ಅವನು ಬೆಟ್ಟದಲ್ಲಿ ೧೫೦ ಅಡಿ ಉದ್ದವಾದ ರೇಲ್ವೆ ಲೈನನ್ನು ನಿರ್ಮಿಸಿಕೊಂಡು ಬಳಸುತ್ತಿದ್ದಾನೆ.

ಈ ಮೂರ್ತಿಯ ಪಾರ್ಶ್ವದಲ್ಲಿ ಅಮೇರಿಕದ ಅಧ್ಯಕ್ಷಪದವನ್ನು ಹೊಂದಿದ ನಾಲ್ವರು ಮಹಾ ವ್ಯಕ್ತಿಗಳ ಮೂರ್ತಿಗಳನ್ನು ನಿಲ್ಲಿಸಲಾಗಿದೆ. ಈ ಕಾರ್ಯ ಪ್ರಾರಂಭಿಸಿ ಮೂವತ್ತೊಂದು ವರ್ಷಗಳ ನಂತರ, ಅಂದರೆ, ೧೯೭೯ ರಲ್ಲಿ ಆ ಅಶ್ವಾರೋಹಿಯ ಮೂರ್ತಿ ಸಿದ್ಧವಾಗುವ ನಿರೀಕ್ಷೆಯಿದೆ. ಆಗ ಅದು ಒಂದು ಮಹತ್ವಾದ, ಉತ್ಕೃಷ್ಟವಾದ ಕಲಾಕೃತಿಯಾಗುವುದಲ್ಲದೆ ಮಾನವ ಸಾಮರ್ಥ್ಯದ ಕುರುಹೂ ಆಗುವುದು. ✡



ಸ್ವದೇಶಾಭಿಮಾನ ಘಟಿಂಗನ ಕೊನೆಯ ಅಸ್ತ್ರ.

—ಸ್ಯಾಮ್ಯುವೆಲ್ ಜಾನ್ಸನ್

# ಹೊಳಪಾದ ಪ್ರಕಾಶಯುಕ್ತವಾದ ಹಾಗೂ ಶುಭ್ರವಾದ ಬಟ್ಟೆಗಳಿಗೆ

## ಬೂನ್ ನಿಂದ ಒಗೆಯಿರಿ.

— ಇದೊಂದು ವಿಜ್ಞಾನದ ಕೊಡುಗೆ



ಬೂನ್ ಬಿಳಿ ಪಂಚೆಗಳನ್ನು, ಸೀರೆಗಳೆನ್ನು, ಷರ್ಟುಗಳು ಹಾಗೂ ಒಳ ಅಂಗಿಗಳನ್ನು ಹೊಳಪಾಗಿ ಪ್ರಕಾಶಯುಕ್ತವಾಗಿ, ಶುಭ್ರವಾಗಿ ಒಗೆಯುತ್ತದೆ. ನಿಮ್ಮ ಪ್ರಿಂಟೆಡ್ ಕಾಟನ್ ಸೀರೆಗಳನ್ನು, ಟೆರೀನ್, ಟೆರಿಕಾಟ್, ರಾಯನ್, ಜಾರ್ಜೆಟ್, ಶಿಫಾನ್, ಬಟ್ಟೆಗಳನ್ನು ಹೊಚ್ಚ ಹೊಸ ಬಟ್ಟೆಗಳಂತೆಯೇ ಇಟ್ಟಿರುತ್ತದೆ.

ಬೂನ್ ಬಟ್ಟೆಗಳ ಕರುಣಾಳು, ಉಪಯೋಗಿಸಿದಂತೆಲ್ಲ ಬಟ್ಟೆಗಳು ಹೆಚ್ಚು ಹೆಚ್ಚು ಪ್ರಕಾಶಯುಕ್ತವಾಗಿಯೇ ಇರುತ್ತವೆ.

ಬಾವಿ ನೀರು, ನದಿ ನೀರು ಇತ್ಯಾದಿ ಯಾವ ನೀರಾದರೂ ಸರಿ, ತಕ್ಷಣವೇ ಯಥೇಚ್ಛವಾದ ನೊರೆ.



ಬಹಳಷ್ಟು ಮಿತವ್ಯಯ, ಮಾರುಕಟ್ಟೆಯಲ್ಲಿ ದೊರೆಯುವ ಯಾವುದೇ ಉನ್ನತದರ್ಜೆಯ ಒಗೆಯುವ ಸಾಬೂನಿಗಿಂತಲೂ ಬೂನ್ ನಿಂದ ಶೇಕಡಾ 50 ರಷ್ಟು ಹೆಚ್ಚು ಬಟ್ಟೆಗಳನ್ನು ನೀವು ಒಗೆಯಬಹುದು.

ಬೂನ್ ಸಾಬೂನನ್ನು ಒಣ ಹವೆಯ ಸ್ಥಳದಲ್ಲಿಡಿ. ಇವನ್ನು ಸಿಲ್ಕ್ ಬಟ್ಟೆಗಳಿಗೆ ಉಪಯೋಗಿಸಬೇಡಿ.








UHP

ಹೋಮ್ ಪ್ರಾಡಕ
ಮಂಗಳೂ



# 'ಲೈಫ್' ಕಣ್ಣು ಮುಚ್ಚಿತು

ಹೆನ್ರಿ ಲೂಸ್

ಅದು ೧೮೮೯ರಲ್ಲಿ. ಇಂಗ್ಲಂಡಿನಲ್ಲಿ ಆಗಲೆ ಅರ್ಧ ಶತಮಾನದಷ್ಟು ಹಿರಿದಾಗಿದ್ದ ಶ್ರೇಷ್ಠ ದರ್ಜೆಯ ದೈನಿಕ 'ಮ್ಯಾಂಚೆಸ್ಟರ್ ಗಾರ್ಡಿಯನ್' ಕೈಸಾಗದೆ ಮುಚ್ಚಿಬಿಡುವಂಥ ಕಠಿಣ ಪರಿಸ್ಥಿತಿಯನ್ನು ಎದುರಿಸುತ್ತಿತ್ತು. ಕಾರಣ ಜಾಹಿರಾತುದಾರರ ದೃಷ್ಟಿಕೋಣದಲ್ಲಾದ ಬದಲಾವಣೆ. ಅದುವರೆಗೆ 'ಗಾರ್ಡಿಯನ್'ಗೆ ಬರುತ್ತಿದ್ದ ಆದಾಯದ ಬಹು ಭಾಗ "ಕ್ಲಾಸಿಫೈಡ್" ಜಾಹಿರಾತುಗಳಿಂದ. ಈಗ ಜಾಹಿರಾತುದಾರರು ಹೊಸ ಬಗೆಯ ವ್ಯಾಪಾರಿ "ಡಿಸ್ಪ್ಲೆ" ಜಾಹಿರಾತುಗಳನ್ನು ಬಳಕೆಗೆ ತರತೊಡಗಿದರು. ಅದಕ್ಕಾಗಿ ಅವರು ಆಯ್ದುಕೊಳ್ಳತೊಡಗಿದ್ದು ಕಡಿಮೆ ಬೆಲೆಯ, ಹೆಚ್ಚು ಪ್ರಸಾರವುಳ್ಳ 'ಜನತಾ' ಪತ್ರಿಕೆಗಳನ್ನು. ಆದರೂ 'ಗಾರ್ಡಿಯನ್' ಹೇಗೋ ಬದುಕಿಕೊಂಡಿತು.

ಜಾಹಿರಾತುದಾರರಿಗೆ ಪತ್ರಿಕೆಗಳು ಮಾತ್ರ ಪ್ರಚಾರ ಮಾಧ್ಯಮವಾಗಿದ್ದ ಕಾಲದಲ್ಲೇ ಪತ್ರಿಕೆಗಳ ಮೇಲೆ ಅವರ ನಿಯಂತ್ರಣ ಇಷ್ಟೊಂದು ಪ್ರಬಲವಾಗಿತ್ತು. ೨೦ನೆಯ ಶತಮಾನದ ದ್ವಿತೀಯ ಭಾಗದಲ್ಲಂತೂ ಈ ನಿಯಂತ್ರಣ ಇನ್ನೂ ಬಲವಾಗಿದೆ. ಅದರಲ್ಲೂ ಟೆಲಿವಿಜನ್ನಿನಂಥ ಇನ್ನೊಂದು ಪರಿಣಾಮಕಾರಿ ಮಾಧ್ಯಮ ಪತ್ರಿಕೆಗಳಿಗೆ ಭಾರಿ ಸ್ಪರ್ಧೆಯನ್ನೊಡ್ಡಿರುವಾಗ ಪತ್ರಿಕೆಗಳು ಇನ್ನೂ ಕಠಿಣ ಕಾಲವನ್ನೆದುರಿಸಬೇಕಾಗಿ ಬಂದಿದೆ. ಪಶ್ಚಿಮದ ದೇಶಗಳಲ್ಲಿ, ವಿಶೇಷತಃ ಅಮೇರಿಕದಲ್ಲಿ, ೫೦ ಲಕ್ಷಕ್ಕೂ ಮಿಕ್ಕಿದ ಪ್ರಸಾರವುಳ್ಳ ದೊಡ್ಡ ದೊಡ್ಡ ಪತ್ರಿಕೆಗಳು ಕಣ್ಮುಚ್ಚತೊಡಗಿವೆ. ಅಮೇರಿಕದ ಪ್ರಸಿದ್ಧ ವಾರಪತ್ರಿಕೆಗಳಲ್ಲಿ ಜಾಹಿರಾತುದಾರರನ್ನು ಎದುರಿಸಲಾರದೆ ನಿಂತುಹೋದುದರಲ್ಲಿ ಮೊದಲನೆಯದು 'ಕಾಲಿಯರ್ಸ್.' 'ಕಾಲಿಯರ್ಸ್'ನ ಸಂಪಾದಕೀಯ ನೀತಿ ಜಾಹಿರಾತುದಾರರಿಗೆ ಹಿಡಿಸಲಿಲ್ಲವಂತೆ. ಅದನ್ನು ಬದಲಿಸಲು ಅವರು ತಂದ ಒತ್ತಾಯಗಳಿಗೆ ಮಣಿಯುವುದಕ್ಕಿಂತ ಮುಚ್ಚಿಬಿಡುವುದೇ ತನ್ನ ಧರ್ಮವೆಂದು ಅದು ನಿರ್ಧರಿಸಿತು.

ಅದರ ನಂತರದ ಸರದಿ 'ಸ್ಯಾಟರ್ಡೆ ಇವ್ನಿಂಗ್ ಪೋಸ್ಟ್'ನದು. ಜಗತ್ತಿನ ಪತ್ರಿಕೋದ್ಯಮದ ಇತಿಹಾಸದಲ್ಲಿಯೆ 'ಪೋಸ್ಟ್'ಗೆ ವಿಶಿಷ್ಟ ಮಹತ್ವದ ಸ್ಥಾನವಿದೆ. ಇಂದಿನ ಅಮೇರಿಕದ ಸಂಸ್ಥಾಪಕರಲ್ಲೊಬ್ಬನೂ ಆ ದೇಶದ ಅಧ್ಯಕ್ಷನೂ ಆಗಿದ್ದ ಜೆಫರ್ಸನ್ ಸ್ಥಾಪಿಸಿದ ಪತ್ರಿಕೆಯಿದು. ಪತ್ರಿಕೆಯ ಮಟ್ಟವನ್ನು ಎತ್ತರದಲ್ಲಿರಿಸಿಕೊಂಡೇ ಅದರ ಪ್ರಸಾರವನ್ನು ಅಪೂರ್ವವೆಂಬಷ್ಟು ಮಟ್ಟಿಗೆ ಹೆಚ್ಚಿಸಬಹುದು ಎಂಬುದನ್ನು ಮೊತ್ತಮೊದಲ ಬಾರಿಗೆ 'ಪೋಸ್ಟ್' ಸಿದ್ಧಪಡಿಸಿತು. (ಈ ಗೌರವ 'ಪೋಸ್ಟ್'ನೊಂದಿಗೆ 'ಲೇಡೀಜ್ ಹೋಂ ಜರ್ನಲ್' ಪತ್ರಿಕೆಗೂ ಸಲ್ಲುತ್ತದೆ.) ಈ ಪತ್ರಿಕೆಯ ಪ್ರತಿಷ್ಠೆ ಎಷ್ಟು ಘನವಾದುದಾಗಿತ್ತೆಂದರೆ, ಅದರಲ್ಲಿ ತಮ್ಮ ಕತೆ, ಕಾದಂಬರಿ,

ಲೇಖನ ಬಂದರೆ ತಮ್ಮ ಜನ್ಮ ಸಾರ್ಥಕವೆಂದು ಪ್ರಖ್ಯಾತ ಲೇಖಕರು ಸಹ ಭಾವಿಸುತ್ತಿದ್ದರು. ಅದರಂತೆಯೆ ಅಸಂಖ್ಯ ಉತ್ತಮ ಲೇಖಕರನ್ನು ಕೂಡ ಅದು ಬೆಳಕಿಗೆ ತಂದಿತು. ಆದರೆ ೭೫ ರಿಂದ ೮೫ ಲಕ್ಷಗಳ ಒಳಹೊರಗೆ ಪ್ರಸಾರವುಳ್ಳ 'ಪೋಸ್ಟ್', 'ಲುಕ್' ಮತ್ತು 'ಲೈಫ್' ಪತ್ರಿಕೆಗಳಲ್ಲಿ ಕೆಲ ವರ್ಷಗಳ ಹಿಂದೆ ಒಂದು ಬಗೆಯ 'ಪ್ರಸಾರ ಯುದ್ಧ' (circulation war) ಏರ್ಪಟ್ಟಿತು. ಯಾವುದೇ ಪತ್ರಿಕೆಯ ಪ್ರಸಾರಕ್ಕೂ ಒಂದು ಮಿತಿಯಿದೆಯೆಂಬುದನ್ನು ಈ ಯುದ್ಧ ತೀರ ನಿಚ್ಚಳವಾಗಿ ಬೆಳಕಿಗೆ ತಂದಿತು. ಪತ್ರಿಕೆಯ ಪ್ರಸಾರ ಒಂದು ಮಿತಿಯನ್ನು ದಾಟಿದ ನಂತರ ಅದರ ಉತ್ಪಾದನಾ ವೆಚ್ಚ ಮತ್ತು ಆದಾಯಗಳಲ್ಲಿಯ ಅಂತರ ಕುಗ್ಗತೊಡಗುವುದು. ಅದಕ್ಕೆ ಕಾರಣವೆಂದರೆ ಪತ್ರಿಕೆಯ ಪ್ರಸಾರದಲ್ಲಿ ಹೆಚ್ಚಳಕ್ಕೆ ತಕ್ಕಂತೆಯೆ ಅದರ ಜಾಹಿರಾತು ದರಗಳು ಹೆಚ್ಚುವುದು ಸಾಧ್ಯವಿಲ್ಲ. ಬದುಕುವುದಕ್ಕೋಸ್ಕರ 'ಪೋಸ್ಟ್' ಪತ್ರಿಕೆಯಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿ ನೋಡಿತು. ಯಾವುದೂ ಇಚ್ಛಿತ ಪರಿಣಾಮ ನೀಡದೆಯೆ ಕೊನೆಗದು ಕೊನೆಯುಸಿರೆಳೆಯಿತು.




ಲೈಫ್ ಪತ್ರಿಕೆಯ ಒಂದು ಮುಖ ಪುಟ

ಅನಂತರದ ಸರದಿ 'ಲುಕ್' ಪತ್ರಿಕೆಯದು. 'ಪೋಸ್ಟ್' ನಿಂತುಹೋದನಂತರ ಪ್ರಸಾರ ಯುದ್ಧ 'ಲುಕ್' ಮತ್ತು 'ಲೈಫ್'ಗಳಿಗೆ ಸೀಮಿತವಾಯಿತು. ಅದರಲ್ಲಿ ಎರಡು ವರ್ಷಗಳ ಹಿಂದೆ 'ಲುಕ್' ನಿಂತುಬಿಟ್ಟಾಗ ಅದೇ ತನ್ನ ಅವಕಾಶವೆಂದು 'ಲೈಫ್' ಅಮೇರಿಕದಲ್ಲಿಯ 'ಲುಕ್' ಚಂದಾದಾರರನ್ನೆಲ್ಲ ತಾನು ಬರಮಾಡಿಕೊಂಡು ತನ್ನ ಪ್ರಸಾರವನ್ನು ಮತ್ತೆ ಕೆಲ ದಶಲಕ್ಷಗಳಿಂದ ಹೆಚ್ಚಿಸಿಕೊಂಡು ವಿಜಯಧ್ವಜ ಮೆರೆಸಿತು. 'ಲುಕ್'ನ ಕೊನೆಯನ್ನು 'The Last Look' ಎಂಬ ಶೀರ್ಷಿಕೆಯೊಂದಿಗೆ 'ಟೈಂ ಪತ್ರಿಕೆ ವರ್ಣಿಸಿತು.

ಆದರೆ ತನ್ನ ಪ್ರತಿಸ್ಪರ್ಧಿಗಳನ್ನು ಮಣ್ಣುಮುಕ್ಕಿಸಿ ತನ್ನ ಪ್ರಸಾರವನ್ನು ಬಹುವಾಗಿ ಹೆಚ್ಚಿಸಿಕೊಂಡು 'ಲೈಫ್' ತನ್ನ ಆಯುಷ್ಯದ ಕೊನೆಯ ನಿಮಿಷವನ್ನು ತಾನೇ ಇನ್ನೂ ಹೆಚ್ಚು ಸಮೀಪಕ್ಕೆ ತಂದುಕೊಂಡಿತು. ಆದರೆ ತನ್ನ ಈ ಕ್ರಮ ಆತ್ಮಹತ್ಯೆಯೆಡೆ ತಾನಿರಿಸಿದ ಮೊದಲ ಹೆಜ್ಜೆಯೆಂದು ಅದಕ್ಕಂತೂ ಅನಿಸಿರಲಿಕ್ಕಿಲ್ಲ. ಕೆಲವೇ ತಿಂಗಳುಗಳಲ್ಲಿ ತನ್ನ ವಿಜಯ ಅದೆಷ್ಟು ಟೊಳ್ಳೆಂಬುದನ್ನದು ಕಂಡುಕೊಳ್ಳಬೇಕಾಗಿ ಬಂತು. ಉತ್ಪಾದನೆಯ ವೆಚ್ಚ ಆದಾಯಕ್ಕಿಂತ ಬಹಳ ಹೆಚ್ಚಾದಾಗ ತನ್ನ ಅಂತಾರಾಷ್ಟ್ರೀಯ ಆವೃತ್ತಿಗಳನ್ನೆಲ್ಲ ೧೯೭೧ ರ ಡಿಸೆಂಬರಿನಿಂದ 'ಲೈಫ್' ನಿಲ್ಲಿಸಲೇ ಬೇಕಾಯಿತು ಮಾತ್ರವಲ್ಲ, ಅಮೇರಿಕನ್ ಆವೃತ್ತಿಯ ಪ್ರಸಾರವನ್ನೂ ನಿರ್ದಿಷ್ಟ

(೮,೫೦೦,೦೦೦ ದಿಂದ ೫,೫೦೦,೦೦೦ ಕ್ಕೆ ಕೃತ್ರಿಮವಾಗಿ ಇಳಿಸಿಕೊಂಡಿತು) ಮಟ್ಟಕ್ಕೆ ಮಿತಗೊಳಿಸಿಕೊಳ್ಳಬೇಕಾಯಿತು. ಅಷ್ಟು ಮಾಡಿದಾಗಲೂ ಹಾನಿಯನ್ನು ತುಂಬಿಕೊಳ್ಳಲಾಗದೆ 'ಲೈಫ್' ತತ್ತರಿಸತೊಡಗಿತು. ಜಾಹಿರಾತುದಾರರು ಜಾಹಿರಾತಿನ ದರಗಳನ್ನು ಹೆಚ್ಚಿಸಲು ಸಿದ್ಧರಾಗಲಿಲ್ಲ. ಟೆಲಿವಿಜನ್ನಿನ ಸ್ಪರ್ಧೆ ಇನ್ನೂ ತೀವ್ರವಾಯಿತು. ಟೆಲಿವಿಜನ್ ಒಂದು ನಿಮಿಷದ ಜಾಹಿರಾತುಗಳೊಡಿಗೆ ೧೫ ಸೆಕೆಂಡುಗಳ ಹೊಸ ಜಾಹಿರಾತುಗಳನ್ನೂ ಪ್ರಸಾರ ಮಾಡತೊಡಗಿದೊಡನೆಯೆ 'ಲೈಫ್' ಇನ್ನು ತನ್ನ ಕೈ ಸಾಗದೆಂದುಕೊಂಡು ಮುಚ್ಚಿಬಿಡಲು ನಿರ್ಧರಿಸಿತು. ಲೈಫ್ ನೀತಾಗ ಅದರ ಜಾಹಿರಾತು ದರ ಒಂದು ಪೂರ್ಣ ಪುಟಕ್ಕೆ ೬೦,೦೦೦ ಡಾಲರುಗಳಿಂದ ೪೦,೦೦೦ ಡಾಲರುಗಳ ವರೆಗಿತ್ತು. (೨,೬೩,೦೦೦ ದಿಂದ ೩,೩೩,೦೦೦ ರೂಪಾಯಿಗಳು) ಕಳೆದ ವರ್ಷ ಅಮೇರಿಕನ್ ಸರಕಾರ ಅಂಚೆಯ ದರಗಳನ್ನು ಹೆಚ್ಚಿಸಿದಾಗ 'ಲೈಫ್'ನ ಹಾನಿ ಇನ್ನೂ ಬೆಳೆದು ಅದರ ಕೊನೆ ಅನಿವಾರ್ಯವಾಯಿತು.

*

೩೬ ವರ್ಷ ಬಾಳಿದ 'ಲೈಫ್' ತನ್ನ ಜೀವಿತಾವಧಿಯಲ್ಲಿ ಇತಿಹಾಸವನ್ನೇ ನಿರ್ಮಿಸಿದ ಪತ್ರಿಕೆ. 'ಟೈಮ್'ನಂತಹ ಹೊಸ ಮಾದರಿಯ ವಾರ್ತಾ ವಾರಪತ್ರಿಕೆಯನ್ನು ಪ್ರಾರಂಭಿಸಿ ಯಶಸ್ಸಿನ ಶಿಖರವನ್ನೇರಿದ್ದ ಹೆನ್ರಿ ಲೂಸ್ ೧೯೩೬ ರಲ್ಲಿ ಮತ್ತೂ ಒಂದು ಸಾಹಸಕ್ಕಣಿಯಾದ—ಅದುವೆಯೆ 'ಲೈಫ್'. ಇಂದು ಟೆಲಿವಿಜನ್ ಮಾಡುತ್ತಿರುವ ಕಾರ್ಯವನ್ನೇ ಅಂದು 'ಲೈಫ್' ಪ್ರಾರಂಭಿಸಿತು. ಅಮೇರಿಕ ಮತ್ತು ಜಗತ್ತಿನ ನಾನಾ ಮೂಲೆಗಳಿಂದ ವಾರ ವಾರವೂ ಶ್ರೇಷ್ಠ ದರ್ಜೆಯ ಚಿತ್ರಗಳನ್ನು ತರಿಸಿ ಆ ಮೂಲಕ ಜಾಗತಿಕ ಮಹತ್ವದ ವಾರ್ತೆಗಳನ್ನು ಓದುಗರಿಗೆ ನೀಡುವ ಹೊಸ ಬಗೆಯ ಪತ್ರಿಕೋದ್ಯಮಕ್ಕೆ 'ಲೈಫ್' ಮೊದಲು ಮಾಡಿತು. ಮುಂದೆ 'ಲೈಫ್'ನ್ನೇ ಅನುಸರಿಸಿ ಇಂಗ್ಲೆಂಡಿನಲ್ಲಿ 'ಪಿಕ್ಚರ್ ಪೋಸ್ಟ್' ಎಂಬ ಪತ್ರಿಕೆಯೂ ಯಶಸ್ವಿಯಾಯಿತು.

ತಾನು ಪ್ರಾರಂಭಿಸಿದ ಚಿತ್ರಪತ್ರಿಕೋದ್ಯಮದ ಯಶಸ್ಸಿಗಾಗಿ ಎಂಥ ಪ್ರಯತ್ನವೂ ಹೆಚ್ಚಿನದೆಂದು 'ಲೈಫ್' ಬಗೆಯಲಿಲ್ಲ. ಜಗತ್ತಿನ ಶ್ರೇಷ್ಠ ಛಾಯಾಚಿತ್ರಗ್ರಾಹಕರನ್ನು ಅದು ಬೆಳಕಿಗೆ ತಂದಿದೆ. ರಾಬರ್ಟ್ ಕಾಪಾ, ಡೇವಿಡ್ ಡಗ್ಲಾಸ್-ಡಂಕನ್, ಮಾರ್ಗರೆಟ್ ಬರ್ಕ್-ವೈಟ್ ಮುಂತಾದ ಒಬ್ಬೊಬ್ಬರು ಚಿತ್ರಗಳಿಗಾಗಿ ಮಾಡಿದ ಸಾಹಸಗಳೇ ಒಂದೊಂದು ರಮ್ಯ ಕಾದಂಬರಿಗೆ ವಸ್ತುವಾಗುವಂತಿವೆ. ಒಂದೊಮ್ಮೆ ಮನುಷ್ಯ ಸಮೀಪ ಸುಳಿಯಲೂ ಅಸಾಧ್ಯವೆನಿಸಿದ್ದಂಥ ಸ್ಥಳಗಳಿಗೆ 'ಲೈಫ್' ಚಿತ್ರಗ್ರಾಹಕರು ಮೊತ್ತಮೊದಲ ಸಲವೇಬಂತೆ ಹೋಗಿ ಅದ್ಭುತ ಚಿತ್ರಗಳನ್ನು ಹಿಡಿದು ತಂದಿದ್ದಾರೆ. ಅಮೆಜಾನ್ ಮತ್ತು ಕಾಂಗೋ ಕೊಳ್ಳಗಳು, ಜ್ವಾಲಾಮುಖಿಗಳು, ದುರ್ಗಮ ಹಿಮಶಿಖರಗಳು, ಧ್ರುವ ಪ್ರದೇಶಗಳು ಅವರಿಗೆ ಈಲಾದುವು. 'ಲೈಫ್' ಹುಟ್ಟಿದ ನಂತರ ಸ್ಪೇನಿನ ಆಂತರಿಕ ಯುದ್ಧ, ಎರಡನೆಯ ಜಾಗತಿಕ ಮಹಾಯುದ್ಧ, ಕೋರಿಯಾ ಯುದ್ಧ, ವಿಯೆಟ್ನಾಮ್ ಯುದ್ಧ ಮುಂತಾದ ಯುದ್ಧ ಪ್ರದೇಶಗಳಲ್ಲಿನ ಜೀವಂತ ಚಿತ್ರಗಳನ್ನವರು ತಂದು ಓದುಗರಿಗೆ ನೀಡಿದ್ದಾರೆ. ರಾಬರ್ಟ್ ಕಾಪಾ ವಿಯೆಟ್ನಾಮಿನಲ್ಲಿ ಕಾರ್ಯಮಗ್ನನಾಗಿರುವಾಗಲೇ ಮೃತಪಟ್ಟನು. ಸ್ಪಾನಿಶ್ ಆಂತರಿಕ ಯುದ್ಧದಲ್ಲಿ ನೆಲಕ್ಕುರುಳುತ್ತಿರುವ ಸೈನಿಕನ ಚಿತ್ರ, ಎರಡನೆಯ ಮಹಾಯುದ್ಧದ ಕೊನೆಯ ಹಂತದಲ್ಲಿ ಮಿತ್ರ ಸೈನಿಕರು ಫ್ರಾನ್ಸಿನ ನಾರ್ಮಂಡಿಯಲ್ಲಿಳಿಯುತ್ತಿರುವ ಚಿತ್ರಗಳನ್ನು ತನ್ನ ಕ್ಯಾಮರಾದಲ್ಲಿ ಸೆರೆಹಿಡಿದ ಗೌರವ ಅವನಿಗೆ ಸಲ್ಲುತ್ತದೆ. ೧೯೪೮ರಲ್ಲಿ ಮಹಾತ್ಮಾ ಗಾಂಧಿಯವರ ಅಂತ್ಯಯಾತ್ರೆಯ ಚಿತ್ರವನ್ನು ಪ್ರಕಟಿಸಿ ಆ ಘಟನೆಯ ಗಂಭೀರತೆಯನ್ನು ಜಗತ್ತಿಗೆ 'ಲೈಫ್' ತೋರಿಸಿತು. ಆಲ್ಫ್ರೆಡ್ ಈಸೆನ್‌ಸ್ಟಾಟ್ ಎಂಬ 'ಲೈಫ್' ಛಾಯಾಚಿತ್ರ

ಗ್ರಾಹಕ ದ್ವಿತೀಯ ಮಹಾಯುದ್ಧ ಕಾಲದಲ್ಲಿಯ ಗಣ್ಯವ್ಯಕ್ತಿಗಳಾದ ಹಿಟ್ಲರ್, ಮುಸ್ಸೊಲಿನಿ, ಚರ್ಚಿಲ್, ಸ್ಟಾಲಿನ್ ಮುಂತಾದವರ ಅಪರೂಪ ಚಿತ್ರಗಳನ್ನು ತೆಗೆದು ಈ ಪತ್ರಿಕೆಯ ಮೂಲಕ ಬೆಳಕಿಗೆ ತಂದಿದ್ದಾನೆ. ಹೆಸರಾಂತ ಕಲಾವಿದರ ನೇಕರ ಕೃತಿಗಳ ವರ್ಣಚಿತ್ರಗಳನ್ನು 'ಲೈಫ್' ತನ್ನ ಓದುಗರಿಗೆ ನೀಡಿದೆ. ಮನುಷ್ಯ ಪ್ರಪ್ರಥಮ ಸಲ ಚಂದ್ರನ ಮೇಲಿಳಿದುದರ ವರ್ಣ ಚಿತ್ರಗಳನ್ನು ವಿಶೇಷ ಸಂಚಿಕೆಯ ಮೂಲಕ 'ಲೈಫ್' ಜಗತ್ತಿಗೆ ನೀಡಿತು.

೧೯೩೮ರಲ್ಲಿ 'ಲೈಫ್' ಮಗುವಿನ ಜನನದ ಎಲ್ಲ ಹಂತಗಳನ್ನು ಚಿತ್ರಗಳಲ್ಲಿ ತೋರಿಸಿದಾಗ ಅಮೇರಿಕದ ಹಲವು ನಗರಗಳಲ್ಲಿ ಈ ಪತ್ರಿಕೆಯನ್ನು ಪ್ರತಿಬಂಧಿಸಲಾಯಿತು ಕೂಡ. ಆದರೆ ಮರುವರ್ಷವೇ ಯುರೋಪಿನಲ್ಲಿ ಯುದ್ಧ ಆರಂಭವಾದ ನಂತರ ಅದರ ಚಿತ್ರಮಯ ವರದಿಗಳನ್ನು 'ಲೈಫ್' ಪ್ರಕಟಿಸತೊಡಗಿದಾಗ ಅಮೇರಿಕನ್ ಜನ ಹಿಂದಿನದನ್ನು ಮರೆತು ಬಿಟ್ಟಿತು. ಪತ್ರಿಕೆಯ ಪ್ರಸಾರ ಹಿಂದೆಂದೂ ಇದ್ದಿರದ ತೆರದಲ್ಲಿ ವರ್ಧಿಸತೊಡಗಿತು.

ಚಿತ್ರಗಳು ಮಾತ್ರ 'ಲೈಫ್'ನ ಜೀವಾಳವಲ್ಲ. ಜಗತ್ತಿನ ಪ್ರಖ್ಯಾತ ಬರಹಗಾರರು ಈ ಪತ್ರಿಕೆಯಲ್ಲಿ ತಮ್ಮ ಕೃತಿಗಳು ಪ್ರಕಟವಾಗುವುದೇ ಒಂದು ಗೌರವವೆಂದು ಬಗೆಯುತ್ತಿದ್ದರು. ಅರ್ನೆಸ್ಟ್ ಹೆಮಿಂಗ್ವೆ, ಗ್ರಹ್ಯಾಮ್ ಗ್ರೀನ್, ಎವೆಲಿನ್ ವಾಫ್, ಜೇಮ್ಸ್ ಮಿಚೆನರ್, ಜೇಮ್ಸ್ ಡಿಕ್ಕಿಯವರ ಕೃತಿಗಳು ಧಾರಾವಾಹಿಯಾಗಿ ಇಲ್ಲಿ ಬೆಳಕು ಕಂಡಿವೆ. ವಿನ್‌ಸ್ಟನ್ ಚರ್ಚಿಲ್ ತಮ್ಮ 'ಸ್ಮೃತಿ'ಗಳ ಪ್ರಕಟನೆಗೆ 'ಲೈಫ್'ನ್ನೇ ಆಯ್ದುಕೊಂಡರು. ಅಧ್ಯಕ್ಷ ಟ್ರೂಮನ್, ಡ್ಯೂಕ್ ಆಫ್ ವಿಂಡ್ಸರ್, ಅಧ್ಯಕ್ಷ ಐಸೆನ್‌ಹಾವರ್, ಜನರಲ್ ಓಮರ್ ಬ್ರ್ಯಾಡ್ಲೆ, ಜನರಲ್ ಡಗ್ಲಾಸ್ ಮೆಕಾರ್ಥರ್ ಮುಂತಾದ ಮಹನೀಯರೂ ತಂತಮ್ಮ ನೆನಪುಗಳನ್ನು ಈ ಪತ್ರಿಕೆಯಲ್ಲೇ ಮೊದಲ ಸಲ ಪ್ರಕಟಿಸಿದ್ದಾರೆ.

ಇಂತು ಜಗತ್ತಿನ ಅತ್ಯಂತ ವರ್ಚಸ್ವೀ ಪತ್ರಿಕೆಗಳಲ್ಲಿ 'ಲೈಫ್' ತನ್ನದೇ ಆದ ಸ್ಥಾನವನ್ನು ಹೊಂದಿತ್ತು.

ಆದರೂ ಟೆಲಿವಿಜನ್ ಸ್ಪರ್ಧೆಯಿಂದಾಗಿ 'ಲೈಫ್' ಕಠಿಣ ಸಮಯವನ್ನೆದುರಿಸಬೇಕಾಗಿ ಬಂತು. ಆಗ ಪ್ರಸಾರವನ್ನು ಮಿತಗೊಳಿಸುವುದರೊಂದಿಗೆ ಸಂಪಾದಕೀಯ ದೃಷ್ಟಿಕೋನದಲ್ಲಿ ಬದಲಾವಣೆ ಮಾಡಿ ನೋಡಲು ಪ್ರಯತ್ನಿಸಲಾಯಿತು. ಆದರೆ ಆ ಮೊದಲು 'ಸ್ಯಾಟರ್ಡೆ ಇವ್ನಿಂಗ್ ಪೋಸ್ಟ್' ಮತ್ತು 'ಲುಕ್'ಗೆ ಬಂದಿದ್ದ ಅನುಭವವೇ ಈಗ 'ಲೈಫ್'ನದಾಯಿತು. ಯಾವ ಬದಲಾವಣೆಯೂ ಜಾಹೀರಾತುದಾರರ ಮೇಲೆ ಹಿತಕರ ಪರಿಣಾಮವುಂಟು ಮಾಡಲಿಲ್ಲ. ವೆಚ್ಚವನ್ನು ಕಡಿಮೆಮಾಡಲು 'ಲೈಫ್' ತನ್ನ ಸಿಬ್ಬಂದಿಯಲ್ಲಿ ಭಾರಿ ಕಡಿತವನ್ನುಂಟುಮಾಡಿತು. ತನ್ನ ಚಂದಾದರವನ್ನು ತುಸು ಹೆಚ್ಚಿಸಿ ನೋಡಿತು. ಆದರೆ ಅದಾವುದೂ ಹಾನಿಯನ್ನು ತಪ್ಪಿಸದಾದಾಗ 'ಲೈಫ್'ನ್ನು ಮುಚ್ಚಿ ಬಿಡಲು ನಿರ್ಧರಿಸಲಾಯಿತು.

'ಲೈಫ್'ನ ಕಣ್ಮರೆಯಿಂದ ಜಾಗತಿಕ ಪತ್ರಿಕೋದ್ಯಮದಲ್ಲಿಯ ಒಂದು ಯುಗವೇ ಸಮಾಪ್ತವಾದಂತಾಯಿತು.

'ಲೈಫ್' ಸ್ಥಾಪಿಸಿದ ಹೆನ್ರಿ ಲೂಸ್‌ಗೆಯೆ ಇದರ ಆಯುಷ್ಯದ ಬಗ್ಗೆ ಭರವಸೆಯಿರಲಿಲ್ಲ. ಪ್ರಾರಂಭದಲ್ಲಿಯೇ ಅಮೇರಿಕನ್ ಓದುಗರ ಮೇಲೆ ಅದ್ಭುತ ಪ್ರಭಾವ ಬೀರಿದ ತನ್ನ ಪತ್ರಿಕೆಯನ್ನು ನೋಡುತ್ತ ಹೆನ್ರಿ ಲೂಸ್ ಒಮ್ಮೆ ಉದ್ಗರಿಸಿದ್ದನಂತೆ: "ಛಾಯಾಚಿತ್ರಗ್ರಹಣ, ಮುದ್ರಣ ಮುಂತಾದ ಕ್ಷೇತ್ರಗಳೆಲ್ಲಾದ ತಾಂತ್ರಿಕ ಪ್ರಗತಿಯನ್ನೇ ಆಧಾರವಾಗಿಸಿಕೊಂಡು ಜನ್ಮತಳೆದ 'ಲೈಫ್' ಪ್ರಚಾರ ಮಾಧ್ಯಮವಲ್ಲಿ ಇನ್ನೂ ಹೊಸ ತಾಂತ್ರಿಕ ಪ್ರಗತಿಯೊಂದಿಗೆಯೇ ಕಣ್ಣು ಮುಚ್ಚಬೇಕಾದೀತು. ಹೆಚ್ಚೆಂದರೆ ಅದರ ಆಯುಷ್ಯ ಇಪ್ಪತ್ತು ವರ್ಷ," ಎಂದು. ✲



# ಮನವೆಂಬ ಮರ್ಕಟ

ಗೀತಾ ದೇಸಾಯಿ

ಬೆಳಗಾಗಿದೆ. ಅದಕ್ಕೆ ಸಾಕ್ಷಿಯಾಗಿ ಚಾಳಿನಲ್ಲಿ ಹತ್ತಾರು ಸ್ಟೋವುಗಳ ಸಪ್ಪಳದ ಹಿಮ್ಮೇಳದೊಂದಿಗೆ ನಲ್ಲಿಯ ಬಳಿ ಹೆಂಗಸರ ಧ್ವನಿಗಳು ಕೇಳುತ್ತಿವೆ. ನನ್ನ ಹೆಂಡತಿ ಆಗಲೇ ಎದ್ದು ಅಡಿಗೆಮನೆಯಲ್ಲಿ ಚಹದ ತಯಾರಿಯಲ್ಲಿ ತೊಡಗಿದ್ದಾಳೆ. ನಾನು ಮಾತ್ರ ರಗ್ಗನ್ನು ಮೈತುಂಬ ಸುತ್ತಿಕೊಂಡು ಎಚ್ಚರವಾಗಿದ್ದರೂ ಹಾಸಿಗೆಯಲ್ಲೇ ಹೊರಳಾಡುತ್ತಿದ್ದೇನೆ. ಹೌದು... ಇಂಥ ಕೆಟ್ಟ ಚಳಿಯಲ್ಲಿ ಇಷ್ಟು ಬೇಗ ಅವಸರವಾದರೂ ಏನಿದೆ?...ಅದೂ ರವಿವಾರದ ದಿನ...

"ಚಹಾ ಆಗೇದ, ಏಳ್ತೀರೇನು?"– ನನ್ನಾಕೆ ಒಳಗಿನಿಂದಲೇ ಕೂಗುತ್ತಿದ್ದಾಳೆ. ನನಗಿನ್ನೂ ಏಳುವ ಮನಸ್ಸಾಗಿಲ್ಲ. "ಆಂ...ಊಂ..." ಎಂದು ಮೈಮುರಿಯುತ್ತ ಗೋಡೆಗೆ ಮುಖ ಮಾಡಿ ಇನ್ನೂ ಮಲಗಿಯೇ ಇದ್ದೇನೆ. ಮುಚ್ಚಿದ ಕಣ್ಮುಂದೆ ಮದುವೆಯಾದ ಹೊಸತರಲ್ಲಿ ನಲಿನಿ (ಅದು ನನ್ನವಳ ಹೆಸರು) ಮಂಚದ ಬಳಿ ಬಂದು ಹೊದಿಕೆಯನ್ನು ಸರಿಸಿ ನನ್ನ ಕೆದರಿದ ಕ್ರಾಪಿನ ಮೇಲೆ ಮೃದುವಾಗಿ ಕೈಯಾಡಿಸಿ, "ಲಗೂ ಎದ್ದು ಮಾರಿ ತೊಳಕೊಂಡು ಬರ್ರಿ. ಚಹಾ ಆರಿ ಹೋಗ್ತ್ಯದ," ಎಂದು ಜೇನುದನಿಯಿಂದ ನನ್ನನ್ನು ಎಚ್ಚರಿಸುತ್ತಿದ್ದ ದೃಶ್ಯ ಸುಳಿಯುತ್ತಿದೆ. ಆದರೆ ತೇ ಹಿ ನೋ ದಿವಸಾ ಗತಾಃ! ಈಗ ಮೊದಲಿನ ರಸಿಕತೆ, ಭಾವೋದ್ವೇಗ ಅವಳಲ್ಲಿ ಉಳಿದಿಲ್ಲ. ಎಲ್ಲವೂ ಯಾಂತ್ರಿಕವಾಗಿ ನಡೆದಿದೆ. ನಮ್ಮ ದೇಶದ ಹೆಂಗಸರೇ ಹೀಗೆ. ಮದುವೆಯಾಗಿ ಒಂದೆರಡು ಮಕ್ಕಳಾದೊಡನೆ ಬದುಕಿನ ಸ್ವಾರಸ್ಯವೆಲ್ಲ ಕಳೆದುಹೋದಂತೆ ವರ್ತಿಸುತ್ತಾರೆ! ಅದೇ ಪಾಶ್ಚಾತ್ಯ ಮಹಿಳೆಯರು ಮುದುಕಿಯರಾದರೂ ವೇಷಭೂಷಣಗಳಲ್ಲಿಯ ಅಚ್ಚುಕಟ್ಟುತನ, ಉತ್ಸಾಹಗಳನ್ನು ಬಿಡುವದಿಲ್ಲ...

"ಹೂಂ. ಲಗೂ ಏಳ್ರಿ... ಈಗ ಕೆಲಸದಾಕಿ ಬರ್ತಾಳ. ಅಷ್ಟರೊಳಗ ಚಹಾದ ಪಾತ್ರೆಗಳನ್ನೂ ಹಾಕಿದರ ಮುಸುರೆ ಕೆಲಸ ಮುಗಿದು ಹೋಗ್ತದ."–ಒಳಗಿನಿಂದ ನನ್ನಾಕೆಯ ಆರ್ಡರು. ಇನ್ನು ಏಳಲೇಬೇಕು.

ಬಚ್ಚಲು ಮನೆಯಲ್ಲಿ ಮುಖ ತೊಳೆದುಕೊಳ್ಳುವಾಗ ಹಿಂದಿನ ಮನೆಯ ಕಾಲೇಜು



ಕುವರಿ ಮಾಲಿನಿಗೂ ನಮ್ಮ ನೆರೆಮನೆಯ ಮನೋಹರನಿಗೂ ಗ್ಯಾಲರಿಯಿಂದಲೇ ಮೂಕ ಸಂಭಾಷಣೆ ನಡೆದಿರುವದನ್ನು ನೋಡಿ ನನಗೂ ತಾರುಣ್ಯದ ಉನ್ಮಾದಕಾರಿ ದಿನಗಳ ಮಧುರ ಸ್ಮರಣೆಯಿಂದ ಒಂದು ಕ್ಷಣ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತದೆ. ಹಾಗೆ ನೋಡಿದರೆ ನಾನೇನೂ ಮುದುಕನಾಗಿಲ್ಲ. ಇನ್ನೂ ನಲವತ್ತು ಸಹ ಆಗಿಲ್ಲ. ಆದರೂ ಇಪ್ಪತ್ತರ ಹರೆಯದ ಹುಚ್ಚುಚ್ಚಾರ ಕನಸುಗಳನ್ನು ಮೆಲುಕು ಹಾಕುವ ಅದಮ್ಯ ಆಶೆ ಇಂದು ನನಗಾಗುತ್ತಿದೆ......

“ಏನೀವತ್ತು ಇಷ್ಟ ಹೊತ್ತು ಹಲ್ಲು ತಿಕ್ಕಿಕೊಂಡ್ರಿಲ್ಲ...” ಚಹದ ಕಪ್ಪನ್ನು ಟೀಪಾಯ್ ಮೇಲಿಟ್ಟು ಮಂಚದ ಮೇಲಿನ ಹಾಸಿಗೆಯನ್ನು ಸರಿಪಡಿಸುತ್ತ ನಲಿನಿ ಕೇಳುತ್ತಿದ್ದಾಳೆ. ನಾನು ಚಹ ಕುಡಿಯುತ್ತಲೇ ಅವಳನ್ನು ಗಮನಿಸುತ್ತಲಿದ್ದೇನೆ. ನಲಿನಿ ಚೆಲುವೆಯಲ್ಲದಿದ್ದರೂ ನಾನು ಮದುವೆಯಾಗುವಾಗ ಅವಳ ನೀಳವಾದ ಜಡೆ, ಆಕರ್ಷಕ ಮುಂಗುರುಳು, ಮುದ್ದಾದ ಮುಖ ನನ್ನನ್ನು ಸೆರೆಹಿಡಿದಿದ್ದವು. ಆದರೆ ಅವಳ ಈಗಿನ ರೂಪವೇ ಬೇರೆ. ಕೂದಲು ಗಂಟು ಹಾಕಿಕೊಂಡು ಸೀರೆಯ ನೆರಿಗೆಗಳನ್ನು ಸೊಂಟಕ್ಕೆ ಸಿಗಿಸಿ ಮನೆಗೆಲಸದಲ್ಲಿ ತೊಡಗಿರುವ ನಲಿನಿಯ ಮುಖದ ಮೇಲೆ ಮೊದಲಿನ ಮೃದುತ್ವ ಮಾಯವಾಗಿ ಒಂದು ತರದ ಒರಟುತನ ಬಂದಿದೆ......

“ಅದೇನು ಹಾಂಗ ನೋಡ್ತೀರಿ ನನ್ನ! ಇಂದು ನೀವು ಯಾಕೋ ದಿನದಂತೆ ಇಲ್ಲ...” ಎಂದಂದು,

“ಈಗ ಹುಡುಗರು ಏಳ್ತಾರ. ಈವತ್ತ ನೀವೇ ಸ್ನಾನಕ್ಕೆ ಹಾಕಿಬಿಡ್ರಿ...” ಎಂದವಳೇ ನಲಿನಿ ತನ್ನ ಕೆಲಸಕ್ಕೆ ಹೋಗಿಬಿಡುತ್ತಾಳೆ. ನಾನು ದಿನಪತ್ರಿಕೆಯಲ್ಲಿ ಮುಖ ಹುದುಗಿಸಿ ಕುಳಿತುಕೊಳ್ಳುತ್ತೇನೆ...

ಯಾಕೋ ಎಂದಿನಂತೆ ಬಾಂಗ್ಲಾದೇಶ, ಚುನಾವಣೆಗಳು ಮುಂತಾದ ರಾಜಕೀಯ ಸುದ್ದಿಗಳತ್ತ ಗಮನ ಹರಿಯದೆ ಪ್ರಮಾಣಬದ್ಧ ಶರೀರದ ಜಾಹೀರಾತು ಯುವತಿಯನ್ನು ಮತ್ತೆ ಮತ್ತೆ

ನೋಡುವ ಬಯಕೆಯಾಗುತ್ತಿದೆ. ಇಂದು ನನ-ಗೇನಾಗಿದೆಯೆಂಬುದು ನನಗೇ ತಿಳಿಯದಂತಾಗಿದೆ!

"ಅಣ್ಣಾ, ಇಂದು ರವಿವಾರ ಅಲ್ಲೇನಣ್ಣಾ... ಸಾಲಿಗೆ ಸೂಟಿ..." ಹಾಸಿಗೆಯಿಂದ ಏಳುವಾಗಲೇ ಕಣ್ಣುಜ್ಜುತ್ತ ನನ್ನ ಹಿರಿಯ ಕುಮಾರಕಂಠೀರವ ಸುಪ್ರಭಾತ ಹಾಡುತ್ತಾನೆ. ಅದರೊಡನೆಯೇ ನನ್ನ ಕಿರಿಯ ಮಗಳು "ಅಮ್ಮಾ ಽಽ" ಎಂದು ಉದಯರಾಗ ಆರಂಭಿಸುತ್ತಾಳೆ...ಸರಿ, ಇನ್ನು ಪೇಪರನ್ನೋದಿದಂತೆಯೇ ಎಂದುಕೊಂಡು ಅದನ್ನು ಬದಿಗಿರಿಸಿ ಅವರ ಸಮಾಚಾರಕ್ಕೆ ಧಾವಿಸುತ್ತೇನೆ...

*

ನಲಿನಿಯ ಕೈಯ ರಸಗವಳವನ್ನು ಕಂಠಪೂರ್ತಿ ಸವಿದು ಮಧ್ಯಾಹ್ನದ ಚುಟುಕು ನಿದ್ರೆಯ ನಂತರ ಅವಳಿತ್ತ ಬಿಸಿ ಚಹವನ್ನು ಹೀರಿ ಹೊರಗೆ ಹೊರಡಲನುವಾಗುತ್ತೇನೆ. ಎಲ್ಲಿಗೆ ಹೋಗುವದು ಎಂಬ ಪ್ರಶ್ನೆ ನನ್ನನ್ನು ಕಾಡುತ್ತದೆ. ಕಾಲೆಳೆದತ್ತ ಹೊರಟಿದ್ದೇನೆ. ಹುಡುಗಿಯರನ್ನು ನೋಡಿದೊಡನೆ ಕಣ್ಣು ಮಿಟುಕಿಸುವ ಟೈಟ್ ಪ್ಯಾಂಟಿನ ಯುವಕರು, ಅವರನ್ನು ಕಂಡು ತಮ್ಮ ಬಳ್ಳಿದೇಹವನ್ನು ಬಳುಕಿಸುವ ಗಿಡ್ಡ ಸೆರಗಿನ ಹುಡುಗಿಯರು—ಇವರನ್ನೆಲ್ಲ ನೋಡಿದೊಡನೆ ನನಗೆ ಏನೋ ಒಂದು ಕಳೆದುಕೊಂಡ ಅನುಭವವಾಗುತ್ತದೆ. ಹೊಸ ಹರೆಯದ ಉತ್ಸಾಹವಿರ-ಬಹುದೇ...? 'ಬೊಗಸೆಯಲ್ಲಿ ಹಿಡಿದುಕೊಂಡ ನೀರಿನಂತೆ ತಾರುಣ್ಯ ಸೋರಿಹೋಗುತ್ತಿದೆ' ಎಂಬ ಕವಿವಾಣಿ ನೆನಪಾಗುತ್ತದೆ. ದಾರಿಯಲ್ಲಿ ಎತ್ತರವಾದ ಕಟ್ಟಡಗಳ ಮೇಲೆ ನಟಿಯ ಅಂಗಾಂಗಗಳನ್ನು ಪ್ರದರ್ಶಿಸುವ ದೊಡ್ಡ ದೊಡ್ಡ ಪೋಸ್ಟರುಗಳನ್ನು ಮತ್ತೆಮತ್ತೆ ಕಣ್ಣೆತ್ತಿ ನೋಡುತ್ತೇನೆ.

ಇಂದು ನನಗೇನಾಗಿದೆ?...ನಗರದ ಪ್ರಸಿದ್ಧ ಕಾಲೇಜಿನಲ್ಲಿ ಸುಮಾರು ೧೨–೧೩ ವರ್ಷಗಳಿಂದ ಪ್ರಾಧ್ಯಾಪಕನಾಗಿ ಕೆಲಸ ಮಾಡುತ್ತಿರುವ ನನ್ನಂಥ ಬುದ್ಧಿಜೀವಿ...

"ಹಲ್ಲೊ ಪ್ರೊಫೆಸರ್, ಏನು ಎಲ್ಲಿ ನೋಡಿಕೋತ ಹೊರಟೀರಿ!" ಎದುರಿಗಿಂದ ಬಂದ ವ್ಯಕ್ತಿ ನನ್ನ ಹೆಗಲ ಮೇಲೆ ಕೈಯಿರಿಸಿ ಕೇಳಿದಾಗ ನಾನು ತಬ್ಬಿಬ್ಬಾಗುತ್ತೇನೆ. ಭುಜದ ಮೇಲಿನ ಕೈಯನ್ನು ನನ್ನ ಕೈಯಲ್ಲಿ ತೆಗೆದುಕೊಂಡು, "ಅರೆ, ಪಾಟೀಲ...! ಯಾವಾಗ ಬಂದಿ?" ಎಂದಾಗ, "ನಿನ್ನೆಯೇ ಬಂದೆ. ಆಫೀಸಿನ ಕೆಲಸಕ್ಕಾಗಿ ಬಂದಿ-ದ್ದೇನೆ. ಇಂದು ರಾತ್ರಿ ತಿರುಗಿ ಹೋಗಬೇಕು. ನಿನ್ನ ಮನೆ ಹುಡುಕಿಕೊಂಡು ಬರಬೇಕೆಂದಿದ್ದೆ. ನೀನೇ ಭೆಟ್ಟಿಯಾದೆಯಲ್ಲ," ಎಂದವನೇ, "ಇಲ್ಲೇ 'ಸತ್ಕಾರ'ದಲ್ಲಿ ಇಳಕೊಂಡಿದ್ದೇನೆ- ನಡಿಯಲ್ಲ. ನನ್ನ ಶ್ರೀಮತಿಯೂ ಬಂದಿದ್ದಾಳೆ. ಇಂಟ್ರ-ಡ್ಯೂಸ್ ಮಾಡಿಕೊಡ್ತೇನೆ," ಎನ್ನುತ್ತ ನನ್ನನ್ನು ಹೋಟಲಿನತ್ತ ಕರೆದುಕೊಂಡು ಹೊರಡುತ್ತಾನೆ.

ಪಲವು ದಿನಗಳ ವರೆಗೆ ನಮ್ಮ ಕಾಲೇಜಿನಲ್ಲಿ ಲೆಕ್ಚರರ್ ಆಗಿದ್ದು ಅನಂತರ ಬೇರೆ ಕೆಲಸ ಸಿಕ್ಕಿದೊಡನೆ ಇನ್ನೊಂದು ಊರಿಗೆ ಹೊರಟುಹೋದ ಪಾಟೀಲನನ್ನು ಬಹುದಿನಗಳ ನಂತರ ನೋಡು-ತ್ತಿದ್ದುದರಿಂದ ಅನೇಕ ವಿಷಯಗಳ ಬಗ್ಗೆ ದಾರಿ-ಯುದ್ದಕ್ಕೂ ಹರಟುತ್ತ ಸಾಗಿರುವಾಗಲೇ 'ಸತ್ಕಾರ' ಬರುತ್ತದೆ. ತನ್ನ ರೂಮಿನ ಕರೆಗಂಟೆಯನ್ನೊತ್ತಿ "ಶೈಲಜಾ" ಎಂದು ಪಾಟೀಲ ಮೃದುವಾಗಿ ಕೂಗಿದಾಗ ಬಾಗಿಲು ನಿಧಾನವಾಗಿ ತೆರೆಯುತ್ತದೆ. ಶ್ರೀಮತಿ ಪಾಟೀಲರನ್ನು ನೋಡಿ ನನಗೆ ಒಂದು ಬಗೆಯ ಶಾಕ್ ಆಗುತ್ತದೆ. ಕಾಳಿದಾಸನ ಯಕ್ಷಣಿ ನೆನಪಾಗುತ್ತಾಳೆ— 'ತನ್ವೀ ಶ್ಯಾಮಾ ಶಿಖರಿ-ದಶನಾ, ಪಕ್ವಬಿಂಬಾಧ-ರೋಷ್ಠೀ, ಮಧ್ಯೇ ಕ್ಷಾಮಾ, ಚಕಿತ ಹರಿಣೀ ಪ್ರೇಕ್ಷಣಾ...' "ಏನು, ಇಷ್ಟು ಬೇಗ ಬಂದುಬಿಟ್ರಿ?" ಕತ್ತು ಕೊಂಕಿಸಿ ಗಂಡನನ್ನು ಅವಳು ಕೇಳಿದಾಗ, "ದಾರಿಯಲ್ಲಿ ಇವ ಸಿಕ್ಕ—ನನ್ನ ಗೆಳೆಯ ಪ್ರೊ. ದೇಶಪಾಂಡೆ...ಇವಳು ಶೈಲಜಾ ನನ್ನ..." ಪಾಟೀಲ ಪರಿಚಯ ಮಾಡಿಕೊಡುತ್ತಾನೆ. ಅವಳು ತನ್ನ ಚಿಗುರು ಕೈಗಳನ್ನು ಜೋಡಿಸಿ,

"ನಮಸ್ಕಾರ" ಎಂದಾಗ ನಾನೂ ಪ್ರತಿವಂದಿಸುತ್ತೇನೆ. ಪಾಟೀಲ ನಿಜವಾಗಿಯೂ ಸುದೈವಿ ಎಂದುಕೊಳ್ಳುತ್ತೇನೆ. "ಈ ಊರಿನಲ್ಲಿ ನಾನು ನೌಕರಿ ಮಾಡುತ್ತಿದ್ದಾಗ ನಾವಿಬ್ಬರೂ ಒಂದೇ ಕೋಣೆಯಲ್ಲಿರುತ್ತಿದ್ದೆವು...ದೇಶಪಾಂಡೆ, ನಿನ್ನ ಕೈಯ ಅಡಿಗೆಯ ರುಚಿ ಮಾತ್ರ ಇನ್ನೂ ಮರೆತಿಲ್ಲ ನೋಡು!" ಪಾಟೀಲ ದೊಡ್ಡದಾಗಿ ನಕ್ಕು ಹೇಳಿದಾಗ, "ಹಾಗಾದರೆ ಇಂದು ರಾತ್ರಿ ನಮ್ಮ ಮನೆಗೇ ಊಟಕ್ಕೆ ಬಂದುಬಿಡಿರಿ," ಎಂದು ನಾನು ಆಹ್ವಾನಿಸುತ್ತೇನೆ. ಜಹಾಪಾನ ಮಾಡುತ್ತಲೇ ಪಾಟೀಲ, "ಸಾರಿ...ಇಂದು ರಾತ್ರಿ ನಾವು ಹೊರಡಲೇಬೇಕು. ಅಷ್ಟರೊಳಗೆ ಇವಳದು ಏನೋ ಖರೀದಿ ಬೇರೆ ಮುಗಿಸಬೇಕು. ಇನ್ನೊಮ್ಮೆ ಬಂದಾಗ ಖಂಡಿತ ಬರುತ್ತೇವೆ," ಎನ್ನುತ್ತಾನೆ. ನಾನು ನಿರುಪಾಯನಾಗಿ ಅವರಿಂದ ನಿರೋಪ ತೆಗೆದುಕೊಳ್ಳುತ್ತೇನೆ.

ಮನೆಗೆ ಹೊರಡುವ ದಾರಿಯಲ್ಲಿ ವಿಚಾರಗಳ ಕಾದಾಟ ಆರಂಭವಾಗುತ್ತದೆ. ಮಿತ್ರನ ಪತ್ನಿಯನ್ನು ನೋಡಿದಾಗ ನನ್ನಲ್ಲಿ ಮೂಡಿದ ಭಾವನೆಗಳಿಂದ ನನಗೇ ನಾಚಿಕೆಯೆನಿಸುತ್ತದೆ. ಗೆಳೆಯನ ಇರುವಿಕೆಯನ್ನೂ ಗಮನಿಸದೆ ಔಚಿತ್ಯ ಮೀರಿ ನಿರ್ದಿಷ್ಟ ಅವಧಿಗಿಂತಲೂ ಹೆಚ್ಚು ಹೊತ್ತು ಅವನ ಸುಂದರ ಹೆಂಡತಿಯನ್ನು ಈಕ್ಷಿಸಿದುದು ಶುದ್ಧ ಅಸಂಸ್ಕೃತನ ಲಕ್ಷಣವಲ್ಲವೇ ಎಂದುಕೊಳ್ಳುತ್ತೇನೆ. ಬರೀ ಚೆಲುವಿಕೆಯೊಂದೇ ಅಲ್ಲ, ಅದರೊಡನೆ ಬುದ್ಧಿಮತ್ತೆಯೂ ಸೇರಿದ್ದ ಅನೇಕ ಕಾಲೇಜ್ ಕನ್ನೆಯರು ನನ್ನನ್ನು ವಿವಾಹವಾಗಲು ಮುಂದೆ ಬಂದಿದ್ದರು. ಕಾವ್ಯ, ನಾಟಕಗಳಂಥ ನವರಸಪ್ರಧಾನವಾದ ಕೃತಿಗಳಷ್ಟೇ ಸ್ವಾರಸ್ಯವಾಗಿ ಗೀತೆ, ಉಪನಿಷತ್ತು, ಶಾಂಕರಭಾಷ್ಯದಂಥ ತತ್ವಜ್ಞಾನ ಗ್ರಂಥಗಳನ್ನೂ ಕಲಿಸುವ ನನ್ನಂಥ ಸುಸ್ವರೂಪಿ ಪ್ರಾಧ್ಯಾಪಕನ ಬಾಳಸಂಗಾತಿಯಾಗಲು ಯಾವ ಹುಡುಗಿ ಬಯಸಲಿಕ್ಕಿಲ್ಲ? ಆದರೆ ಅವರೆಲ್ಲರನ್ನೂ ಬದಿಗೊತ್ತಿ ನಾನು ನಲಿನಿಯನ್ನು ಲಗ್ನವಾದಾಗ ನನ್ನ ಸ್ನೇಹಿತರನೇಕರ ಹುಬ್ಬುಗಳು ಆಶ್ಚರ್ಯದಿಂದ ಮೇಲೇರಿದ್ದವು. ಅವರಿಗೆಲ್ಲ 'ವ್ಯತಿಷಜತಿ ಪದಾರ್ಥಾನ್ ಆಂತರಃ ಕೋsಪಿ ಹೇತುಃ' ಎಂದು ಹೇಳಿ ನನ್ನ ಕೃತ್ಯವನ್ನು ಸಮರ್ಥಿಸಿಕೊಂಡಿದ್ದೆ. ಇದುವರೆಗೂ ನಲಿನಿಯೊಡನೆ ನನ್ನ ವೈವಾಹಿಕ ಜೀವನ ಸುಖಮಯವಾಗಿಯೇ ಸಾಗಿದೆ. ಹಾಗಿದ್ದರೂ ಇಂದೇಕೆ ನನ್ನ ಮನಸ್ಸು ಕಡಿವಾಣ ಕಿತ್ತ ಕುದುರೆಯಂತೆ ಹಾರಾಡುತ್ತಿದೆ?...ವಿಚಾರದೊಡನೆಯೇ ನನ್ನ ಹೆಜ್ಜೆಗಳು ಚುರುಕಾಗುತ್ತವೆ...

ಮನೆಗೆ ಬಂದಾಗ ಮಕ್ಕಳಿಬ್ಬರೂ ಮಲಗಿರುತ್ತಾರೆ. ನನ್ನವಳು ಯಾವುದೋ ಪುಸ್ತಕ ಹಿಡಿದು ನನ್ನ ನಿರೀಕ್ಷೆಯಲ್ಲೇ ಕುಳಿತಿರುತ್ತಾಳೆ. ಅವಳು ಹಚ್ಚಿಟ್ಟ ಊದುಬತ್ತಿಯ ಮಾದಕ ಪರಿಮಳ ದಿಂಪಾಗಿ ಮನೆಯ ತುಂಬೆಲ್ಲ ಪ್ರಸನ್ನ ಪ್ರಶಾಂತ ವಾತಾವರಣ ಪಸರಿಸಿದೆ. ನಾನು ಊಟ ಮುಗಿಸಿ ರೂಮಿಗೆ ಬಂದು ಮರುದಿನದ ಲೆಕ್ಚರಿನ ತಯಾರಿಯಲ್ಲಿ ತೊಡಗುತ್ತೇನೆ. ನಲಿನಿ ಅಡಿಗೆಮನೆ ತೊಳೆದು ಹಾಲಿನ ಲೋಟದೊಡನೆ ಕೋಣೆಗೆ ಬರುತ್ತಾಳೆ. ನಾನು ಪುಸ್ತಕಗಳನ್ನೆಲ್ಲ ಬದಿಗಿರಿಸಿ ಅವಳ ಕೈಯಿಂದ ಹಾಲಿನ ಲೋಟ ತೆಗೆದುಕೊಂಡು ಕುಡಿಯುತ್ತಿರುವಾಗ ಪಕ್ಕದ ಅಯ್ಯರನ ರೂಮಿನಿಂದ ರೆಕಾರ್ಡ್ ಪ್ಲೇಯರ್ 'ಮನಂ ಒರು ಕುರಂಗಮ್‌sss' ಎಂದು ಹಾಡುತ್ತಿರುವುದು ಕೇಳಿಸುತ್ತದೆ. ಬೆಳಿಗ್ಗೆಯಿಂದಲೂ ಮಂಗನಂತೆ ಹುಚ್ಚುಚ್ಚಾಗಿ ಕುಣಿದಾಡಿದ ನನ್ನ ಮನಸ್ಸು ಮಾತ್ರ ಈಗ ಮೌನವಾಗಿದೆ! ಇನ್ನೂ ನಿಂತೇ ಇದ್ದ ನಲಿನಿಯನ್ನು ಹತ್ತಿರಕ್ಕೆಳೆದುಕೊಂಡು ದೀಪವಾರಿಸುತ್ತೇನೆ. ✡

ನೆನಪಿನ
ನಿಧಿಯಿಂದ

ಎಂ. ಎಸ್. ಕಲ್ಯಾಣಸುಂದರಂ

# ಲಾಹೋರಿನ ಆ ಶಾಲೆಯಲ್ಲಿ . . . . .

ವರ್ಷಗಳಷ್ಟು ಹಿಂದೆಯೆ ನಾನು ದಕ್ಷಿಣ ಭಾರತೀಯರಿಗಾಗಿ ಲಾಹೋರಿನಲ್ಲಿ ಪ್ರಾಥಮಿಕ ಶಾಲೆಯೊಂದನ್ನು ತೆರೆದೆ. ಪ್ರಾರಂಭದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಮೂವತ್ತೆರಡರಷ್ಟಿತ್ತು. ಅವರ ವಯಸ್ಸು ಐದರಿಂದ ಹತ್ತು ವರ್ಷಗಳಷ್ಟು. ಪ್ರತಿ ತಿಂಗಳು ತಲಾ ಎರಡು ರೂಪಾಯಿ ಶುಲ್ಕವನ್ನು ವಿಧಿಸಲಾಗುತ್ತಿತ್ತು. ಹಣ ಕಡಿಮೆ ಬಿದ್ದಾಗ ಸ್ಕೂಲ್ ಕಮೀಟಿಯವರು ದಾನದ ರೂಪದಲ್ಲಿ ಕಡಿಮೆ ಬಿದ್ದ ಹಣವನ್ನು ಭರ್ತಿಮಾಡಿಕೊಳ್ಳುತ್ತಿದ್ದರು.

ಕೆಲವು ತಿಂಗಳುಗಳಲ್ಲೆ ಶಾಲೆ ಬೆಳೆಯಿತು. ಎಸ್. ಎಸ್. ಎಲ್. ಸಿ. ಪಾಸಾದ ದಕ್ಷಿಣದ ನಾಲ್ವರು ತರುಣರನ್ನು ನಮ್ಮ ಶಾಲೆಗೆ ಶಿಕ್ಷಕರಾಗಿ ಸೇರುವಂತೆ ಮನವೊಲಿಸಿದೆ. ನಮಗೆಲ್ಲರಿಗೂ ಮೂವತ್ತರಿಂದ ನಾಲ್ವತ್ತರಷ್ಟು ಸಂಬಳ ಬರುತ್ತಿತ್ತು. ಶಾಲೆಯ ಆವರಣದಲ್ಲೆ ವಾಸವಾಗಿರಲು ಅನುಮತಿ ದೊರೆತಿತ್ತು. ನಮ್ಮ ಅಡುಗೆಯನ್ನು ನಾವೇ ಮಾಡಿಕೊಳ್ಳುತ್ತಿದ್ದೆವು.

ದಕ್ಷಿಣದ ಆ ತರುಣರಿಗೆ ಟ್ಯೂಶನ್ ಕ್ಲಾಸುಗಳನ್ನೂ ದೊರಕಿಸಿಕೊಡಲಾಯಿತು. ಅವರು ಶಾರ್ಟ್‌ಹ್ಯಾಂಡನ್ನೂ ಟೈಪ್‌ರೈಟಿಂಗನ್ನೂ ಕಲಿತರಲ್ಲದೆ ಖಾಸಗಿಯಾಗಿ ಅಭ್ಯಾಸ ಮಾಡಿ ಹಿಂದಿ ಅಭ್ಯಸಿಸಿ ಲಾಹೋರ್ ವಿಶ್ವವಿದ್ಯಾನಿಲಯದಿಂದ ಬಿ. ಎ. ಪರೀಕ್ಷೆ ಮುಗಿಸಿದರು. ಅವರೆಲ್ಲರೂ ಈಗ ಸುಖಮಯವಾದ ಜೀವನವನ್ನು ನಡೆಸುತ್ತಿದ್ದಾರೆ.

ಮೊದಲಿನ ಎರಡು ಶ್ರೇಣಿಗಳನ್ನು ಹೊರತುಪಡಿಸಿ ಉಳಿದೆಲ್ಲ ಶ್ರೇಣಿಗಳ ವಿದ್ಯಾರ್ಥಿಗಳಿಗೆ ಪಾಠದ ತಿರುಳನ್ನು ಸ್ವಲ್ಪದರಲ್ಲಿ ಹೇಳಿ, ಅನಂತರ ಬಹಳ ಯೋಚಿಸಿ ತಯಾರಿಸಿದ ಪ್ರಶ್ನಾವಳಿಯನ್ನು ಉತ್ತರಿಸಲು ಹೇಳುತ್ತಿದ್ದೆವು. ಅವರು ಚಿಕ್ಕ ಬಿಳಿ ರಟ್ಟುಗಳ ಮೇಲೆ ಉತ್ತರ ಬರೆಯುತ್ತಿದ್ದರು. ಸಂಪೂರ್ಣವಾಗಿ ಸರಿಯಾದ ಉತ್ತರ ಬಂದ ಮೇಲೆ ವಿದ್ಯಾರ್ಥಿಗಳು ರಟ್ಟಿನ ಮೇಲೆ ತಾರೀಖು ಬರೆದು ತಮ್ಮ ತಮ್ಮ ದಾಖಲೆ ಪಟ್ಟಿ (Record sheet)ಯಲ್ಲಿ ಆ ಸಂಗತಿಯನ್ನು

‘ಹಿಂದು’ವಿನ ಕೃಪೆ

ದಾಖಲು ಮಾಡುತ್ತಿದ್ದರು. ಪ್ರಶ್ನಾವಳಿಯನ್ನು ಇಂತಿಷ್ಟೇ ಅವಧಿಯಲ್ಲಿ ಉತ್ತರಿಸಬೇಕೆಂಬ ನಿರ್ಬಂಧವಿರಲಿಲ್ಲ. ಅವರು ನಮಗೆ ಬೇಕಾದಾಗ ಉತ್ತರಿಸಬಹುದಿತ್ತು. ದಾಖಲೆ ಪಟ್ಟಿಯ ಮೇಲಿನ ತಾರೀಖಿನಿಂದ ಪ್ರಗತಿಯ ಗತಿ ತಿಳಿಯು ತ್ತಿತ್ತು. ವಿದ್ಯಾರ್ಥಿಗಳ ಲಿಖಿತ ಉತ್ತರಗಳು ನೂರಕ್ಕೆ ನೂರರಷ್ಟು ಸರಿಯಾಗಿರಬೇಕೆಂದು ನಾವೆಲ್ಲ ಅಪೇಕ್ಷಿಸುತ್ತಿದ್ದೆವು. ಮೊಲ ಮತ್ತು ಆಮೆಯ ಕಥೆ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತೇ ಇದೆ. ಕಥೆಯಲ್ಲಿ ಬರುವ ಮೊಲದ ಪ್ರವೃತ್ತಿಯುಳ್ಳ ಜನ ವಾಚನಾಲಯದಲ್ಲಿ ಪುಸ್ತಕಗಳನ್ನು ಓದುತ್ತಲೋ ಇತರ ವಿದ್ಯಾರ್ಥಿ ಗಳಿಗೆ ನೆರವಾಗುತ್ತಲೋ (ಹಿರಿಯ ವಿದಾರ್ಥಿ-ಗಳು—ವಿಶೇಷತಃ ವಿದ್ಯಾರ್ಥಿನಿಯರು—ಕಿರಿಯ ವಿದ್ಯಾರ್ಥಿಗಳಿಗೆ ನೆರವಾಗುವ ಯೋಜನೆಯಿತ್ತು.) ಆಟವಾಡುತ್ತಲೋ ಕಾಲ ಕಳೆಯುತ್ತಿದ್ದರು. ಆಟವಾಡುವ ಕೆಲ ಹುಡುಗರು ಅಭ್ಯಾಸ ಮಾಡುವ ಹುಡುಗರ ಗೋಜಿಗೆ ಹೋಗುತ್ತಿದ್ದ ಹಾಗೆ ನನಗೆ ಕಾಣಲಿಲ್ಲ. ಮತ್ತು ಇಷ್ಟು ಸ್ವಾತಂತ್ರ್ಯ ಕೊಟ್ಟಿದ್ದರಿಂದ ಅವರಲ್ಲಿ ಅಶಿಸ್ತಾ-ಗಲಿ ಸ್ವೇಚ್ಛಾಚಾರವಾಗಲಿ ಬೆಳೆಯಲಿಲ್ಲ.

ಬೇರೆ ಬೇರೆ ಪ್ರಕಾಶಕರು ಪ್ರಕಟಿಸಿದ ವಾಚನ ಪುಸ್ತಕಗಳೇ ಬಹುತರವಾಗಿ ವಾಚನಾಲಯದಲ್ಲಿ ದ್ದವು. ಒಂದು ವಿಷಯದ ಮೇಲೆ ಒಂದೇ ಮಟ್ಟಕ್ಕೆ ಬರುವ ಅನೇಕ ಪುಸ್ತಕಗಳು ವಿದ್ಯಾರ್ಥಿ ಗಳಿಗೆ ಅಲ್ಲಿ ದೊರೆಯುತ್ತಿದ್ದವಾದ್ದರಿಂದ ಬೇರೆ ಬೇರೆ ದೃಷ್ಟಿಕೋನಗಳಿಂದ ಬರೆದ ಪುಸ್ತಕಗಳ ನ್ನೋದುವ ಸೌಲಭ್ಯ ಅವರಿಗಿತ್ತು.

ಅದೊಂದು ಆನಂದಮಯವಾದ, ಫಲಪ್ರದ ವಾದ ಶಾಲೆಯಾಗಿತ್ತು. ಮೂರುವರೆ ನಾಲ್ಕು ವರ್ಷಗಳ ಬಾಲಕರೂ ಈ ಶಾಲೆಗೆ ಕಳಿಸುವಂತೆ ತಂದೆ ತಾಯಿಗಳಿಗೆ ದುಂಬಾಲು ಬೀಳುತ್ತಿ ದ್ದರು.

ಮೊದಲೆ ಹೇಳಿದಂತೆ ಅಲ್ಲಿ ಪಾಠ ಕಲಿಸುವುದ ಕ್ಕಿಂತ ವಿದ್ಯಾರ್ಥಿಗಳಿಗೆ ಸ್ವತಂತ್ರವಾಗಿ ವಿಚಾರ ಮಾಡಲು ಸಹಾಯ ಮಾಡುವುದಕ್ಕೆ ಹೆಚ್ಚು ಗಮನ ಕೊಡಲಾಗುತ್ತಿತ್ತು. ವಿದ್ಯಾರ್ಥಿಗಳು ಸಂದರ್ಭ ಗ್ರಂಥಗಳಿಂದಲೂ (Reference books) ಚಿತ್ರಗಳಿಂದಲೂ ಚಾರ್ಟುಗಳಿಂದಲೂ ಮಾಹಿತಿಯನ್ನು ಸಂಗ್ರಹಿಸುತ್ತಿದ್ದರು. ಪಂಜಾಬ ಪಬ್ಲಿಕ್ ಲೈಬ್ರರಿ ತಿಂಗಳಿಗೆ ಹತ್ತು ಪುಸ್ತಕಗಳು ಮೀರದಷ್ಟು ಎರವಲು ಕೊಡುತ್ತಿತ್ತು. ಆಗಾಗ ನಾನು ಅಲ್ಲಿಂದಲೂ ಪುಸ್ತಕಗಳನ್ನು ಪಡೆಯು-ತ್ತಿದ್ದೆ. ವಿದ್ಯಾರ್ಥಿಗಳು ಬಹು ಜಾಣ್ಮೆಯಿಂದ, ಪರಿಶ್ರಮದಿಂದ, ಆನಂದದಿಂದ ಜ್ಞಾನಸಂಗ್ರಹ ಮಾಡಿಕೊಳ್ಳುತ್ತಿದ್ದರು. ಅವರು ಗುಂಪಾಗಿ ಸಾಮರಸ್ಯದಿಂದ ಕೆಲಸ ಮಾಡುವುದಕ್ಕೆ ನಾವು ಅಸ್ತು ಎಂದಿದ್ದೆವು.

ಇಂಗ್ಲೀಷು ಕಲಿಸಲು ಎರಡು ವಿಧಾನಗಳನ್ನು ಉಪಯೋಗಿಸುತ್ತಿದ್ದೆ. ಲಘುವಾದ ವಿಷಯವನ್ನು ವೇಗವಾಗಿಯೂ ಕ್ಲಿಷ್ಟವಾದದ್ದನ್ನು ಸಾವಕಾಶ ವಾಗಿಯೂ ಕ್ರಮಬದ್ಧವಾಗಿಯೂ ಓದುತ್ತಿದ್ದೆ. ಹೀಗೆ ಪಠ್ಯೇತರ ಪುಸ್ತಕದ ಯಾವುದೇ ಭಾಗವನ್ನು ಓದುತ್ತಿದ್ದೆ. ಒಂದು ಸಲ ಓದಿದರೂ ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರಿಸುವ ಹಾಗೆ ವಿದ್ಯಾರ್ಥಿಗಳಿಗೆ ತರಬೇತು ಕೊಟ್ಟಿದ್ದೆ. ವ್ಯಾಕರಣ ಹಾಗೂ ಪ್ರಬಂಧಗಳಿಗಾಗಿ ವಿದೇಶಗಳಲ್ಲಿ ಪ್ರಕಟ ವಾದ ಒಳ್ಳೇ ಪುಸ್ತಕಗಳನ್ನು ಅವರಿಗೆ ಎರವಲು ಕೊಡುತ್ತಿದ್ದೆ.

ಗಣಿತವನ್ನು ಕಲಿಸುವಾಗ, (೧) ಹೇಳಬೇಕಾದ ದ್ದನ್ನು ಸಾಧ್ಯವಾದಷ್ಟು ಸ್ವಲ್ಪದರಲ್ಲೇ ಸ್ಪಷ್ಟ ವಾಗಿ ಹೇಳುತ್ತಿದ್ದೆ; (೨) ಸಮಸ್ಯೆಗಳನ್ನು ಕೊಡುವುದಕ್ಕಿಂತ ಹೆಚ್ಚಾಗಿ ಗಣಿತದ ಮೂಲ ತತ್ವಗಳನ್ನು ಹೇಳಿಕೊಡಲು ಹೆಚ್ಚು ಸಮಯ ವನ್ನು ವ್ಯಯಿಸುತ್ತಿದ್ದೆ. ಮಗ್ಗಿಗಳನ್ನು ಅವರಿಗೆ ಕೇವಲ ಹತ್ತರ ವರೆಗೆ (೯×೯) ಕಲಿಸಿದೆ.

ಬಾಲಕರಿಗೆ ಭಾಗಾಕಾರ ಕಠಿಣವೆನಿಸುತ್ತದೆ. ಆದ್ದರಿಂದ ಎರಡೇ ಸ್ಥಾನಗಳಿಂದೊಡಗೂಡಿದ ಭಾಜಕವುಳ್ಳ ಲೆಕ್ಕಗಳನ್ನು ಕೊಟ್ಟರೆ ಸಾಕು ಎಂದು ನನಗನಿಸುತ್ತದೆ. ಗಣಿತ ಕಲಿಸಲು

ನಾನು ಉಪಯೋಗಿಸುತ್ತಿದ್ದ ವಿಧಾನ ಇದು: ಮೂವತ್ತೇಳರಿಂದ ಒಂದು ಸಂಖ್ಯೆಯನ್ನು ಭಾಗಿಸಬೇಕಾಗಿದೆ ಎಂದಿಟ್ಟುಕೊಳ್ಳಿ. ಆಗ ನಾನು ೩೭ × ೧ ರಿಂದ ೩೭ × ೯ರ ಗುಣಾಕಾರಗಳನ್ನು ಬರೆದು ಪ್ರತಿಯೊಂದು ಹಂತದಲ್ಲಿಯೂ ಆ ಅಂಕಿ, ಕೊಟ್ಟ ಸಂಖ್ಯೆಗೆ ಸರಿಹೋಗುತ್ತದೆಯೆ ಎಂಬುದನ್ನು ನೋಡಲು ಹೇಳುತ್ತಿದ್ದೆ. ೫ ಹಾಗೂ ೩ರ ಲಘುತಮ ಸಾಧಾರಣ ಅಪವರ್ತನವನ್ನು ತೆಗೆಯಬೇಕಾಗಿದೆಯೆಂದಿಟ್ಟುಕೊಳ್ಳಿ. ಆಗ ದರ್ಜಿಗಳು ಉಪಯೋಗಿಸುವಂಥ ಎರಡು ಅಳತೆ ಪಟ್ಟಿಗಳನ್ನು ತೆಗೆದುಕೊಂಡು ಬಂದು, ಒಂದು ಪಟ್ಟಿಯಿಂದ ೩, ೬, ೯, ಮುಂತಾಗಿ ಅಪವರ್ತನಗಳನ್ನು ಓದಿಸುತ್ತಾ ಹೋಗುತ್ತಿದ್ದೆ. ಅನಂತರ ಇನ್ನೊಂದು ಟೇಪಿನಿಂದ ೫, ೧೦, ೧೫ ಮುಂತಾಗಿ ಅಪವರ್ತನಗಳನ್ನು ಓದಿಸುತ್ತಿದ್ದೆ. ಹೀಗಾದಾಗ ೬೦, ೪೫, ೩೦ ಹಾಗು ೧೫ ಇವು ಸಾಮಾನ್ಯ ಅಪವರ್ತಗಳೆಂಬುದು ಬಾಲಕರಿಗೆ ಕೂಡಲೆ ತಿಳಿದುಹೋಗುತ್ತಿತ್ತು. ಇವುಗಳಲ್ಲಿ ಎಲ್ಲಕ್ಕಿಂತ ಸಣ್ಣ ಸಂಖ್ಯೆಯಾದ ೧೫ ಲಘುತಮ ಸಾಧಾರಣ ಅಪವರ್ತನವೆಂದು ಅವರಿಗೆ ಹೇಳಿಕೊಡುತ್ತಿದ್ದೆ. ಅದೇ ರೀತಿ ನಾಲ್ಕು ಮತ್ತು ಆರರ ಬಗ್ಗೆ ವಿಚಾರಿಸುವಾಗ ಅವುಗಳ ಸಾಮಾನ್ಯ ಅಪವರ್ತನಗಳು ೬೦, ೪೮, ೩೬, ೨೪ ಹಾಗೂ ೧೨ ಆಗುತ್ತವೆ. ಮತ್ತು ಲ. ಸಾ. ಅ. ೧೨ ಆಗುತ್ತದೆ. ಹಿಂದಿನ ಲೆಕ್ಕದಲ್ಲಿ ಲ. ಸಾ. ಅ. ೧೫ (೫ × ೩) ಆದಹಾಗೆ ಈ ಲೆಕ್ಕದಲ್ಲಿ ೨೪ (೬ × ೪) ಏಕೆ ಆಗಲಿಲ್ಲವೆಂಬುದು ಬಾಲಕರಿಗೆ ಬೇಗನೆ ಹೊಳೆಯುತ್ತದೆ. ಈ ವಿಧಾನದಿಂದ ಅವರಿಗೆ ಮ. ಸಾ. ಅ. (H. C. F.) ಕಲಿಸಲೂ ಸಹಾಯವಾಗುತ್ತಿತ್ತು.

ಭೂಗೋಲದ ನನ್ನ ಮೊದಲ ಪಾಠ, ಲಾಹೋರಿನಿಂದ ಮದ್ರಾಸಿಗೆ ಹೋಗಿ ಬಂದ ವಿದ್ಯಾರ್ಥಿಗಳ ಸ್ವಂತ ಅನುಭವಗಳನ್ನು ಆಧರಿಸಿತ್ತು. ವಿದ್ಯಾರ್ಥಿಗಳೂ ನಾನೂ ಸೇರಿ ಮಣ್ಣಿನಿಂದ ಒಂದು ಕಚ್ಚಾ ರಿಲೀಫ್ ನಕಾಶೆಯನ್ನು ತಯಾರಿಸಿದ್ದೆವು. ಇಂಥಾ ವಿಷಯಗಳಲ್ಲಿ ವಿದ್ಯಾರ್ಥಿಗಳು ಆಸಕ್ತಿ ತೋರಿಸುತ್ತಿದ್ದುದರಿಂದ ಏರಪಡಿಸುವವರ ಪೀರಿಯಡ್ಡಿನಿಂದ ವೇಳೆಯನ್ನು 'ಎರವಲು' ಪಡೆಯಲು ನನಗೇನೂ ಸಂಕೋಚವಾಗುತ್ತಿರಲಿಲ್ಲ. ೧೯೩೬ರಲ್ಲಿ ನಾನು ಈ ಮೊದಲ ಪಾಠದ ಬಗ್ಗೆ 'ಎಜ್ಯುಕೇಶನಲ್ ರಿವ್ಯೂ'ನಲ್ಲಿ ಒಂದು ವರದಿಯನ್ನು (ಅದು ಸಂವಾದರೂಪಿಯಾಗಿತ್ತು) ಪ್ರಕಟಿಸಿದೆ.

ಕೆಲ ವಿಷಯಗಳು ಸಪ್ಪೆಯಾಗಿರುತ್ತವೆಂದು ವಿದ್ಯಾರ್ಥಿಗಳಿಗೆ ಅನಿಸುತ್ತಲೇ ಇರಲಿಲ್ಲ. ಭೌತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ ಮುಂತಾದವುಗಳನ್ನು ಕಲಿಸುವಾಗ ವಿದ್ಯಾರ್ಥಿಗಳೊಂದಿಗೆ ಕೂಡಿಕೊಂಡು ಪ್ರಯೋಗಗಳನ್ನು ಮಾಡುತ್ತಿದ್ದೆವು. ಆಗ ನನ್ನ ಹಾಗೂ ವಿದ್ಯಾರ್ಥಿಗಳ ಬಳಿಯಿರುವ ನಿರುಪಯುಕ್ತ ಪೆಟ್ಟಿಗೆಗಳನ್ನು ಒಡೆದು ಉಪಯುಕ್ತ ಸಾಧನಗಳವರೆಗೆ ಸಿಕ್ಕಿದ್ದೆಲ್ಲ

---

ಗುರು-ಶಿಷ್ಯ



"ಇದು ನಿಮ್ಮಿಂದ್ಲೇ ಆದ ಗಾಯ ಸಾರ್... ಬೊಗಳುವ ನಾಯಿ ಕಚ್ಚೊಲ್ಲ ಅಂತ ಹೇಳಿದ್ರಿ ಮತ್ತೆ......ಕಚ್ಚಿತ್ತು..."

ವನ್ನೂ ಉಪಯೋಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆವು.

ಮೇಲಿನ ಕ್ಲಾಸಿನ ವಿದ್ಯಾರ್ಥಿಗಳೊಂದಿಗೆ ಆಗಾಗ ಪ್ರಾಣಿಸಂಗ್ರಹಾಲಯ, ಸಸ್ಯೋದ್ಯಾನ, ಬ್ಯಾಂಕು, ಪ್ರಾಚ್ಯ ವಸ್ತುಸಂಗ್ರಹಾಲಯ, ಪೋಸ್ಟ್ ಆಫೀಸು, ಫ್ಯಾಕ್ಟರಿಗಳು, ಶೈಕ್ಷಣಿಕ ಪ್ರದರ್ಶನಗಳು ಮುಂತಾದವು ಇದ್ದಲ್ಲಿಗೆ ಹೋಗುತ್ತಿದ್ದೆ ಹಾಗೂ ವಿದ್ಯಾರ್ಥಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದೆ.

ಮೂವತ್ತು ವರ್ಷಗಳ ಹಿಂದೆ ಲಾಹೋರಿನಲ್ಲಿ ಆ್ಯಂಗ್ಲೋ-ತಮಿಳು ಪ್ರೈಮರಿ ಸ್ಕೂಲು ಈ ರೀತಿಯಾಗಿ ನಡೆಯಿತು. ಲಾಹೋರಿನಲ್ಲಿ ನಡೆದ ಶೈಕ್ಷಣಿಕ ಪರಿಷತ್ತುಗಳಲ್ಲಿ ಭಾಗವಹಿಸಲು ದಕ್ಷಿಣ ಭಾರತದಿಂದ ಬಂದ ಅನೇಕ ಜನ ತಜ್ಞರು ಈ ಶಾಲೆಯ ಎಷ್ಟೋ ವೈಶಿಷ್ಟ್ಯಗಳನ್ನು ಮೆಚ್ಚಿದರು. ಅವುಗಳಲ್ಲಿ, ಪರೀಕ್ಷೆಗಳಾಗಲಿ ಮಾರ್ಕುಗಳಾಗಲಿ ಇಲ್ಲದಿರುವುದು, ತರಗತಿಗಳಿರದೆ ಪ್ರತಿಯೊಂದು ವಿಷಯವನ್ನೂ ವಿವಿಧ ಶ್ರೇಣಿಗಳಲ್ಲಿ ವಿಭಾಗಿಸಿರುವುದು, ಆಯಾ ವಿಷಯದ ಪುಸ್ತಕ ಮುಗಿದ ನಂತರ ಅದಕ್ಕಿಂತ ಕಠಿಣವಾದ ಪುಸ್ತಕಗಳನ್ನು ಓದಿಸುವುದು ಮುಂತಾದ ಅಂಶಗಳು ಪ್ರಮುಖವಾಗಿದ್ದವು.

ಈ ಬಗೆಯ ರಚನಾತ್ಮಕ ಹಾಗೂ ಕೆಲ ಮಟ್ಟಿಗೆ ಕ್ರಾಂತಿಕಾರಕವಾದ ಶಿಕ್ಷಣ ಪದ್ಧತಿಯಿಂದಾಗಿ ವಿದ್ಯಾರ್ಥಿಗಳು ನಗುನಗುತ್ತಾ ವಿದ್ಯಾರ್ಜನೆ ಮಾಡುತ್ತಿದ್ದರು. ಅಲ್ಲದೆ, ಅವರು ಹನ್ನೆರಡು ಹದಿಮೂರು ವರ್ಷದವರಾಗುವ ಹೊತ್ತಿಗೆ ಸ್ಥಳೀಯ ಪ್ರೌಢಶಾಲೆಗಳಲ್ಲಿ ಪ್ರಿ-ಮ್ಯಾಟ್ರಿಕ್ಯುಲೇಶನ್ ಕ್ಲಾಸಿಗೆ ಸೇರ್ಪಡೆಗೊಳ್ಳುವ ಸಾಮರ್ಥ್ಯ ಬಂದಿರುತ್ತಿತ್ತು. ಆಗ ಆ ವಿದ್ಯಾರ್ಥಿಗಳಿಗೆ ಪರೀಕ್ಷಾ ಪದ್ಧತಿಯನ್ನಾಧರಿಸಿದ ಶಿಕ್ಷಣವನ್ನು ಎರಡು ತಿಂಗಳ ಮಟ್ಟಿಗೆ ಕೊಟ್ಟರೆ ಸಾಕಾಗುತ್ತಿತ್ತು.

ಇದು ನಡೆದದ್ದು ಲಾಹೋರಿನಲ್ಲಿ ೧೯೩೫-೧೯೪೧ ರ ನಡುವೆ. ಅಲ್ಲಿ ಇನ್ನೂ ಅನೇಕ ಸ್ಮರಣೀಯ ಸಂಗತಿಗಳು ನಡೆದವು. ಎಲ್ಲಿ ಬೇಕಾದರೂ ಈ ಬಗೆಯ ಪರಿಣಾಮಗಳು ಸಾಧ್ಯ—ವಿಶೇಷವಾಗಿ ದೂರ ದೂರದ ಔದ್ಯಮಿಕ ನವನಗರಗಳಲ್ಲಿ. ಸರಕಾರಿ ಧನಸಹಾಯ ಮನ್ನಣೆ ಬೇಕಾದರೆ ಈ ವಿಧಾನದಲ್ಲಿ ಕೆಲ ಅನಿಷ್ಟ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾದೀತು. ಆ್ಯಂಗ್ಲೋ-ತಮಿಳು ಪ್ರೈಮರಿ ಸ್ಕೂಲಿನ ಹಾಗೆ ಇತರ ಶಾಲೆಗಳು ಸರಕಾರೀ ಮನ್ನಣೆ ಹಾಗೂ ಸಹಾಯಧನಗಳ ಪಾಶದಿಂದ ಮುಕ್ತವಾಗಿದ್ದರೆ ಅಲ್ಲಿನ ಶಿಕ್ಷಕರು ಸತ್ವಯುತವಾದ, ಒಳ್ಳೆ ನಾಗರಿಕರನ್ನು ನಿರ್ಮಿಸುವ ಶಿಕ್ಷಣವನ್ನು ಕೊಡಬಲ್ಲರು.

ನನಗೆ ಈ ವರೆಗೆ ಸಿಕ್ಕಿದ ಹಳೆ ವಿದ್ಯಾರ್ಥಿಗಳೆಲ್ಲ ಒಳ್ಳೆ ಜೀವನ ನಡೆಸುತ್ತಿದ್ದಾರೆ, ನನ್ನನ್ನೂ ನನ್ನ ಶಾಲೆಯನ್ನೂ ತುಂಬಾ ಪ್ರೇಮದಿಂದ ಸ್ಮರಿಸಿಕೊಳ್ಳುತ್ತಾರೆ. ಶಾಲಾ ಶಿಕ್ಷಕನಿಗೆ ಅವನ ಜೀವನದಲ್ಲಿ ದೊರೆಯುವ ದೊಡ್ಡ ಪ್ರತಿಫಲವೆಂದರೆ ಇದೇ. ಲಾಹೋರಿನ ಆ ಶಾಲೆ ಜನಜೀವನಕ್ಕೆ ಅತೀತವಾದ ದ್ವೀಪದಂತಿರಲಿಲ್ಲ; ಆದರೆ ಅದು ಸಮಾಜದ ಒಂದು ಅಂಗವೇ ಆಗಿತ್ತು. ✫



ಬದುಕುವ ಸಲುವಾಗಿ ಲೇಖಕ ಹಣ ಗಳಿಸಲೇಬೇಕು ನಿಜ; ಆದರೆ ಹಣ ಗಳಿಸುವುದಕ್ಕಾಗಿಯೇ ಆತ ಬರೆಯಕೂಡದು. ಲೇಖಕನಾದವನಿಗೆ ತನ್ನ ಕೆಲಸ ಎಂದೂ ಸಾಧನವಲ್ಲ; ಅದೇ ಅವನ ಸಾಧ್ಯ.

— ಕಾರ್ಲ್ ಮಾರ್ಕ್ಸ್

# ನಗೆಮಲ್ಲಿಗೆ

ದೊಡ್ಡ ಹೋಟಲಿನಲ್ಲಿ ಊಟ ಮಾಡುತ್ತಾ ಕುಳಿತಿದ್ದ ಆಸಾಮಿಯೊಬ್ಬ ಸಾಂಬಾರಿನಲ್ಲಿ ಸಿಕ್ಕಿದ ಶರಟಿನ (ಮೇಲಂಗಿ) ಗುಂಡಿಯನ್ನು ಕೈಯಲ್ಲಿ ಹಿಡಿದುಕೊಂಡು, "ಏ ಮಾಣಿ," ಎಂದು ಸಿಟ್ಟಿನಿಂದ ಮಾಣಿಯನ್ನು ಕರೆದು, "ಏನಯ್ಯಾ ಇದು ಸಾಂಬಾರ್‌ನಲ್ಲಿ ಗುಂಡಿ?" ಎಂದು ಗುಡುಗಿದ.

"ನಿನ್ನೆಯಿಂದ ಅದನ್ನೇ ಹುಡುಕ್ತಾ ಇದ್ದೆ ಸಾರ್, ಕೊಡಿ," ಎಂದು ಮಾಣಿ ಕೈ-ನೀಡಿಯೇ ಬಿಟ್ಟ.

—ಸಂಗ್ರಹ: ಜಿ. ಜಯಪ್ರಕಾಶ

*

ಪುಸ್ತಕಭಂಡಾರದ ಬಳಿ ಕೇಳಿಬಂದ ಸಂಭಾಷಣೆ.

ಈತ: ರಾಯರೇ, ರಾಘವಾಂಕನ ಹರಿಶ್ಚಂದ್ರ ಕಾವ್ಯ ಓದಿದಿರಾ? ಎಂಥ ಮಹಾನುಭಾವ ಆ ಹರಿಶ್ಚಂದ್ರ? ಇಡೀ ರಾಜ್ಯ, ಸರ್ವಸ್ವ ಹೋಗುವುದೆಂದರೂ ಸತ್ಯವನ್ನು ಬಿಡಲಿಲ್ಲವಲ್ಲಾ.

ಆತ: ಸರಿ, ಆ ವಿಷಯ ಈಗೇಕೆ ಬಂತು?

ಈತ: ನೋಡಿ, ಲೈಬ್ರರಿಯಿಂದ ಹರಿಶ್ಚಂದ್ರ ಕಾವ್ಯ ತೆಗೆದುಕೊಂಡು ಹೋಗಿದ್ದೆ. ನಾನು ಓದುವುದು ಮುಗಿಯುತ್ತಿದ್ದ ಹಾಗೇ ಪಕ್ಕದ ಮನೆಯವರು ತೆಗೆದುಕೊಂಡು ಹೋದರು. ನನಗೂ ಮರೆತೇ ಹೋಯಿತು. ಜ್ಞಾಪಿಸಿಕೊಂಡು ಕೇಳಿದಾಗ 'ನಾನು ತೆಗೆದುಕೊಂಡೇ ಇಲ್ಲ' ಎಂದು ಸಾಧಿಸಿದರು.

ಆತ: ಛೇ, ಹೀಗೆ ಸುಳ್ಳು ಹೇಳುವುದೇ? ಸತ್ಯ ಹರಿಶ್ಚಂದ್ರನ ಕಥೆ ಓದಿ ಏನು ಸಾರ್ಥಕ?

ಈತ: ನೋಡಿ ಮತ್ತೆ, ಅವರ ಪುಟ್ಟ ಮಗಳು, 'ಈ ಪುಸ್ತಕ ಏನಪ್ಪಾ'-ಎನ್ನುತ್ತಾ ಒಳಗಿನಿಂದ ತಂದೇಬಿಟ್ಟಳು. ಆದ್ದರಿಂದ ಸಿಕ್ಕಿತು.

ಆತ: ಒಳ್ಳೆಯದಾಯಿತಲ್ಲಾ.

ಈತ: ತಡವಾದ್ದರಿಂದ ಈಗ ಲೈಬ್ರರಿಗೆ ೧ ರೂ. ೫೦ ಪೈಸೆ ದಂಡ ತೆರಬೇಕಲ್ಲಾ ಅಂತ ಯೋಚನೆ ಆಗಿದೆ.

ಆತ: ಅದಕ್ಕೇನೂ ಯೋಚಿಸಬೇಡಿ. ಕ್ಲಾರ್ಕ್ ನನಗೆ ಗುರುತು. ಒಂದು ಕಾಫಿ ಕೊಡಿಸಿದರೆ ಹಳೆಯ ತಾರೀಖಿಗೆ ಪಾವತಿ ಹಾಕಿಕೊಳ್ಳುತ್ತಾನೆ.

ಈತ: ತುಂಬಾ ಥ್ಯಾಂಕ್ಸ್, ಸಾರ್.

ಸಂಗ್ರಹ: ನಾಗರಾಜ

*

ಹುಚ್ಚಾಸ್ಪತ್ರೆಯಲ್ಲಿಯ ಹುಚ್ಚರೆಲ್ಲರೂ ಕೂಡಿ ತಮ್ಮದೇ ಆದ ಒಂದು ಮನೆಯನ್ನು ಕಟ್ಟಿಕೊಳ್ಳಲು ನಿರ್ಧರಿಸಿದರು. ಒಂದು ದಿನ ಅವರಲ್ಲಿ ನಾಲ್ಕು ಜನರು ಚಚ್ಚೌಕಾಕೃತಿಯಲ್ಲಿ ನಿಂತರು. ಅನಂತರ ಅವರು ಒಬ್ಬರ ಮೇಲೆ ಒಬ್ಬೊಬ್ಬರಾಗಿ ನಿಲ್ಲುತ್ತ ಅಂದು ಗೋಪುರಾಕೃತಿಯ 'ಮನೆ'ಯನ್ನು ತಯಾರಿ



"...ಕಳ್ಳರ ಕಥೆಗಳನ್ನು ಬರೆದೂ ಬರೆದೂ ಚಂದಾಗಿ ಸಂಪಾದ್ನೆ ಮಾಡಿದ್ದೀರಂತಲ್ರೀ. ಅದಕ್ಕೆ ಬಂದಿದ್ದೀವಿ..."

ಸಿಯೇಬಿಟ್ಟರು.

ಅಷ್ಟರಲ್ಲಿ ಅಲ್ಲಿಗೆ ಬಂದ ಜೇಲರ್ ಇವರ ಸಾಹಸವನ್ನು ನೋಡಿ, "ಇದೆಲ್ಲ ಏನು ನಡೆದಿದೆ?" ಎಂದು ಕೇಳಿದ. ತಮ್ಮ ಮನೆಯ ಕಟ್ಟಡ ಕಾರ್ಯದಲ್ಲಿ ಮಗ್ನರಾಗಿದ್ದ ಅವರಾರೂ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ. ಸಿಟ್ಟಿಗೆದ್ದ ಆ ಅಧಿಕಾರಿ ಕೆಳಗಡೆ ನಿಂತಿದ್ದ ಹುಚ್ಚನೊಬ್ಬನಿಗೆ ಚೆನ್ನಾಗಿ ಎರಡು ಬಾರಿಸಿದ. ಪೂರ್ತಿ ಮೇಲೆ ನಿಂತ ಹುಚ್ಚ ಕೂಗಿಕೊಂಡ: "ನೋಡಿರೋ, ಯಾರೋ ನಮ್ಮ ಮನೆಯ ಬಾಗಿಲನ್ನು ತಟ್ಟುತ್ತಿದ್ದಾರೆ."

*

ಚಿಕ್ಕ ಬಾಲಕನೊಬ್ಬ ಅಳುತ್ತ ಬಂದು ತಂದೆಯ ಹತ್ತಿರ ದೂರಿದ: "ಪಕ್ಕದ ಮನೆಯಲ್ಲಿ ವಕೀಲರಿದ್ದಾರಲ್ಲಾ, ಅವರ ಏಳು ಮಕ್ಕಳು ಕೂಡಿಕೊಂಡು ನನ್ನನ್ನು ಹೊಡೆದರು."

ತಂದೆ ಹೇಳಿದ: "ಅವರ ಜೊತೆ ನೀನೇನಾದರೂ ಜಗಳ ಮಾಡಿರಬೇಕು, ಅದಕ್ಕೇ ಅವರು ಹಾಗೆ ಮಾಡಿದ್ದಾರೆ, ನಿನ್ನದೇ ತಪ್ಪಿರಬೇಕು."

ಸಿಟ್ಟಿಗೆದ್ದ ಬಾಲಕ, "ತಪ್ಪು ನನ್ನದಲ್ಲ, ತಪ್ಪು ನಿಮ್ಮದೇ!" ಎಂದ.

ಆಶ್ಚರ್ಯಗೊಂಡ ತಂದೆ ಕೇಳಿದ: "ನೀನು ಪೆಟ್ಟು ತಿಂದು ಬಂದರೆ ತಪ್ಪು ನನ್ನದು ಹೇಗೆ ಆಗುತ್ತದೆ?"

"ಒಂದು ವೇಳೆ ನೀವು ಕುಟುಂಬ ಯೋಜನೆ ಮಾಡಿಸಿರದಿದ್ದರೆ ಇಂದು ನಾವೂ ಏಳು ಜನಗಳಿರುತ್ತಿದ್ದೆವು. ಆಗ ಆ ವಕೀಲರ ಮಕ್ಕಳನ್ನು ನಾವು ಸುಲಭವಾಗಿ ಎದುರಿಸಬಹುದಿತ್ತು. ತಪ್ಪು ನಿಮ್ಮದೇ ಅಲ್ಲವೇ?" ಮಗರಾಯ ಉತ್ತರಿಸಿದ.

*

ತನ್ನ ಕತ್ತೆ—ಬಹುಶಃ ಹೆಣ್ಣು ಕತ್ತೆ ಇರಬೇಕು—ಯಾವುದೋ ತೊಂದರೆಯಿಂದ ಬಳಲುತ್ತಿರುವುದನ್ನು ಗಮನಿಸಿದ ಅಗಸ. ಅದನ್ನು ಪಶುವೈದ್ಯನ ಬಳಿಗೆ ತೆಗೆದುಕೊಂಡು ಹೋದ. ಪರೀಕ್ಷಿಸಲು ಬಂದ ವೈದ್ಯನನ್ನು ಕಂಡೊಡನೆ ಅದೇನಾಯಿತೋ ಅದಕ್ಕೆ, ಆತನ ಮೈಯನ್ನೊಮ್ಮೆ ಮೂಸಿ, ನಂತರ ಆತನ ಕೈಯನ್ನು ಪ್ರೀತಿಯಿಂದೆಂಬಂತೆ ತನ್ನ ನಾಲಿಗೆಯಿಂದ ಸವರತೊಡಗಿತು. ದೂರ ನಿಂತು ಇದನ್ನು ನೋಡುತ್ತಲಿದ್ದ ಅಗಸ ಜೋರಾಗಿ ನಗಲಾರಂಭಿಸಿದ. ಸಿಟ್ಟಿಗೆದ್ದ ವೈದ್ಯ ಕೇಳಿದ: "ಏನಯ್ಯಾ, ಅದೇಕೆ ಹಾಗೆ ನಗುತ್ತಿದ್ದೀಯಾ?" "ಕ್ಷಮಿಸಿ ಬುದ್ಧೀ, ಅದು ನಿಮ್ಮನ್ನು ತನ್ನ ಮರಿಯೆಂದು ತಿಳಿದಿದೆ. ಅದಕ್ಕೆ ನಗು ಬಂತು," ಎಂದ ಅಗಸ.

—ಸಂಗ್ರಹ: ಶ್ರೀಧರ್, ಹೊನ್ನಿಹಳ್ಳಿ

*

"ನಿನ್ನೆ ನೀವು ಒಂದು ಆನೆಯ ದಂತದ ಹಣಿಗೆ ಕೊಟ್ಟಿದ್ದಿರಲ್ಲಾ."

"ಹೌದು, ಏನಾಯಿತೀಗ?"

"ಆ ಹಣಿಗೆ ಆನೆಯ ದಂತದ್ದಲ್ಲವೇ ಅಲ್ಲ"

"ಹಾಗಾದರೆ ಆನೆಗಳೂ ಕೃತಕ ದಂತ ಇಟ್ಟುಕೊಳ್ಳುತ್ತವೇ ಎನ್ನಿ."

*

ಗಂಡ, ಕಾರ್ ಡ್ರೈವ್ ಮಾಡುತ್ತಿದ್ದ ಹೆಂಡತಿಗೆ: "ನೋಡು ಪ್ರಿಯೆ, ಆ ತಂತಿ ಕಂಬದ ಮೇಲಿರುವ ಮನುಷ್ಯನ್ನ."

"ಮೂರ್ಖ! ನಾನು ಕಾರು ಹೊಡೆಯುತ್ತಿರೋದು ಇದೇ ಮೊದಲು ಅಂತ ತಿಳಕೊಂಡಿರಬೇಕು."

*

"ಈ ದಿನ ಸ್ವಲ್ಪದರಲ್ಲೇ ಉಳಿದುಕೊಂಡೆ ನೋಡು. ಇಲ್ಲದಿದ್ದರೆ ಗಡಿಯಾರ ನನ್ನ ತಲೆಯ ಮೇಲೆ ಬೀಳುತ್ತಿತ್ತು." "ಹಾಗಾದರೆ ಗಡಿಯಾರ 'ಸ್ಲೋ' ಇದೆ, ಅನ್ನು."



# ದೊಡ್ಡವರ ಸಣ್ಣ ಕತೆಗಳು ★

ಸಂಗ್ರಹ:
ವಿ. ಎಸ್. ಜೋಶಿ

ಡಾ. ಸಿ. ವಿ. ರಾಮನ್ ಬೆಂಗಳೂರಿನ ಟಾಟಾ ವಿಜ್ಞಾನ ಮಂದಿರದ ಮುಖ್ಯಸ್ಥರಾಗಿದ್ದಾಗ ನಡೆದ ಘಟನೆ. ಅಲ್ಲಿ ಕೆಲವು ಸಹಾಯಕ ಸಂಶೋಧಕರ ಸ್ಥಳಗಳನ್ನು ತುಂಬುವುದಿತ್ತು. ಅದಕ್ಕಾಗಿ ಅರ್ಜಿಗಳನ್ನು ಕರೆಯಲಾಯಿತು. ಪ್ರತಿಭಾವಂತರು ಹಿಂದುಳಿಯದಿರಲೆಂದು ಸಂದರ್ಶನಕ್ಕೆ ಆಯ್ಕೆಯಾದವರಿಗೆ ಪ್ರಯಾಣ ವೆಚ್ಚವನ್ನು ಸಂಸ್ಥೆಯೆ ವಹಿಸಲು ಮುಂದಾಯಿತು. ಅನೇಕ ಜನ ತರುಣರು ಸಂದರ್ಶನಕ್ಕೆ ಬಂದಿದ್ದರು. ಅವರ ಜ್ಞಾನ ಮಟ್ಟದಿಂದ ಸಮಾಧಾನ ಹೊಂದದೆ ರಾಮನ್ ಎಲ್ಲರನ್ನೂ ತಿರುಗಿ ಕಳಿಸಿಕೊಟ್ಟುಬಿಟ್ಟರು.

ಅವರಲ್ಲಿ ಒಬ್ಬ ತರುಣ ಮಾತ್ರ ವಿಜ್ಞಾನ ಮಂದಿರದ ಆಫೀಸಿನೆದುರಲ್ಲೇ ಸುತ್ತಾಡುತ್ತಿರುವುದು ರಾಮನ್ನರ ಲಕ್ಷ್ಯಕ್ಕೆ ಬಂತು. ತಮ್ಮ ಕೋಣೆಯ ಕಿಟಕಿಯಿಂದ ಹತ್ತಾರು ನಿಮಿಷ ಅವನನ್ನೇ ನೋಡಿದರು. ಕೊನೆಗೆ ಸಿಟ್ಟಿನಿಂದ ಅವನನ್ನು ಕೂಗಿ ಕರೆದು ಕೇಳಿದರು: "ಏನಯ್ಯಾ, ಈ ಸ್ಥಾನಕ್ಕೆ ನೀನು ಅಯೋಗ್ಯ. ನಿನ್ನನ್ನು ನೇಮಿಸಿಕೊಳ್ಳುವುದಿಲ್ಲ ಎಂದು ಹೇಳಿದರೂ ಇಲ್ಲಿಯೆ ಸುತ್ತುತ್ತಾ ಇದ್ದೀಯಲ್ಲ?"

ಆ ತರುಣನು ವಿನಯದಿಂದ ಉತ್ತರಿಸಿದ: "ಕ್ಷಮಿಸಿ ಸರ್, ನಿಮ್ಮ ಮುಂದೆ ನಿಂತು ಮಾತನಾಡಲೂ ನನಗೆ ಯೋಗ್ಯತೆಯಿಲ್ಲ ಎಂದು ನನಗೆ ಗೊತ್ತು."

"ಹಾಗಿದ್ದರೆ ಇಲ್ಲೇಕೆ ಇನ್ನೂ ನಿಂತಿರುವೆ?"

"ಸರ್, ನಿಮ್ಮ ಆಫೀಸಿನವರು ಗಡಿಬಿಡಿಯಲ್ಲಿ ನನ್ನ ಪ್ರಯಾಣದ ವೆಚ್ಚವನ್ನು ತಪ್ಪು ಲೆಕ್ಕ ಮಾಡಿ ಹೆಚ್ಚು ಕೊಟ್ಟಿದ್ದಾರೆ. ಹೆಚ್ಚಿನದನ್ನು ಹಿಂತಿರುಗಿಸಲೆಂದು ನಾನಿಲ್ಲಿ ಕಾಯುತ್ತಿದ್ದೇನೆ."

ಅವನ ಪ್ರಾಮಾಣಿಕತನವನ್ನು ಕಂಡು ರಾಮನ್ ತುಂಬ ಸಂತೋಷಪಟ್ಟರು. ಅವರು ಮರುಕ್ಷಣವೇ ನುಡಿದರು: "ಒಳಗೆ ಬಾ ತರುಣ, ನಿನ್ನನ್ನು ನಾನು ನೌಕರಿಗೆ ನೇಮಿಸಿಕೊಂಡಿದ್ದೇನೆ. ನಿನಗೆ ಭೌತಶಾಸ್ತ್ರದಲ್ಲಿ ಹೆಚ್ಚಿನ ಪರಿಣತಿ ಇರದಿದ್ದರೂ ಚಿಂತೆ ಇಲ್ಲ. ಅದನ್ನು ನಾನು ನಿನಗೆ ಕಲಿಸಿಕೊಡಬಲ್ಲೆ. ನೀನು ನಿಜವಾಗಿಯೂ ಪ್ರಾಮಾಣಿಕ ಮನುಷ್ಯ. ನನಗೆ ನಿನ್ನಂಥವರು ಬೇಕು."

*

ಲೋಕಮಾನ್ಯ ಟಿಳಕರು ನಮ್ಮ ಸಮಾಜದಲ್ಲಿಯ ಅಸ್ಪೃಶ್ಯತೆಯನ್ನು ಮೆಚ್ಚಲಿಲ್ಲ. ಅದು ನಮಗೊಂದು ಕಲಂಕವೆಂದು ಅವರು ಭಾವಿಸಿದ್ದರು. ಟಿಳಕರು ಸಾರ್ವಜನಿಕ ಗಣೇಶೋತ್ಸವ ಪ್ರಾರಂಭ ಮಾಡಿದಾಗ ನಡೆದ ಘಟನೆ.

ಗಣಪತಿ ವಿಸರ್ಜನೆಗೆಂದು ನಾಗರಿಕರು ತಮ್ಮ ತಮ್ಮ ಗಣಪತಿ ಮೂರ್ತಿಗಳನ್ನು ತೆಗೆದುಕೊಂಡು ಮೆರವಣಿಗೆಯಲ್ಲಿ ಪುಣೆಯ ಬೀದಿಯಲ್ಲಿ ನಡೆದಿದ್ದರು. ಟಿಳಕರು ಆ ಮೆರವಣಿಗೆಯ ಮಧ್ಯದಲ್ಲಿದ್ದರು; ಮೆರವಣಿಗೆ ಮಾರ್ಗಮಧ್ಯೆ ಒಂದು ಮನೆಯ ಸಮೀಪ ಬಂದಾಗ ಕಿಟಕಿಯಲ್ಲಿ ಅಳುತ್ತ ನಿಂತಿದ್ದ ಬಾಲಕನೊಬ್ಬನನ್ನು ಅವರು ಕಂಡರು. ಅವರು ಕೂಡಲೆ ಮೆರವಣಿಗೆಯನ್ನು ನಿಲ್ಲಿಸಿ ಆ ಮನೆಯನ್ನು ಪ್ರವೇಶಿಸಿದರು. ಹುಡುಗನ ತಾಯಿ ಹೇಳಿದಳು: "ನಿಮ್ಮ ಈ ಮೆರವಣಿಗೆಯಲ್ಲೇ ಇವನೂ ತನ್ನ ಗಣಪತಿ ಒಯ್ಯಬೇಕೆನ್ನುತ್ತಾನೆ. "ಇದು ಹೇಗೆ ಸಾಧ್ಯ? ನಾವು ಹೊಲೆಯರು. ನೀವಾದರೂ ಇವನಿಗೆ ಬುದ್ಧಿ ಹೇಳಿ ಸ್ವಾಮಿ."

ಅವಳ ಮಾತು ಕೇಳಿ ಲೋಕಮಾನ್ಯರ ಕಣ್ಣು ಹನಿಯಿತು. ಅವರು ಆ ಹುಡುಗನನ್ನು ಪ್ರೀತಿಯಿಂದ ಅಪ್ಪಿಕೊಂಡು, ಅವನಿಗೆ ತನ್ನ ಗಣಪತಿಯನ್ನು ಹೊರತರಲು ಹೇಳಿದರು. ಹರಿಜನ ಬಾಲಕ ತನ್ನ ಗಣಪತಿ ವಿಗ್ರಹದೊಂದಿಗೆ ಮೆರವಣಿಗೆಯನ್ನು ಸೇರಿದ ಮೇಲೆಯೆ ಅದು ಮುಂದುವರೆಯಿತು.

ಕುರ್ತಕೋಟಿ ಹಿಂದುಗಳ
ದತ್ತಕ ಕಾಯದೆಯಲ್ಲಿ
ಇತಿಹಾಸ ನಿರ್ಮಿಸಿತು

# ಇವರು ಗೆದ್ದು ಸೋತರು

ಜಯರಾಮಾಚಾರ್ಯ ಮಳಗಿ

ಗದಗಿನಿಂದ ಹುಬ್ಬಳ್ಳಿಗೆ ಹೋಗುವ ದಾರಿಯಲ್ಲಿ ಹುಲಕೋಟಿಯ ಸಮೀಪ ಬಂದಾಗ ಎಡಬದಿಗೆ ಒಂದು ಗುರುತಿನ ಹಲಗೆ ಕಾಣುತ್ತದೆ. ಎಡಗಡೆಯ ದಾರಿಯಲ್ಲಿ ಹೋದರೆ ಕುರ್ತಕೋಟಿ ಸಿಕ್ಕುತ್ತದೆ ಎಂದು ಹೇಳುತ್ತದೆ.

ಕುರ್ತಕೋಟಿ ಎಂದೊಡನೆಯೆ ತಟ್ಟನೆ ಕಣ್ಣೆದುರು ನಿಲ್ಲುವುದು ಎರಡು ಹೆಸರುಗಳು–ಒಂದು, ಕರವೀರ ಪೀಠದ ಶಂಕರಾಚಾರ್ಯರಾಗಿದ್ದ ಕುರ್ತಕೋಟಿ ಮಹಾಭಾಗವತರು; ಇನ್ನೊಂದು, ಸಮರ್ಥ ವಿಮರ್ಶಕರೂ ಲೇಖಕರೂ ಎಂದು ಎಂದು ಹೆಸರಾಂತ ಶ್ರೀ ಕೀರ್ತಿನಾಥ ಕುರ್ತಕೋಟಿ. ಆದರೆ ಈ ಶತಮಾನದ ಪ್ರಥಮಾರ್ಧದಲ್ಲಿ ಇದೇ ಕುರ್ತಕೋಟಿಗೆ ಹಿಂದುಗಳ ದತ್ತಕ ಕಾಯದೆಯ ಇತಿಹಾಸದಲ್ಲಿ ಭಾರಿ ಕೋಲಾಹಲ ಎಬ್ಬಿಸಿದ ಕೀರ್ತಿಯೂ ಸಲ್ಲುತ್ತದೆ.



ನಾರಾಯಣಗೌಡರು (ಗೆದ್ದು ಸೋತವರು)

೧೯೫೬ರಲ್ಲಿ ಕ್ರೋಡೀಕೃತ ಹಿಂದು ದತ್ತಕ ಕಾಯದೆ ಅಸ್ತಿತ್ವದಲ್ಲಿ ಬರುವ ಮುನ್ನ ಬಂಗಾಲವೊಂದನ್ನುಳಿದು ಭಾರತದಲ್ಲೆಲ್ಲ ಮಿತಾಕ್ಷರ ಪರಂಪರೆಯಂತೆಯೆ ಹಿಂದುಗಳಲ್ಲಿ ದತ್ತಕ ನಡೆಯುತ್ತಿತ್ತು. ಈ ಪರಂಪರೆಯಲ್ಲಿಯೆ ಮತ್ತೆ ನಾಲ್ಕು ಉಪಶಾಖೆಗಳಿಂದಾಗಿ ಪ್ರಾದೇಶಿಕ ಭಿನ್ನತೆಗಳಿದ್ದವೆಂಬ ಮಾತು ಬೇರೆ. ಬಂಗಾಲದಲ್ಲಿ ಮಾತ್ರ ದಾಯಭಾಗ ಪರಂಪರೆ ರೂಢಿಯಲ್ಲಿತ್ತು.

ಅಪುತ್ರಸ್ಯ ಗತಿರ್ನಾಸ್ತಿ ಎಂಬ ನಂಬುಗೆಯಿಂದಾಗಿ ಮನುಷ್ಯನಿಗೆ ಪುರುಷ ಸಂತಾನ ಅನಿವಾರ್ಯವೆಂಬ ಭಾವನೆ ಹಿಂದುಗಳಲ್ಲಿ ಸಾರ್ವತ್ರಿಕವಾಗಿದೆ. ಈ ಕಾರಣಕ್ಕಾಗಿಯೆ ಗಂಡು ಸಂತಾನವಿಲ್ಲದವರು ತಮಗೆ ತಿಲತರ್ಪಣಕ್ಕಾಗಿ ಗಂಡು ಮಗುವನ್ನು ದತ್ತು ತೆಗೆದುಕೊಳ್ಳುವುದು ಒಂದು ಸಂಪ್ರದಾಯವಾಗಿಯೇ ಬೆಳೆದುಬಂದಿದೆ. ಹೊರಗಿನವನೊಬ್ಬನು ದತ್ತಕದಿಂದಾಗಿ ಒಬ್ಬನಿಗೆ ಮಗನಾದ ನಂತರ ಸ್ವಾಭಾವಿಕವಾಗಿಯೆ ಔರಸ* ಪುತ್ರನಿಗೆ ಪ್ರಾಪ್ತವಾಗುವ ಆಸ್ತಿಯ ಮುಂತಾದ ಎಲ್ಲ ಹಕ್ಕುಗಳು ಅವನಿಗೂ ಪ್ರಾಪ್ತವಾಗುವವು.

* ಔರಸ ಪುತ್ರನೆಂದರೆ ವಿವಾಹ ಸಂಬಂಧದ ಚೌಕಟ್ಟಿನಲ್ಲೇ ದಂಪತಿಗಳಿಗೆ ಹುಟ್ಟಿದ ಮಗ.

ಮುಂದೆ ದತ್ತಕದಲ್ಲಿಯ ಧಾರ್ಮಿಕ ಅಂಶ ಒನ್ನೆಲೆಯಲ್ಲಿ ಮಾತ್ರ ಉಳಿದು ಆಸ್ತಿಗೆಂಯೇ ಮಹತ್ವ ಉಂಟಾಯಿತು. ಇದರಿಂದಾಗಿ ದತ್ತಕದ ಇತಿಹಾಸವೆಂದರೆ ಆಸ್ತಿಗಾಗಿ ಮನೆತನಗಳಲ್ಲಿಯ ವೈರದ, ಘರ್ಷಣೆಯ, ಆಶೆ ನಿರಾಶೆಗಳಲ್ಲಿಯ ತೀವ್ರ ಹೋಯ್ದಾಟದ ಇತಿಹಾಸವೇ ಆಗಿದೆ.

ಹಿಂದು ಕಾಯದೆಯ ಅಭ್ಯಾಸಗಳಿಗೆ ಭೀಮಾಬಾಯಿ ವಿ. ಗುರುನಾಥಗೌಡ ಎಂಬ ಪ್ರಕರಣ ಸುಪರಿಚಿತ. ರೈತವಾರಿಯು ಪ್ರಚಲಿತವಿರುವ ಈ ಭಾಗದಲ್ಲಿ ಕುರ್ತಕೋಟಿ ತಕ್ಕ ಮಟ್ಟಿಗೆ ಶ್ರೀಮಂತ ವತನದಾರರ ಊರು. ಇಲ್ಲಿಯ ಭೂಮಿ ತುಂಬಾ ಫಲವತ್ತಾದುದು. ಹಣದ ಬೆಳೆಯೆಂದು ಹೆಸರಾಂತ ಹತ್ತಿ ಇಲ್ಲಿ ವಿಪುಲವಾಗಿ ಬೆಳೆಯುವುದರಿಂದ ಇಲ್ಲಿ ಜಮೀನುಳ್ಳವರೆಲ್ಲ ಸಾಮಾನ್ಯವಾಗಿ ಹಣವಂತರೆ. ಅದಕ್ಕೆ ತಕ್ಕಂತೆ ಕೋರ್ಟು ಕಚೇರಿಗಳಲ್ಲಿ ವ್ಯಾಜ್ಯ ಇತ್ಯಾದಿಗಳೂ ಇಲ್ಲಿ ಸಾಮಾನ್ಯ.

ಕುರ್ತಕೋಟಿಯಲ್ಲಿಯೇ ದೊಡ್ಡ ಮನೆತನವೆಂದರೆ ಅಲ್ಲಿಯ ಗೌಡರದು. ಈ ಮನೆತನದಲ್ಲಿ ಹಿರೇ ಬಣ, ಚಿಕ್ಕ ಬಣ ಎಂದು ಎರಡು ಮುಖ್ಯ ಶಾಖೆಗಳು. ಹಿರೇ ಬಣಕ್ಕೆ ಅಲ್ಲಿಯ ಗೌಡಕಿ (ಪಟೇಲ, ಪಾಟೀಲ) ಮತ್ತು ಶಾನುಭೋಗಕಿ (ಶಾನಭಾಗ, ಕುಲಕರ್ಣಿ, ಕರಣಿಕ) ಈ ಎರಡೂ ಹಕ್ಕುಗಳಿದ್ದರೆ ಚಿಕ್ಕ ಬಣಕ್ಕೆ ಗೌಡಕಿ ಹಕ್ಕುಗಳು ಮಾತ್ರ. ಹಿರೇ ಬಣ ಶಾಖೋಪಶಾಖೆಗಳಾಗಿ ಹಂಚಿಹೋಗಿದೆಯಾದರೆ ಚಿಕ್ಕ ಬಣದಲ್ಲಿ ಮಾತ್ರ ಒಂದೇ ಮನೆ. ಈ ಬಣದ ದ್ಯಾಮನಗೌಡ ಎಂಬವರಿಗೆ ನೀಲಕಂಠಗೌಡ, ಬಿಂಡಪ್ಪಗೌಡ, ಜೀವಣಗೌಡ ಎಂಬ ಮೂವರು ಮಕ್ಕಳು. ಈ ಮೂವರಲ್ಲಿ ೧೮೯೬ರಲ್ಲಿ ಆಸ್ತಿ ಪಾಲಾಗಿತ್ತಾದರೂ ನೀಲಕಂಠಗೌಡ ಮತ್ತು ಜೀವಣಗೌಡ ಒಟ್ಟಿಗೆಯೆ ವಾಸವಾಗಿದ್ದರು. ಬಿಂಡಪ್ಪಗೌಡ ಪ್ರತ್ಯೇಕವಾಗಿರುತ್ತಿದ್ದನು. ಈ ವೃತ್ತಾಂತ ಆರಂಭವಾಗುವ ಮೊದಲೆ ಜೀವಣ ಬಿಂಡಪ್ಪ ಸತ್ತಿದ್ದರು. ಒಂದು ವಿಶೇಷವೆಂದರೆ ಈ ಮೂವರು ಬಂಧುಗಳಿಗೂ ಸಂತಾನವಿರಲಿಲ್ಲ. ಹಿರಿಯವನಾದ ನೀಲಕಂಠಗೌಡ ತುಂಬ ಛಲದ ವ್ಯಕ್ತಿ- ಅವನು ಊರಲ್ಲಿ ಸಹ ಯಾರೊಂದಿಗೂ ಸಹಕರಿಸುತ್ತಿರಲಿಲ್ಲ ಮಾತ್ರವಲ್ಲ, ಮನೆ ಬಿಟ್ಟು ಹೊರಬೀಳುವುದು ಸಹ ತೀರ ಅಪರೂಪವಾಗಿತ್ತಂತೆ. ನೀಲಕಂಠಗೌಡನು ೧೯೧೫ರಲ್ಲಿ ಧಾರವಾಡದ ದೇಶಪಾಂಡೆ ಮನೆತನದ ಒಬ್ಬನನ್ನು ದತ್ತಕ ಮಾಡಿಕೊಂಡು ಮುಂದಿನ ಕೆಲ ತಿಂಗಳುಗಳಲ್ಲೇ ಮೃತನಾದನು. ಈ ದತ್ತುಪುತ್ರನ ಹೆಸರು ದ್ಯಾಮನಗೌಡ.

ದ್ಯಾಮನಗೌಡನನ್ನು ದತ್ತಕ ಮಾಡಿಕೊಂಡುದನ್ನು ಕಂಡು ಮೊದಲೇ ಸ್ವತಂತ್ರನಾಗಿದ್ದ ಬಿಂಡಪ್ಪಗೌಡನ ವಿಧವೆ ತುಳಸಾಬಾಯಿ ಕೂಡ ತನ್ನ ಅಕ್ಕನ ಮಗ ಗುರುನಾಥಗೌಡನನ್ನು ದತ್ತಕ ಮಾಡಿಕೊಂಡಳು. ಅದು ವರೆಗೆ ಒಂದೇ ಮನೆಯಲ್ಲಿದ್ದ ನೀಲಕಂಠಗೌಡನ ದತ್ತುಪುತ್ರನಿಗೂ ಮತ್ತು ಜೀವಣಗೌಡನ ವಿಧವೆಗೂ ಈಗ ಕೂಡಿ ನಡೆಯದಾಯಿತು. ಆಗ ಜೀವಣಗೌಡನ ಹೆಂಡತಿ ಭೀಮಾಬಾಯಿ ತಾನೂ ದತ್ತಕ ಮಾಡಿಕೊಳ್ಳುವ ವಿಚಾರ ಮಾಡಿದಳು.

ಈ ಸುಮಾರಿಗೆ ಊರಲ್ಲಿಯ ಕೆಲ ಪ್ರಮುಖರಿಗೆ ಈ ಮನೆತನದ ವ್ಯವಹಾರದಲ್ಲಿ ಆಸಕ್ತಿಯುಂಟಾಯಿತು. ವಾತಾವರಣವೂ ಅದಕ್ಕೆ ಅನುಕೂಲವಾಗಿತ್ತು. ಮೊದಲ ಮಹಾಯುದ್ಧ ಮುಗಿದು ದೇಶ ಅದರ ಒತ್ತಡದಿಂದ ಪಾರಾಗಿತ್ತು. ಸಕಾಲಿಕ ಮಳೆಯಿಂದಾಗಿ ಹಿಂದಿನ ಎರಡು ಮೂರು ವರ್ಷಗಳಿಂದ ಬೆಳೆಯೂ ಚೆನ್ನಾಗಿ ಬಂದು ಸಮೃದ್ಧಿ ನಲಿದಾಡುತ್ತಿತ್ತು. ಕುರ್ತಕೋಟಿಯಲ್ಲಿ ಪ್ರಮುಖರೆನಿಸಿದ ಎಂಟು ಜನ ಈ ಮನೆತನದ ಸಮಸ್ಯೆಯನ್ನು ಪರಿಹರಿಸುವುದಕ್ಕೆ ಮುಂದಾದರು. ಈ ಮುಂದಾಳುಗಳಲ್ಲಿ ಒಬ್ಬರು ಆ ಊರ ಶಾನುಭೋಗರೂ ಆಗಿದ್ದರು. ಇವರು ಈ ಮೊದಲೇ ನೀಲಕಂಠಗೌಡನಿಗೆ ತಮ್ಮ ಆಸ್ತಿಯನ್ನು ಮಾರಿದ್ದರು. ಈಗ ಜೀವಣಗೌಡನ ವಿಧವೆಯಾಗಿದ್ದ ಭೀಮಾಬಾಯಿಗೆ ನೆರವಾಗಿ ಕಳೆದುಹೋದ ತಮ್ಮ ಆಸ್ತಿಯನ್ನು ಮರಳಿ ಪಡೆಯುವ ತವಕದಲ್ಲಿದ್ದರು. ಈ ಪಂಚಾಯರ ಸೇರಿ ಭೀಮಾಬಾಯಿಗೆ ನಾರಾಯಣ ಎಂಬೊಬ್ಬ ಹುಡುಗನನ್ನು ನವ್ಹೆಂಬರ್ ೧೯೧೯ರಲ್ಲಿ ದತ್ತಕ ಮಾಡಿದರು. ದತ್ತಕದಿಂದ ನಾರಾಯಣನಿಗೆ ಬರುವ ಆಸ್ತಿಯಲ್ಲಿ ಅರ್ಧವನ್ನು ಮಾತ್ರ ಅವನಿಗೆ ಕೊಟ್ಟು ಇನ್ನರ್ಧವನ್ನು

ತಮ್ಮತಮ್ಮಲ್ಲಿ ಹಂಚಿಕೊಳ್ಳಬೇಕೆಂದು ಅವರಲ್ಲಿ ಒಪ್ಪಂದವಾಗಿತ್ತು. ಊರಲ್ಲಿಯ ಎಲ್ಲ ಪ್ರಮುಖರ ಸಹಾಯವೂ ಇದ್ದುದರಿಂದ ರೈತರಿಂದ ಲಾವಣಿ (ಗೇಣಿ) ಪತ್ರ ಬರೆಸಿಕೊಳ್ಳುವುದು, ಹಕ್ಕು ರಜಿಸ್ಟರ್ (Record of rights)ನಲ್ಲಿ ಭೀಮಾಬಾಯಿಯ ಹೆಸರು ಹಚ್ಚುವುದು ಮುಂತಾದ ಕೆಲಸಗಳೆಲ್ಲ ಸುಸೂತ್ರವಾಗಿಯೇ ನಡೆದುವು.

ಈ ಮಧ್ಯೆ ನೀಲಕಂಠನ ದತ್ತುಪುತ್ರ ದ್ಯಾಮನಗೌಡನು ೧೯೧೯ರಲ್ಲಿಯೂ ೧೯೨೦ರಲ್ಲಿ ಅವನ ಔರಸ ಪುತ್ರ (ಜನನ ೧೯೧೮) ದತ್ತಾತ್ರೇಯನೂ ಮರಣ ಹೊಂದಿದರು. ಇದರಿಂದಾಗಿ ಗುರುನಾಥಗೌಡನಿಗೆ ಸುವರ್ಣಾವಕಾಶ ದೊರತಂತಾಗಿ ಅವನು ದ್ಯಾಮನಗೌಡನ ವಿಧವೆ ತುಂಗಾಬಾಯಿಗೆ ಭಾರಿ ವರ್ಷಾಶನ ಕೊಡುವ ಆಶ್ವಾಸನ ನೀಡಿ ನೀಲಕಂಠಗೌಡನ ಆಸ್ತಿಗೆ ಗಂಡು ವಾರಸುದಾರರಿಲ್ಲದ ಕಾರಣ ಅವನ ಆಸ್ತಿಯೆಲ್ಲ ತನಗೇ ಬರಬೇಕೆಂದು ಪಂಚಾಯತಿ ಸೇರಿಸಿ ಅವಾರ್ಡ್ ಪಡೆದುಕೊಂಡನು. ಅನಂತರ ಅವರ ಪ್ರಕಾರ ಕೋರ್ಟಿನಿಂದ ಡಿಕ್ರಿ ಕೂಡ ಪಡೆದು ಅದರ ಆಧಾರದ ಮೇಲೆ ಹಕ್ಕು ರಜಿಸ್ಟರ್‌ನಲ್ಲಿ ತನ್ನ ಹೆಸರು ಹಚ್ಚಿಸಿಕೊಳ್ಳಲೆಂದು ಅವನು ಕಂದಾಯ ಅಧಿಕಾರಿಗಳಿಗೆ ಅರ್ಜಿ ಮಾಡಿಕೊಂಡಾಗ ಮಾತ್ರ ಮತ್ತೆ ಪಂಚಾಯತಿ ಎದ್ದಿತು; ಕೊನೆಗೆ ನೀಲಕಂಠಗೌಡನ ದತ್ತಕವೂ ನಿಸ್ಸಂತಾನವಾದ್ದರಿಂದ ಅವನ ಆಸ್ತಿಯನ್ನು ಗಂಡು ವಾರಸದಾರರ (ಗುರುನಾಥಗೌಡ ಮತ್ತು ನಾರಾಯಣ) ಹೆಸರಿಗೆ ಹಚ್ಚಬೇಕು; ಲಿಂಗಪ್ಪಗೌಡನ ಆಸ್ತಿಯನ್ನು ಅವನ ವಿಧವೆ ತುಳಸಾಬಾಯಿಯ ಹೆಸರಿಗೆ ಹಚ್ಚಬೇಕು; ಮತ್ತು ಜೀವಣಗೌಡನ ಆಸ್ತಿಯನ್ನು ಅವನ ವಿಧವೆ ಭೀಮಾಬಾಯಿಯ ಹೆಸರಿಗೆ ಹಚ್ಚಬೇಕು ಎಂದು ನಿರ್ಧಾರವಾಯಿತಲ್ಲದೆ ಗುರುನಾಥಗೌಡ ಹಾಗು ನಾರಾಯಣ ಇಬ್ಬರೂ ಸಿವಿಲ್ ಕೋರ್ಟಿನಿಂದ ತಮ್ಮ ತಮ್ಮ ದತ್ತಕ ಕಾಯಿದೆ ದೃಷ್ಟಿಯಿಂದ ಯೋಗ್ಯ (Valid) ಇದೆಯೆಂದು ಖಚಿತಪಡಿಸಿಕೊಂಡು ಬರಬೇಕೆಂದು ಅವರಿಗೆ ತಿಳಿಸಲಾಯಿತು.

ಈ ನಿರ್ಣಯ ಗುರುನಾಥಗೌಡನಿಗೆ ಪ್ರತಿಕೂಲವಾಗಿದ್ದುದು ಸ್ಪಷ್ಟವೇ ಇತ್ತು. ಅವನು ವಕೀಲರ ಸಲಹೆಯ ಮೇರೆಗೆ ಎಲ್ಲ ಆಸ್ತಿಯ ಕಬ್ಜಾ ತನ್ನದೇ ಆಗಿರುವುದರಿಂದ ಇತರ ಯಾರೂ ಅದರಲ್ಲಿ ಅಡ್ಡ ಬರದಂತೆ ಭೀಮಾಬಾಯಿ, ನಾರಾಯಣ, ಅವನ ಜನಕ ತಂದೆ ಲಿಂಗೋ ರಾಮಚಂದ್ರ ಮತ್ತು ಇನ್ನಿಬ್ಬರ ವಿರುದ್ಧ ಧಾರವಾಡದ ಸಿವಿಲ್ ಕೋರ್ಟಿನಲ್ಲಿ ದಾವೆ ಹೂಡಿ ಅವರ ವಿರುದ್ಧ ಬಂದೀ ಹುಕುಮು ಪಡೆದುಕೊಂಡನು. ಅನಂತರ ಈ ಪ್ರಕರಣದಲ್ಲಿಯೇ ಗುರುನಾಥಗೌಡನ ಮತ್ತು ನಾರಾಯಣನ ದತ್ತಕಗಳು ಸಾಧುವೇ ಎಂಬ ಪ್ರಶ್ನೆ ಉದ್ಭೂತವಾಯಿತು. ಇಲ್ಲಿ ಕೋರ್ಟು ನಿರ್ಧರಿಸಬೇಕಿದ್ದ ಮಹತ್ವದ ಅಂಶ ಭೀಮಾಬಾಯಿಗೆ—ಅವಿಭಕ್ತ ಕುಟುಂಬದಲ್ಲಿಯ ಒಂದು ವಿಧವೆಗೆ–ದತ್ತಕದ ಅಧಿಕಾರವುಂಟೆ ಎಂಬುದು. ಸುದೀರ್ಘ ಚರ್ಚೆಯ ನಂತರ ಹಿಂದು ವಿಧವೆಗೆ ಈ ಅಧಿಕಾರವಿಲ್ಲವೆಂಬ ನಿರ್ಣಯಕ್ಕೆ ನ್ಯಾಯಾಧೀಶರು ಬಂದರು. ಇದರಿಂದಾಗಿ ನಾರಾಯಣನ ದತ್ತಕ ರದ್ದಾಗಿ ಮೂಲ ದ್ಯಾಮನಗೌಡರ ವಂಶದ ಇಡೀ ಆಸ್ತಿಗೆ ಗುರುನಾಥಗೌಡನು ಏಕಮೇವ ವಾರಸುದಾರ ಎಂದಾಯಿತು. ಗುರುನಾಥಗೌಡ ಈ ದಾವೆ ಹೂಡಿದ್ದು ೧೯೨೦ ರಲ್ಲಾದರೆ ಧಾರವಾಡದ ನ್ಯಾಯಾಲಯದಲ್ಲಿ ನಿರ್ಣಯ ದೊರೆತದ್ದು ಐದು ವರ್ಷಗಳ ನಂತರ—೧೯೨೫ರಲ್ಲಿ. ಅದೇ ವರ್ಷ ಭೀಮಾಬಾಯಿ ಮತ್ತು ನಾರಾಯಣ ಮುಂಬಯಿ ಹೈಕೋರ್ಟಿಗೆ ಈ ನಿರ್ಣಯದ ವಿರುದ್ಧ ಅಪೀಲು ಮಾಡಿದರು. ೧೯೩೦ರಲ್ಲಿ ಹೈಕೋರ್ಟು ತನ್ನ ನಿರ್ಣಯ ಹೇಳಿ ಕೆಳಗಿನ ಕೋರ್ಟಿನ ನಿರ್ಣಯವನ್ನೇ ಎತ್ತಿ ಹಿಡಿಯಿತು. ಆಗ ಭೀಮಾಬಾಯಿ ಮತ್ತು ನಾರಾಯಣ ಪ್ರಿವೀ ಕೌನ್ಸಿಲ್ಲಿಗೆ ಅಪೀಲು ಮಾಡಿಕೊಂಡರು. ಆ ಕಾಲಕ್ಕೆ ಲಂಡನ್ನಿನಲ್ಲಿದ್ದ ಪ್ರಿವೀ ಕೌನ್ಸಿಲ್ಲೇ ಭಾರತದ ಸರ್ವೋಚ್ಚ ನ್ಯಾಯಾಲಯವಾಗಿತ್ತು. ೧೯೩೨ ರ ನವೆಂಬರ್ ೪ ರಂದು ಪ್ರಿವೀ ಕೌನ್ಸಿಲ್ಲಿನ ನಿರ್ಣಯವನ್ನು ಅದರ ಸದಸ್ಯ ಸರ್ ಡಿ. ಎಫ್. ಮುಲ್ಲಾ ಸಾರಿದರು. (ಸರ್ ಮುಲ್ಲಾ ಮಹಾನ್ ಕಾಯಿದೇ ಪಂಡಿತರು. ಹಿಂದು ಕಾಯಿದೆಯ ಕುರಿತು ಅವರು ಬರೆದ ಗ್ರಂಥವೇ

ಇಂದಿಗೂ ಪ್ರಮಾಣಗ್ರಂಥವೆನಿಸಿದೆ.) ಕೌನ್ಸಿಲ್ಲು ಭೀಮಾಬಾಯಿಯ ದತ್ತಕದ ಹಕ್ಕನ್ನು ಎತ್ತಿ ಹಿಡಿದು ಭೀಮಾಬಾಯಿ ಮತ್ತು ನಾರಾಯಣರಿಗೆ ಮೂರೂ ನ್ಯಾಯಾಲಯಗಳಲ್ಲಾದ ಖರ್ಚನ್ನು ಗುರುನಾಥಗೌಡನಿಂದ ಕೊಡಿಸಿತು. ಈ ಪ್ರಕರಣದಲ್ಲಿ ಮುಂಬಯಿ ಬಾರಿನ ಖ್ಯಾತ ವಕೀಲರಾಗಿದ್ದ ಶ್ರೀ ಆರ್. ಎ. ಜಹಗೀರದಾರ, ಶ್ರೀ ಪಾರೀಖ, ಆಗ ಲಂಡನ್ನಿನಲ್ಲಿ ವಕೀಲಿ ವ್ಯವಸಾಯದಲ್ಲಿದ್ದ ಶ್ರೀ. ವಿ. ಕೆ. ಕೃಷ್ಣ ಮೆನನ್ನರಂಥವರು ವಕೀಲಿ ವಹಿಸಿದ್ದರು.

ಪ್ರಿವೀ ಕೌನ್ಸಿಲ್ಲಿನ ಈ ನಿರ್ಣಯ ಮಿತಾಕ್ಷರ ಪರಂಪರೆಯ ಮುಂಬಯಿ ಶಾಖೆಗೆ ಮಾತ್ರ ಅನ್ವಯಿಸುತ್ತಿತ್ತು. ಉಳಿದ ಶಾಖೆಯವರು ಅವಿಭಕ್ತ ಹಿಂದು ಕುಟುಂಬದಲ್ಲಿಯ ವಿಧವೆಗೆ ದತ್ತಕ ಅಧಿಕಾರವಿರುವುದನ್ನೊಪ್ಪಲು ಸಿದ್ಧರಿರಲಿಲ್ಲ. ಮುಂಬಯಿ ಶಾಖೆಯು ಪ್ರಚಲಿತವಿರುವಲ್ಲಿ ಮಾತ್ರ ಇದರಿಂದ ಭಾರಿ ಪರಿಣಾಮಗಳಾದುವು. ಅದುವರೆಗೆ ಜೀವನಾಂಶ ಮಾತ್ರ ಪಡೆಯುತ್ತಿದ್ದ ಶ್ರೀಮಂತ ಮನೆತನಗಳ ವಿಧವೆಯರು ಈಗ ಈ ನಿರ್ಣಯದ ಆಧಾರದಿಂದ ದತ್ತಕ ಮಾಡಿಕೊಂಡು ಗಂಡನ ಆಸ್ತಿಯನ್ನು ಪಡೆಯಲು ತೊಡಗಿದರು. ಇಷ್ಟೇ ಏಕೆ, ಕುರ್ತಕೋಟಿಯ ದ್ಯಾಮನಗೌಡರ ಈ ಮನೆತನದ ಮೇಲೂ ಅದು ವಿಚಿತ್ರ ಪರಿಣಾಮ ಬೀರಿತು.

## ಕುರ್ತಕೋಟಿ ಗೌಡರ ಚಿಕ್ಕ ಬಣದ ವಂಶಾವಳಿ

ದ್ಯಾಮನಗೌಡ ೧




ಮ. = ಮರಣ; ಹೆಂ. = ಹೆಂಡತಿ; ದ. = ದತ್ತಕ; ಜ. = ಜನನ.

ಅದುವರೆಗೆ ಪಂಚರ ಅವಾರ್ಡ್ ಮೇರೆಗೆ ಜೀವನಾಂಶ ಪಡೆದುಕೊಂಡು ಗುರುನಾಥಗೌಡನ ಬಳಿಯೇ ವಾಸವಾಗಿದ್ದ ತುಂಗಾಬಾಯಿ (ಎರಡನೆಯ ದ್ಯಾಮನಗೌಡನ ವಿಧವೆ) ತಾನು ತನ್ನ ತಂಗಿಯ ಮಗ ಶಂಕರನೆಂಬವನನ್ನು ದತ್ತಕ ಮಾಡಿಕೊಂಡಳು. ಅದು ೧೯೩೨ ರ ಡಿಸೆಂಬರಿನಲ್ಲಿ.

ಈ ಹೊಸ ದತ್ತಕವೆಂದರೆ ದೊಡ್ಡ ಆಟದಲ್ಲಿಯ ಅತ್ತ ಸೋಗಿನಂತೆ ನಡೆದುಹೋಯಿತು. ಶಂಕರನ ತಂದೆ ನರಸಿಂಹ ಮಹಾದೇವ ಉಡುಪಿಯವರು ಉಡುಪಿಯ ಕಡೆಯಿಂದ ಬಂದು ಧಾರವಾಡದಲ್ಲಿ ಆಗಿದ್ದ ಸದರ್ನ್ ಮರಾಠಾ ರೇಲ್ವೆಯ ಮುಖ್ಯ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದರು. ಈ ಕಚೇರಿ ಮದ್ರಾಸಿಗೆ ಸ್ಥಳಾಂತರ ಹೊಂದಿದ ಮೇಲೆ ಸಿವಿಲ್ ಕೋರ್ಟಿನಲ್ಲಿ ಕೆಲಸ ಮಾಡುತ್ತಲೇ ವಕೀಲಿ ಪರೀಕ್ಷೆ ಮುಗಿಸಿಕೊಂಡು ಧಾರವಾಡದಲ್ಲೇ ವಕೀಲರಾಗಿ ಒಳ್ಳೆಯ ಸಂಪಾದನೆಯನ್ನು ಮಾಡಿದರು. ಆದರೆ ೧೯೧೮ ರಲ್ಲಿ ಅವರ ಹೆಂಡತಿ ಮತ್ತು ಮಗ ಕಾಲವಶರಾದಾಗ ಒಂದು ವಿಧದ ವೈರಾಗ್ಯ ಭಾವನೆ ತಳೆದಿದ್ದು ಬಿಟ್ಟರು. ಆದರೆ ತುಂಗಾಬಾಯಿಯ ತಂದೆ ಇವರಿಗೆ ತಮ್ಮ ಎರಡನೆಯ ಮಗಳನ್ನು ಕೊಡಲು ಮುಂದಾದಾಗ ಸಂಸಾರದಲ್ಲಿ ಇವರಿಗೆ ಪುನಃ ಆಸ್ಥೆ ಕುದುರಿತು. ಇವರು ಭಾರಿ ಮುಂಗೋಪಿಯೆಂದೂ ಹೆಸರಾಗಿದ್ದರು. ಭೀಮಾಬಾಯಿ ವಿ. ಗುರುನಾಥಗೌಡ ಪ್ರಕರಣದಲ್ಲಾದ ನಿರ್ಣಯದ ಲಾಭ ಪಡೆಯಲು ಮುಂದಾಗಿ ಇವರು ತುಂಗಾಬಾಯಿಗೆ ತಮ್ಮ ಮಗ ಶಂಕರನನ್ನು ದತ್ತಕ ಮಾಡಿದರು. ಮಗ ಅಲ್ಪವಯಸ್ಕನಾಗಿದ್ದುದರಿಂದ ತಾವೇ Next friend ಎಂದು ಅವನ ಪರವಾಗಿ ಆಸ್ತಿಗಾಗಿ ದಾವೆ ಕೂಡ ಹೂಡಿದರು. ಗುರುನಾಥಗೌಡನಿಗೆ ಹಣದ ಬಲವಿದೆ, ನಾರಾಯಣನಿಗೆ ಜನಬೆಂಬಲವಿದೆಯಾದರೆ ತಮಗೆ ದೈವಬಲವಿದೆ ಎಂದು ಹೇಳಿಕೊಳ್ಳುತ್ತಲೇ ಇವರು ಕೆಲಸ ಪ್ರಾರಂಭಿಸಿದರು. ೧೯೩೨ ರ ಡಿಸೆಂಬರ್ ೮ ರಂದು ಇವರು ಶಂಕರನನ್ನು ತುಂಗಾಬಾಯಿಗೆ ದತ್ತಕ ಮಾಡಿದರು. ಮುಂದಿನ ೧೨ ವರ್ಷಗಳಲ್ಲಿ ಇವರ ಕುಟುಂಬದಲ್ಲಿ ಒಬ್ಬ ಮಗನನ್ನುಳಿದು ಹೆಂಡತಿಯನ್ನೊಳಗೊಂಡು ಒಬ್ಬೊಬ್ಬರಾಗಿ ಎಲ್ಲರೂ ಮರಣ ಹೊಂದಿದರೂ ಕೂರ್ತಕೋಟಿ ಆಸ್ತಿಯ ಮೋಹ ಇವರಿಗೆ ಹೋಗಲಿಲ್ಲ. ೧೯೪೩ ರ ಅಗಸ್ಟ ೧೨ ರಂದು ದತ್ತಕಪುತ್ರ ಇವರ ಮಗ ಶಂಕರ ಮರಣಹೊಂದಲು ಇನ್ನಾದರೂ ಆಸ್ತಿಯ ಪ್ರಕರಣದಿಂದ ಕೈತೊಳೆದುಕೊಂಡುಬಿಡುವಂತೆ ಬುದ್ಧಿವಾದ ಹೇಳಲು ಬಂದವರಿಗೆ, "ಅಭಿಮನ್ಯು ಮರಣಹೊಂದಿದರೆ ಅರ್ಜುನ ಧನುಷ್ಯವನ್ನು ಕೆಳಗಿಟ್ಟನೆ?" ಎಂದು ಸವಾಲು ಹಾಕಿದರಂತೆ. ಅಗಸ್ಟ ೧೨ ರಂದು ಶಂಕರ ಸತ್ತಾಗ ತಮ್ಮ ಉಳಿದೊಬ್ಬ ಮಗ ಕೃಷ್ಣನನ್ನು ಅವನು ತನ್ನ ಮರಣದ ಮುನ್ನಾದಿನವೇ ಮೌಖಿಕವಾಗಿ ದತ್ತಕ ಮಾಡಿಕೊಂಡಿದ್ದಾನೆಂದು ಈ ವಕೀಲರು ಸಾಧಿಸತೊಡಗಿದರು. ಅವರಿಗೆ ಕೆಲವು ಜನರ ಬೆಂಬಲವೂ ದೊರೆಯಿತು. ಆದರೆ ೧೯೪೮ ರ ಡಿಸೆಂಬರ್ ೨೦ ರಂದು ಕೃಷ್ಣ ಅವಿವಾಹಿತನಾಗಿಯೇ ನಿಧನಹೊಂದಿದ್ದರಿಂದ ನೀಲಕಂಠಗೌಡನ ಶಾಖೆ ಅಲ್ಲಿಗೆ ಕೊನೆಗೊಂಡಿತು. ಮಾತ್ರವಲ್ಲ, ತಮ್ಮ ಇದ್ದೊಬ್ಬ ಮಗನೂ ಕಾಲವಾದುದನ್ನು ಕಂಡು ಎದೆಯೊಡೆದುಕೊಂಡ ವಕೀಲರು ಕೂಡ ಹೆಚ್ಚು ಕಾಲ ಬದುಕಲಿಲ್ಲ.

ಪ್ರಿವೀ ಕೌನ್ಸಿಲ್ಲು ನಾರಾಯಣನ ದತ್ತಕವನ್ನು ಸ್ಥಿರಪಡಿಸಿದ ನಂತರ ಜೀವಣಗೌಡನ ಆಸ್ತಿಗೆ ಅವನೇ ಮಾಲಕನಾದನು. ಆದರೆ ಆ ಮೊದಲೇ ಹಿರಿಯ ದ್ಯಾಮನಗೌಡನ ಎಲ್ಲ ಆಸ್ತಿಯ ಕಬ್ಜಾ ಗುರುನಾಥಗೌಡನ ಕೈಗೆ ಬಂದು ಹನ್ನೆರಡು ವರ್ಷ ಮಿಕ್ಕಿ ಹೋಗಿತ್ತು. ವಿರುದ್ಧ ಕಬ್ಜೆಯಿಂದಾಗಿ ಇಡೀ ಆಸ್ತಿಯ ಒಡೆತನ ಅವನ ಕೈಬಿಡುವುದಿಲ್ಲವೆಂದು ಅವನಿಗೆ ವಕೀಲರ ಅಭಿಪ್ರಾಯ ದೊರೆತುದರಿಂದ ಅವನು ಅದರ ಪ್ರಯೋಜನ ಪಡೆಯಲು ನಿರ್ಧರಿಸಿದನು. ಆದ್ದರಿಂದ ತನ್ನ ಪ್ರತಿದ್ವಂದ್ವಿಗಳೊಂದಿಗೆ ಯಾವುದೇ ಬಗೆಯ ಒಪ್ಪಂದಕ್ಕೂ ಒಪ್ಪದೆಯೇ ಅವನು ಆಸ್ತಿಯ ಭಾಗವನ್ನು ಬಿಟ್ಟುಕೊಡಲು ನಿರಾಕರಿಸಿದನು. ಇದರಿಂದಾಗಿ ನಾರಾಯಣ ಮತ್ತು ಶಂಕರ ಕೋರ್ಟಿಗೆ ಹೋಗದೆ ಗತ್ಯಂತರವಿಲ್ಲದಾಯಿತು. ಧಾರವಾಡದ ಕೋರ್ಟಿನಲ್ಲಿ ಗುರುನಾಥಗೌಡನ ವಾದವೇ ಗೆದ್ದಿತು.

## ಹಿಂದು ವಾರಸಾ ಮತ್ತು ದತ್ತಕ...

ಹಿಂದು ವಾರಸಾ ಕಾಯಿದೆ ಕ್ರೋಡೀಕೃತವಾಗುವುದಕ್ಕೆ ಮುನ್ನ ಅವಿಭಕ್ತ ಹಿಂದು ಕುಟುಂಬದ ಆಸ್ತಿಯ ವಾರಸಾಕ್ಕೆ ಸಂಬಂಧಿಸಿದಂತೆ ಕಾಯಿದೆ ಹೀಗಿತ್ತು. ಮತ್ತು ಹಿಂದು ವಿಧವೆಗೆ ದತ್ತಕ ಅಧಿಕಾರ ಎಷ್ಟು ಮಟ್ಟಿಗಿತ್ತು ಎಂಬುವನ್ನರಿತರೆ ಭೀಮಾಬಾಯಿ ವಿ. ಗುರುನಾಥಗೌಡ ಪ್ರಕರಣದಲ್ಲಿಯ ಕ್ಲಿಷ್ಟ ಅಂಶಗಳು ಅರ್ಥವಾಗುವವು.

ಹಿಂದು ಅವಿಭಕ್ತ ಹಿಂದು ಕುಟುಂಬದಲ್ಲಿ ಪ್ರತಿಯೊಬ್ಬ ಪುರುಷನೂ ಅವನು ಹುಟ್ಟಿದ ಕ್ಷಣದಿಂದಲೇ ದಾಯಾದಿಯಾಗುತ್ತಾನೆ ಹಾಗು ಪಿತ್ರಾರ್ಜಿತ ಆಸ್ತಿಯಲ್ಲಿ ಸಹಭಾಗಿತ್ವದ ಹಕ್ಕು ಅವನಿಗೆ ಪ್ರಾಪ್ತವಾಗುತ್ತದೆ. ಅದೇ ರೀತಿ ಒಬ್ಬನು ಮರಣಹೊಂದಿದಾಗ ಅವನಿಗೆ ಗಂಡು ಸಂತಾನವಿಲ್ಲದಿದ್ದರೆ ಅವನ ಆಸ್ತಿ ಸಮೀಪದ ದಾಯಾದಿಗಳಿಗೆ ಹೋಗುತ್ತದೆ. ಸದ್ಯದ ಪ್ರಕರಣದಲ್ಲಿಯ ಉದಾಹರಣೆಯನ್ನೇ ನೋಡೋಣ. ಹಿರಿಯ ದ್ಯಾಮನಗೌಡರ ಮೂವರು ಮಕ್ಕಳಲ್ಲಿ ನಡುವಿನವನಾದ ಚಂದಪ್ಪಗೌಡ ೧೯೧೬ ರಲ್ಲೇ ಅವಿಭಕ್ತ ಕುಟುಂಬದಿಂದ ಹೊರಬಿದ್ದು ತನ್ನ ಪಾಲಿನ ಆಸ್ತಿಯನ್ನು ತೆಗೆದುಕೊಂಡು ಬಿಟ್ಟನು. ಆದರೆ ಹಿರಿಯವನಾದ ನೀಲಕಂಠಗೌಡ ಮತ್ತು ಕೊನೆಯವನಾದ ಜೀವಣಗೌಡ ಒಟ್ಟಾಗಿಯೇ ಇದ್ದುದರಿಂದ ಅವರದು ಅವಿಭಕ್ತ ಕುಟುಂಬವಾಗಿತ್ತು. ಜೀವಣಗೌಡ ೧೯೧೪ ರಲ್ಲಿ ಮರಣಹೊಂದಿದಾಗ ಅವನಿಗೆ ಗಂಡು ಮಕ್ಕಳಿರಲಿಲ್ಲವಾದ್ದರಿಂದ ಅವಿಭಕ್ತ ಕುಟುಂಬದ ಆಸ್ತಿಯ ಅವನ ಹಕ್ಕುಗಳೆಲ್ಲ ಅಣ್ಣ ನೀಲಕಂಠಗೌಡನಿಗೆ ಹೋದುವು. ನೀಲಕಂಠಗೌಡ ೧೯೧೫ ರಲ್ಲಿ ತೀರಿಕೊಳ್ಳುವ ಮುನ್ನ ದ್ಯಾಮನಗೌಡನನ್ನು ದತ್ತಕ ಮಾಡಿಕೊಂಡನು. ಆದ್ದರಿಂದ ಈ ಇಡೀ ಕುಟುಂಬದ ಆಸ್ತಿಗೆಲ್ಲ ಅವನೇ ಹಕ್ಕುದಾರನಾದನು. ೧೯೧೯ ರ ಆಗಸ್ಟನಲ್ಲಿ ದ್ಯಾಮನಗೌಡನ ಮರಣಕ್ಕೆ ಮೊದಲೇ ಅವನಿಗೆ ದತ್ತಾತ್ರಯ ಎಂಬ ಮಗ ಹುಟ್ಟಿದ್ದರಿಂದ, ಅವನ ನಂತರ ಎಲ್ಲ ಆಸ್ತಿಯ ಒಡೆತನವೂ ಈ ಮಗುವಿನದಾಯಿತು. ಮುಂದೆ ೧೯೩೦ ರಲ್ಲಿ ಈ ಮಗು ನಿಧನ ಹೊಂದಿದ ನಂತರ ಈ ಹಕ್ಕುಗಳು ಅತ್ಯಂತ ಸಮೀಪದ ಸಂಬಂಧಿಯೆಂದು ಗುರುನಾಥಗೌಡನಿಗೆ ಪ್ರಾಪ್ತವಾದುವಲ್ಲದೆ ಮಗುವಿನ ತಾಯಿ ತುಂಗಾಬಾಯಿ ಅವನಿಗೆ ಎಲ್ಲ ಆಸ್ತಿಯ ಕಬ್ಜೆ ವಹಿಸಿಕೊಟ್ಟಳು.

ಹಿಂದು ಅವಿಭಕ್ತ ಕುಟುಂಬದಲ್ಲಿ ಸ್ತ್ರೀಗೆ ಪಿತ್ರಾರ್ಜಿತ ಆಸ್ತಿಯ ಹಕ್ಕಿಲ್ಲ. ಅಲ್ಲದೆ ಅವಿಭಕ್ತ ಕುಟುಂಬದಲ್ಲಿಯ ವಿಧವೆಗೆ ದತ್ತಕ ಮಾಡಿಕೊಳ್ಳುವ ಅಧಿಕಾರ ಅತ್ಯಂತ ಸೀಮಿತವಾದುದು. ಗಂಡ ತನ್ನ ಸಾವಿಗೆ ಮುನ್ನ ಆಕೆಗೆ ತನ್ನ ಪರವಾಗಿ ದತ್ತಕ ಮಾಡಿಕೊಳ್ಳಲು ಅನುಜ್ಞೆಯಿತ್ತಿದ್ದರೆ ಮಾತ್ರ ಆಕೆ ಹಾಗೆ ಮಾಡಬಹುದಿತ್ತು. ಇಲ್ಲವಾದಲ್ಲಿ ಅವಿಭಕ್ತ ಕುಟುಂಬದಲ್ಲಿಯ ಇತರ ದಾಯಾದಿಗಳು ಒಪ್ಪಿದರೆ ಆಕೆಗೆ ಈ ಅಧಿಕಾರ ಹುಟ್ಟುತ್ತಿತ್ತು. ಭೀಮಾಬಾಯಿಯು ೧೯೧೯ ರ ಸಪ್ಟಂಬರಿನಲ್ಲಿ ನಾರಾಯಣನನ್ನು ದತ್ತಕ ಮಾಡಿಕೊಂಡಾಗ ಆ ಕುಟುಂಬದಲ್ಲುಳಿದಿದ್ದ ಏಕಮೇವ ದಾಯಾದಿ ಒಂಭತ್ತು ತಿಂಗಳ ಮಗು ದತ್ತಾತ್ರಯ. ಅಂತೆಯೇ ನಾರಾಯಣನ ದತ್ತಕ ಸಾಧುವೋ ಅಲ್ಲವೋ ಎಂಬ ಪ್ರಶ್ನೆ. ಪ್ರಿವೀ ಕೌನ್ಸಿಲು ಮುಂಬಯಿ ಪರಂಪರೆಯಲ್ಲಿ ಅವಿಭಕ್ತ ಹಿಂದು ಕುಟುಂಬದಲ್ಲಿಯ ವಿಧವೆಯು ಗಂಡನು ಅನುಮತಿ ನೀಡಿರದಿದ್ದಾಗಲೂ ದಾಯಾದಿಗಳ ಒಪ್ಪಿಗೆ ಪಡೆಯದೆ ದತ್ತಕ ಮಾಡಿಕೊಳ್ಳಬಲ್ಲಳು ಎಂದು ನಿರ್ಣಯಿಸಿತು.

---

ಮುಂಬಯಿ ಹೈಕೋರ್ಟಿನಲ್ಲಿ ಅಪೀಲು ವಿಚಾರಣೆ ನಡೆದು, ಅದು ಕೂಡ ಕೆಳ ಕೋರ್ಟಿನ ನಿರ್ಣಯವನ್ನೇ ಎತ್ತಿ ಹಿಡಿಯಿತು. ಈ ಎರಡೂ ಹಂತಗಳಲ್ಲಿ ಗುರುನಾಥಗೌಡನಿಗೆ ವೆಚ್ಚವನ್ನೂ ಕೊಡಿಸಲಾಯಿತು. ಆದರೆ ಹೈ ಕೋರ್ಟ್ ನಿರ್ಣಯ ಹೊರಬಂದ ಒಂದು ತಿಂಗಳಲ್ಲೇ ಗುರುನಾಥಗೌಡ ಮರಣಹೊಂದಿದನು. ಇದು ೧೯೩೮ ರ ಫೆಬ್ರುವರಿ ೨೦ ರಂದು.

ಮುಂಬಯಿ ಹೈಕೋರ್ಟಿನ ನ್ಯಾಯಾಧೀಶರು ಗುರುನಾಥಗೌಡನ ಪರವಾಗಿ ನಿರ್ಣಯ ನೀಡುವಾಗ ಹೇಳಿದ ಒಂದು ಮಾತು ಗಮನಾರ್ಹವಾಗಿದೆ: "ನಾರಾಯಣ ತೀರ ದುರ್ದೈವಿ. ಅವನಿಗಾಗಿ ಏನಾದರೂ ಅನುಕೂಲ ಮಾಡಬೇಕೆಂದು ಎಷ್ಟೇ ಸಹಾನುಭೂತಿಯಿಂದ ಪ್ರಯತ್ನಿಸಿದರೂ ಕಾಯದೆಯೇ ಅವನಿಗೆ ಪ್ರತಿಕೂಲವಿರುವಾಗ ನಮ್ಮ ಕೈ ಕಟ್ಟಿದಂತಾಗಿದೆ. ಕಾಯದೆಗಳನ್ನು ಮಾಡುವವರು ಇಂಥ ಪ್ರಸಂಗಗಳ ಬಗ್ಗೆ ವಿಚಾರ ಮಾಡಲಿ. ನಾವು ನ್ಯಾಯಾಧೀಶರಿಗೆ ಇರುವ ಒಂದೇ ದಾರಿಯೆಂದರೆ ಕಾಯದೆಗಳನ್ನು ಅವು ಇದ್ದಂತೆಯೇ ಅನ್ವಯಿಸುವುದು."

ಗುರುನಾಥಗೌಡನ ಮರಣದ ನಂತರ ಅವನ ವಾರಸಾದ ಬಗ್ಗೆಯೂ ತೊಂದರೆ ಉದ್ಭವಿಸುವ ಲಕ್ಷಣಗಳು ತೋರಿಬರತೊಡಗಿದುವು. ಅವನಿಗೆ ಇಬ್ಬರು ಹೆಂಡಂದಿರು—ಪುಟ್ಟಾಬಾಯಿ ಮತ್ತು ಸುಭದ್ರಾಬಾಯಿ. ಪುಟ್ಟಾಬಾಯಿಯ ವಿವಾಹ ಗುರುನಾಥಗೌಡನು ದತ್ತಕ

ಹಾಗುವ ಮುನ್ನವೇ ಆಗಿ ಒಬ್ಬ ಮಗ ಕೂಡ ಇದ್ದನು. ಆದರೆ ಆಕೆ ಗಂಡನ ಬಳಿಯಿರದೆ ಜೀವನಾಂಶ ಪಡೆದುಕೊಂಡು ಗದಗಿನಲ್ಲಿ ತಂದೆಯ ಮನೆಯಲ್ಲಿದ್ದಳು. ಸುಭದ್ರಾಬಾಯಿಗೆ ಮಕ್ಕಳಾಗ ಲಿಲ್ಲ. ಈಗ ಈ ವಿಧವೆಯರಿಬ್ಬರೂ ತಮ್ಮೊಳಗೆ ವಿಚಾರ ಮಾಡಿಕೊಂಡು ನ್ಯಾಯನಿರ್ಣಯವನ್ನು ಪಂಚರಿಗೊಪ್ಪಿಸಿ ಅವಾರ್ಡ್ ಪಡೆದರು; ಹಾಗು ಅದನ್ನು ಕೋರ್ಟಿಗೆ ಸಲ್ಲಿಸಿ, ಡಿಕ್ರಿ ಸಹ ಪಡೆದರು. ಅದರನ್ವಯ ಪುಟ್ಟಾಬಾಯಿ ತನ್ನ ತಮ್ಮ ಲಕ್ಷ್ಮಣನನ್ನು ದತ್ತಕ ಮಾಡಿಕೊಂಡಳು.

ಗುರುನಾಥಗೌಡ ಕಾಲವಾದುದರಿಂದ ನಾರಾಯಣ ಮತ್ತು ಶಂಕರ ಇಬ್ಬರೂ ಪುಟ್ಟಾಬಾಯಿ, ಸುಭದ್ರಾಭಾಯಿ ಮತ್ತು ಪಂಚರ ಅವಾರ್ಡಿನಂತೆ ದತ್ತಕವಾಗಿ ಬಂದ ಲಕ್ಷ್ಮಣ ಈ ಮೂವರನ್ನೂ ಪ್ರತಿವಾದಿಯರೆಂದು ಕಾಣಿಸಿ ಮುಂಬಯಿ ಹೈಕೋರ್ಟ್ ನಿರ್ಣಯದ ವಿರುದ್ಧ ಪ್ರಿವೀ ಕೌನ್ಸಿಲ್ಲಿಗೆ ಅಪೀಲು ಮಾಡಿದರು. ಕೌನ್ಸಿಲ್ಲಿನೆದುರು ೧೯೪೪ರಲ್ಲಿ ಪ್ರಕರಣ ವಿಚಾರಣೆಗೆ ಬಂದು ಅದರಲ್ಲಿ ಲಕ್ಷ್ಮಣನ ದತ್ತಕವು ಸಾಧುವೊ ಅಸಾಧುವೊ ಎಂಬ ಪ್ರಶ್ನೆಯೂ ಎತ್ತಲ್ಪಟ್ಟಿತು. ಆದರೆ ಪ್ರಿವೀ ಕೌನ್ಸಿಲ್ಲು ಈ ಅಂಶದ ಬಗ್ಗೆ ಯಾವುದೇ ನಿರ್ಣಯ ಹೇಳದ್ದರಿಂದ ಅದು ಇದುವರೆಗೂ ಅನಿರ್ಣೀತವಾಗಿಯೆ ಉಳಿದಿದೆ. ಆದರೂ ಆಸ್ತಿಯ ಸಂಬಂಧದಲ್ಲಿ ನಾರಾಯಣನ ಅಪೀಲನ್ನು ಅದು ತಿರಸ್ಕರಿಸಿದ್ದರಿಂದ ಮೂಲ ಮನೆತನದ ಆಸ್ತಿಯೆಲ್ಲ ಇಂದಿಗೂ ಲಕ್ಷ್ಮಣನ ವಶದಲ್ಲಿಯೇ ಉಳಿದಿದೆ.

ಈ ಮಧ್ಯೆ ಈ ಎರಡನೆಯ ಅಪೀಲು ಪ್ರಿವೀ ಕೌನ್ಸಿಲಿನಲ್ಲಿರುವಾಗಲೇ ಇನ್ನೊಬ್ಬ ಅಪೀಲುದಾರ ಶಂಕರ ೧೯೪೬ರಲ್ಲಿ ಮೃತನಾದ್ದರಿಂದ ಅವನ ಅಪೀಲು ಹಾಗೆಯೇ ಉಳಿಯಿತು. ಮುಂದೆ ೧೯೪೯ರಲ್ಲಿ ಶಂಕರನ ದತ್ತಕ ಮಗ ಕೃಷ್ಣನೂ ನಿಧನ ಹೊಂದಿದನಂತರ ಅವನ ಸ್ಥಳದಲ್ಲಿ ಹಯಾತ (Survivor) ಎಂದು ನಾರಾಯಣನೇ ಅರ್ಜಿ ಸಲ್ಲಿಸಿದ್ದರಿಂದ ಪ್ರಿವೀ ಕೌನ್ಸಿಲ್ಲಿನೆದುರು ಮತ್ತೆ ವಿಚಾರಣೆ ನಡೆಯಿತು. ಆದರೆ ಅದರಲ್ಲೂ ಜಯ ಸಿಕ್ಕಲಿಲ್ಲ.

ಅಂತೂ ಒಂದೇ ಆಸ್ತಿಯ ಬಗ್ಗೆ ಒಬ್ಬನೇ ಮೂರು ಸಲ ಸರ್ವೋಚ್ಚ ನ್ಯಾಯಾಲಯದ ಕಟ್ಟೆ ಹತ್ತಿ ಬಂದರೂ ವಸ್ತುತಃ ನಿಷ್ಪ್ರಯೋಜಕವಾದಂಥ ಅಪೂರ್ವ ಘಟನೆಯಿದು. ಈ ನ್ಯಾಯ ಪ್ರಾರಂಭವಾದಾಗ ಅದಕ್ಕೆ ಸಂಬಂಧಿಸಿದಂತೆ ಇದ್ದ ಯಾವ ವ್ಯಕ್ತಿಗಳೂ ೩೦ ವರ್ಷಗಳ ನಂತರ ಅದಕ್ಕೆ ಮಂಗಳ ಹಾಡಿದಾಗ ಉಳಿದಿರಲಿಲ್ಲ-ನಾರಾಯಣಗೌಡರೊಬ್ಬರನ್ನುಳಿದು. ಅವರ ದತ್ತಕ ಸಾಧುವೆಂದು ನಿರ್ಣಯಿಸಬೇಕಾದರೆ ಸರ್ವೋಚ್ಚ ನ್ಯಾಯಾಲಯ ಹಿಂದಿನ ದತ್ತಕ ಕಾಯದೆಯಲ್ಲೇ ಕ್ರಾಂತಿಕಾರಕ ಹೊಸ ಹೆಜ್ಜೆಯಿರಿಸಿ ಇತಿಹಾಸ ನಿರ್ಮಿಸಿತು. ಆದರೂ ಅದರಿಂದ ವಾಸ್ತವಿಕವಾಗಿ ದೊರೆಯಬೇಕಾದ್ದ ಯಾವ ಪ್ರಯೋಜನವೂ ದೊರೆಯದೇ ದತ್ತಕ ಮಾತಾಪಿತೃಗಳಿಗೆ ವರ್ಷ ವರ್ಷವೂ ತಿಲ-ತರ್ಪಣ ಮಾಡುತ್ತ, ಅವರಿಗೆ ಸದ್ಗತಿದೊರಕಿಸುವುದಕ್ಕೆ ಮಾತ್ರ ಬಾಧ್ಯಸ್ಥರಾಗಿರುವಂತೆ ದರಿದ್ರ-ನಾರಾಯಣನಾಗಿ, ತಮ್ಮ ಏಕಮಾತ್ರ ಪುತ್ರ-ನೊಂದಿಗೆ ಗದಗಿನಲ್ಲಿಂದಿಗೂ ವಾಸವಾಗಿದ್ದಾರೆ, ನಾರಾಯಣಗೌಡರು.

ಆದರೆ ಇದರಲ್ಲಿ ತೋರುವ ಒಂದು ವಿಚಿತ್ರವೆಂದರೆ ಇಲ್ಲಿ ಮೊದಲನೆಯ ದತ್ತಕ ಪ್ರಕರಣ ಪ್ರಾರಂಭವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ಅಂತಿಮ ನಿರ್ಣಯ ಬರುವ ಮುನ್ನ ೧೨ ವರ್ಷಗಳು ಕಳೆದು ಹೋದವು. ಹೀಗಿರುವಾಗ ಪ್ರಾರಂಭದ ನ್ಯಾಯಾಲಯದಿಂದ ಕೊನೆಯ ನ್ಯಾಯಾಲಯದ ವರೆಗಿನ ಎಲ್ಲ ಹಂತಗಳಲ್ಲೂ ಭೀಮಾಬಾಯಿ ಮತು ನಾರಾಯಣನಿಗೆ ಸಲಹೆ ನೀಡಿದ ಯಾವ ವಕೀಲರಿಗೂ ಅವಧಿ–ಬಾಧಕ ಕಾಯದೆ ಮುಂದೆ ತಮ್ಮ ಕಕ್ಷಿಗಾರರಿಗೆ ಮಾರಕವಾಗಬಹುದೆಂಬ ಕಲ್ಪನೆ ಅದೇತು ಬರಲಿಲ್ಲವೊ!

ಕುರ್ತಕೋಟಿಯ ಕೆಲ ಮನೆತನಗಳವರು ಈ ವ್ಯಾಜ್ಯದಲ್ಲಿ ಭೀಮಾಬಾಯಿ ಮತ್ತು ನಾರಾಯಣಗೌಡರ ಪಕ್ಷ ವಹಿಸಿ ಲಕ್ಷಗಟ್ಟಲೆ ಹಣ ಸುರಿಸಿದರಂತೆ. ಕೊನೆಗೂ ಅದೆಲ್ಲ ವ್ಯರ್ಥವಾಗಿಯೇ ಪರಿಣಮಿಸಿತು. ! ಅಂತೂ ಇವರಲ್ಲಿ ಒಂದು ಪಕ್ಷ ಗೆದ್ದು ಸೋತರೆ, ಇನ್ನೊಂದು ಸೋತು ಗೆದ್ದಂತಾಯಿತು. ✿

# ಮೂರು ಮೊಗದವನು

ಶ್ರೀ ದೇವದತ್ತ

ಕೇಳಿ, ನನ್ನಯ ತಂದೆ ಇಂಗ್ಲಂಡ್ ರಿಟರ್ನ್ಡ್
ನನ್ನ ತಾಯಿಯು ಮಾತ್ರ 'ಮಲ ಏಶಿಯಾ'
ಹೊತ್ತು ಒಂದಂತೆನ್ನ ಹೊದಿಕೆ ಟರ್ನ್ಡ್
ನನಗಿಟ್ಟ ಹೆಸರೇ 'ಅನಾಸ್ಥೇಶಿಯಾ' ೧

ಮೊದಲಿದ್ದಂತೆನಗೆ ಮೂರು
ಮಲತಾಯಿಯರು
ರಶಿಯನ್ ಅಮೇರಿಕನ್ ಡೆನ್ಮಾರ್ಕಿನವರು
ಇದ್ದರಂತೆನಗಿಬ್ಬರೇನೆ ಮಲತಂದೆಯರು
ಒಬ್ಬರೋ ಚೀನೀ, ಜಪಾನಿ ಇನ್ನೊಬ್ಬರು ೨

ದೆಹಲಿ ಅಂತಾರಾಷ್ಟ್ರ ಶಾಲೆಯಲಿ
ಪ್ರಾಥ'ಮಿಕ'
ಸೋವಿಯೆಟ್ ರಶಿಯಾದ ಮಾಸ್ಕೋದಿ
ಮಾಧ್ಯ'ಮಿಕ'
ಉಚ್ಚ ಶಿಕ್ಷಣವು ಇಂಗ್ಲಂಡ್ ಲಂಡನ್ನಿನಲಿ.
ಸ್ನಾತಕೋತ್ತರವು ವಾಶಿಂಗ್'ಟನ್ನಿ'ನಲ್ಲಿ ೩

ಪೀಯೆಚ್‌ಡಿ, ಎಮ್ಮೀಡಿ, ಬ್ಯಾಚಲರು
ಮಾಸ್ಟರು
ಹಣೆತುಂಬ ಪದವಿಗಳ ಪ್ಲಾಸ್ಟರೇ ಪ್ಲಾಸ್ಟರು
ಪಕ್ಕ ಪೊಲಿನೇಶಿಯನ್ ವ್ಹಿ ಆಯ್ ಪಿ.
ಬಾಯಿ ಬಿಟ್ಟದ್ದೆಲ್ಲ 'ಸರಿಗಮ'ದ ಪೀಪಿ! ೪

ಇಂಡಿಯಾ-ದ್ಯಾಟೀಜ್ ಭಾರತದಿ ನಾನೀಗ
ಫಾರೇನ್ ರಿಟರ್ನ್ಡ್ ಪಾಲಿಟಿಕ್ ತಜ್ಞ
'ನಾಗ'!
ದೇಶದ ಮಹಮಹಾ ಬಿಝಿನೆಸ್ಸ ಮ್ಯಾಗ್ನೆಟ್ಟು
ನನ್ನನೆತ್ತಲು ಸೇರಿದೆನು ಕೇಂದ್ರ
ಕೆಬಿನೆಟ್ಟು ೫

ಆಗ ನಾಡಿನಲಿ ಇರಲಿಲ್ಲವೇತಕು ಕಟ್ಟು
ಆದರೆಲ್ಲೆಡೆಗು ಎಲ್ಲಕ್ಕೂನು ಬಿಕ್ಕಟ್ಟು
ಬೆಲೆ ಏರಿಕೆಯು ಬಳ್ಳಿ ಸಿಕ್ಕಲ್ಲೆ ದಾಂಗುಡಿ;
ಆಹಾರ ಸಮೃದ್ಧಿ! ರೇಶನ್ನಿನಂಗಡಿ! ೬

ನಿಯಮ ನಿರ್ಬಂಧ ಮನ-ಮಾನ
ಬದಲಾದಂತೆ
ಮೂಲಭೂತದ ಘಟನೆ ತಿದ್ದುಪಡಿ ಸಂತೆ
ತಗಲೂs ಬಗಲೂs ಕದಲು ಕಂಚೀ ಬದಲು
ಯಾವುದಾಡಿದರೂನು ಅದು ಮೊದಲು
ತೊಡಲು ೭

ಕರವು! ಗೌಳಿಗ ಆಕಳಿಗೆ ಕರವ ಬಿಟ್ಟಂತೆ
ಕರೆಕಿಲ್ಲ, ಹಾಲೆಲ್ಲ ಮಾರುವನ ಪಾಲಂತೆ.
ತಿಂದರುಂಡರು ಟ್ಯಾಕ್ಸು ಕುಳಿತರೆದ್ದರು
ಟ್ಯಾಕ್ಸು
ಹುಟ್ಟು ಸಾವಿಗು ಟ್ಯಾಕ್ಸು, ಇದೆ
ಕಾರ್ಲ್‌ಮಾರ್ಕ್ಸ್ ೮

ನಾ ಜ್ಯಾಕಫಾಲ್ ಬರ್ಟ್, ಮಾಸ್ಟರಾಫ್ ನನ್ನು
ನನ್ನ ದನಿ ಯೂ, ನೋ, ಸೆಕ್ಯುರಿಟಿ
ಸ್ಲೋಗನ್ನು!
ಪೀಸು! ಪೀಸು! ಕಂಸಿನಲಿ ಕಟ್ ಪೀಸು!
ಇದೆ ನನ್ನ ಪ್ರಾಜಕೀ ಜೀವನದ ಹಾಸು ೯

ನಾನು ಇಂಟರ್‌ನ್ಯಾಶನಲ್ ವ್ಯಕ್ತಿಯು
ಭಾರತದೆ ಜಾಗತಿಕ ರಾಜಕಾರಣಿಯು
ಡೇಮಾಕ್‌ರಸೀ ರಸಕಸೀ ಮೂರು
ಮೊಗದವನು
ಕಟ್ಟುತಿಹೆ ಸುಪ್ರಜಾಪ್ರಭುತೆಯನ್ನು ೧೦



# ಇದುವೆ ಜೀವನ ಇದು ಜೀವನ

ನನ್ನ ಮದುವೆಯಾಗಿ ಐದಾರು ತಿಂಗಳಾಗಿತ್ತಷ್ಟೆ. ಮೊದಲ ದೀಪಾವಳಿಗೆ ಅಳಿಯತನಕ್ಕೆ ಬರಬೇಕೆಂದು ನನ್ನ ತವರಿನಿಂದ ಪತ್ರ ಬಂದಿತ್ತು. ಅದರಂತೆಯೇ ನಾವಿಬ್ಬರೂ ಹೋಗಿದ್ದೆವು. ಅಲ್ಲಿ ನನ್ನ ಮನೆ ಇರುವುದು ಒಂದು ಸಾಧಾರಣ ಹಳ್ಳಿಯಲ್ಲಿ. ನಮ್ಮ ತಂದೆಯವರು ಇದ್ದ ಸ್ವಲ್ಪ ಆಸ್ತಿಯ ಮೇಲ್ವಿಚಾರಣೆ ನೋಡಿಕೊಂಡು ಮನೆಯಲ್ಲೇ ಇದ್ದರು.

ಮೊದಲೇ ಹಬ್ಬದ ಸಡಗರ. ಅದರಲ್ಲೂ ಮನೆಯವರೆಲ್ಲರೂ ಒಟ್ಟಿಗೆ ಸೇರಿದರೆ ಬೇರೆ ಹೇಳಬೇಕಿಲ್ಲ. ನನ್ನ ಅಣ್ಣನೂ ಉಡುಪಿಯಲ್ಲಿ ಉದ್ಯೋಗ ಮಾಡುತ್ತಿದ್ದವನು ಮನೆಗೆ ಬಂದಿದ್ದ. ಎಲ್ಲರೂ ಸೇರಿ ವಿನೋದದಿಂದ ಮಾತನಾಡುತ್ತಿದ್ದೆವು. ಮಾತು ಮುಂದುವರಿದು, ನನ್ನ ತಂಗಿಯರಾದ ಆಶಾ, ಲತಾ, ಉಷಾ ಇವರೆಲ್ಲ ಪಟಾಕಿಗಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಎಷ್ಟೆಷ್ಟು ಖರ್ಚು ಮಾಡಿರುವರು ಎನ್ನುವಲ್ಲಿಗೆ ಬಂದಿತು. ಆಗ ಎಲ್ಲರಿಗಿಂತಲೂ ಹೆಚ್ಚಾಗಿ ಖರ್ಚು ಮಾಡಿದವನು ನನ್ನ ಕೊನೆಯ ಏಳು ವರ್ಷದ ತಮ್ಮ ಮುರಲಿ ಅನ್ನುವುದು ಗೊತ್ತಾಗಿ ಎಲ್ಲರ ಮಾತೂ ಅವನಲ್ಲೇ ಕೇಂದ್ರೀಕರಿಸಿತು. ಎಲ್ಲರಿಗಿಂತಲೂ ಹೆಚ್ಚಾಗಿ ಅಂಗಡಿಗೆ ದುಡ್ಡು ಸುರಿದು ಬಂದವನು ಅವನೆ ಎಂದುಕೊಂಡ ನನ್ನ ತಂದೆಯವರಿಗೆ ಸಿಟ್ಟು ಬಂತು. ಆಗ ಅಂಗಳದ ಮೂಲೆಯಲ್ಲಿ ಬುಗುರಿ ತಿರುಗಿಸುತ್ತ ನಿಂತಿದ್ದ ನನ್ನ ತಮ್ಮ ಒಮ್ಮೆಲೇ, "ಹೌದಾ ಅಪ್ಪಯ್ಯ. ಎಲ್ಲರಿಗಿಂತ ಹೆಚ್ಚು ದುಡ್ಡು ಅಂಗಡಿಗೆ ಹಾಕಿದ್ದು ನಾನೇ ಅಂತ ಹೇಗೆ ಹೇಳ್ತೀರಿ? ನಿನ್ನೆ ಅಣ್ಣ ಕೊಟ್ಟ ಅಷ್ಟೂ ನೋಟನ್ನು ನೀವು ಏನು ಮಾಡಿದ್ದು?" ಎಂದ. ನಾವೆಲ್ಲ ಪೆಚ್ಚಾಗಿ ಅಪ್ಪಯ್ಯನ ಮುಖ ನೋಡಿದೆವು. ಅವರ ಏರಿದ್ದ ಸಿಟ್ಟು ಹಾಗೇ ಇಳಿದಿತ್ತು. "ಹೌದು ಮಾರಾಯ, ನಾನೂ ಅಂಗಡಿಗೇ ಹಾಕಿ ಬಂದೆ. ಒಳ್ಳೆಯದಕ್ಕೆ ಆಗ್ಲಿ, ಕೆಟ್ಟದ್ದಕ್ಕೆ ಆಗ್ಲಿ, ನಮ್ಮ ದುಡ್ಡೆಲ್ಲ ಹೋಗುವುದು ಅಂಗಡಿಗೇ," ಎಂದರು.

ಕೆ. ಪಿ.

ಸುಮಾರು ಹತ್ತು ವರ್ಷಗಳ ಹಿಂದಿನ ಘಟನೆ. ಒಂದು ಸಾಯಂಕಾಲ ಚಲನಚಿತ್ರ ನೋಡಲು ಹೋಗಿದ್ದೆ. ಟಿಕೆಟ್ ಕೊಳ್ಳಲು ಜೇಬಿನಲ್ಲಿ ಹಣಕ್ಕಾಗಿ ಕೈಯಿರಿಸಲು ಮನಿ ಪರ್ಸ್ ಮಾಯವಾಗಿದ್ದು ಕಂಡುಬಂತು. ಜೋಲು ಮೋರೆ ಹಾಕಿಕೊಂಡು ಮನೆಗೆ ಬಂದೆ

ಒಂದೆರಡು ದಿವಸಗಳ ತರುವಾಯ ನನ್ನೊಬ್ಬ ಬಾಲ್ಯಮಿತ್ರರಾದ ವಕೀಲರ ಮನೆಗೆ ಹೋಗಿದ್ದೆ. ಅವರಿಗೆ ನನ್ನ ಹಣ ಕಳೆದುದನ್ನು ತಿಳಿಸಿದೆ. ಮುಂದೆ ನಮ್ಮ ಏಕವಚನದಲ್ಲಿಯ ಸಂಭಾಷಣೆ ಚಹಾಪಾನ, ಅವರ ಪ್ರಾಕ್ಟೀಸ್, ನನ್ನ ಉದ್ಯೋಗ ಮುಂತಾದವುಗಳ ಕಡೆಗೆ ತಿರುಗಿತು. ಏತನ್ಮಧ್ಯೆ ಅಲ್ಲಿ ಒಬ್ಬ ನಡು ಹರೆಯದ ತರುಣನು ನನ್ನನ್ನೇ ಹೆಚ್ಚು ಕಡಿಮೆ ಮಿಕಿ-ಮಿಕಿ ನೋಡುತ್ತಿದ್ದುದು ಕಂಡು ಬಂತು. ಅವನು ವಕೀಲರ ಕಕ್ಷಿಗಾರನೆಂಬುದು ನಂತರ ತಿಳಿಯಿತು.

ಸ್ವಲ್ಪ ವೇಳೆಯಲ್ಲಿ ವಕೀಲರ ತಾಯಿ ಅಲ್ಲಿಗೇ ಬಂದು ಬಹು ಆತ್ಮೀಯತೆಯಿಂದ ತಾವು ಹೊಸದಾಗಿ ಕಟ್ಟಿಸಿದ ಮನೆಯನ್ನು ತೋರಿಸಲು ನನ್ನನ್ನು ಕರೆದೊಯ್ದರು. ಒಂದರ್ಧ ತಾಸಿನೊಳಗೆ ನಾನು ಮರಳಿ ಬಂದೆ ಒಡನೆ ನನ್ನ ಮಿತ್ರ, "ನಡೀಪಾ, ಇವತ್ತು ಶನಿವಾರ; ಹನುಮಂತ ದೇವರಿಗೆ ಹೋಗಿ, ಪಾರ್ಟಿ, ಸಿನೇಮಾ, ಎಲ್ಲಾ ಮಾಡಿ ಮೂವತ್ತೈದು ರೂಪಾಯಿನೂ ಖರ್ಚು ಮಾಡಿ ಬರೋಣ," ಎಂದ. ನಾನು ಸ್ವಲ್ಪ ವಿಸ್ಮಯಗೊಂಡು ಕಾರಣ ಕೇಳಲು, ಅಲ್ಲಿ

ಆ ವರೆಗೆ ಕುಳಿತಿದ್ದ ತರುಣನೇ ನನ್ನ ಮನಿ ಪರ್ಸನ್ನು ನಾನು ಸಿನೇಮಾ ಥೇಟರಿನಲ್ಲಿ ಟಿಕೆಟ್ಟು ಕೊಳ್ಳುವ ಸಾಲಿನಲ್ಲಿದ್ದಾಗ ಹಾರಿಸಿದ್ದನೆಂದೂ, ಅದರಲ್ಲಿಯ ಒಟ್ಟು ಸುಮಾರು ನಾಲ್ಕತ್ತಾರು ರೂಪಾಯಿಗಳ ಪೈಕಿ ಒಂಭತ್ತು ರೂಪಾಯಿಗಳನ್ನು ಖರ್ಚು ಮಾಡಿ, ಉಳಿದ ಮೂವತ್ತೈದು ರೂಪಾಯಿಗಳನ್ನು ಪಾಕೀಟುಸಹಿತ ಅದರಲ್ಲಿದ್ದ ದೇವರ ಫೋಟೋದೊಂದಿಗೆ ವಕೀಲರ ಕೈಯಲ್ಲಿ ಕೊಟ್ಟು ಕ್ಷಮೆ ಕೇಳಿ ಹೊರಟುಹೋದನೆಂದೂ ಹೇಳಿದರು.

ಅಂದು ನನ್ನ ಮಿತ್ರರೊಡನೆ ಮೂವತ್ತೈದು ರೂಪಾಯಿಗಳ ಪಾರ್ಟಿ, ಸಿನೇಮಾ ಮಾಡದಿದ್ದರೂ ಶ್ರೀ ಹನುಮಂತದೇವರಿಗೆ ಕಾಯಿ ಕರ್ಪೂರ ಮಾಡಿಸುವದನ್ನು ಮಾತ್ರ ಮರೆಯಲಿಲ್ಲ.

— ಮಹಾದೇವ ಕರಮಾರಿ

ಪುಟ್ಟ ನೀರಜಗೆ ಕಥೆಯ ಹುಚ್ಚು ಬಹಳ. ಅವಳಿಗೆ ಕಥೆ ಹೇಳಿ ಹೇಳಿ ನಮ್ಮ ಮನೆಯ ವಿದ್ವಾಂಸರೆಲ್ಲರ ಭಾಂಡಾರಗಳು ಬರಿದಾಗಿದ್ದವು. ಆದರೆ ನೀರಜಳ ಕಥಾಕೋಶ ಮಾತ್ರ ದಿನ ದಿನಕ್ಕೂ ವಿಸ್ತಾರವಾಗುತ್ತಿತ್ತು.

ಆ ದಿನ ಮಧ್ಯಾಹ್ನ ನೀರಜಳ ಅಮ್ಮ ಮಲಗಿದ್ದಳು. ನೀರಜ ಹೊರಗಡೆ ಗಾಯತ್ರಿಯ ಜೊತೆ ಆಡುತ್ತಿತ್ತು. ಆದರೆ ಎಷ್ಟು ಹೊತ್ತೂಂತ ಆಡಲಿಕ್ಕೆ ಸಾಧ್ಯ? ಆಡಿ ಬೇಸರಗೊಂಡು ಒಳಗೆ ಬಂದ ನೀರಜ ಅಮ್ಮನ ಹಕ್ಕದಲ್ಲಿ ಕುಳಿತು, 'ಅಮ್ಮ ಏನು ಮಾಡ್ತಿದ್ದೀಯೇ' ಎಂದು ತಲೆ ನೇವರಿಸಿ ಪೂಸಿ ಮಾಡಿ ಕೇಳಿತು.

"ನಿದ್ದೆ ಮಾಡ್ತಿದ್ದೀನಿ ಮರೀ."

"ನಿಂಗೆ ಚೆನ್ನಾಗಿ ನಿದ್ದೆ ಬರುತ್ತೆ. ನಾನು ಕಥೆ ಹೇಳ್ತೀನಿ, ಹ್ಞೂ ಅಂದ್ಕೊಂಡು ಮಲಕ್ಕೊ......ಹ್ಞ......ಚೆನ್ನಾಗಿ ನಿದ್ದೆ ಬರುತ್ತೇ."

"ಹೇಳು ಮರೀ"

"ಒಂದೂರು."

"ಹ್ಞೂ,"

"ಅಲ್ಲೊಬ್ಬ ರಾಜ."

"ಅವನ್ಗೆ ಸಂಗೂ ನಿದ್ರೆ ಬರುತ್ತೆ."

"ಹ್ಞೂ. ಮಲಕ್ಕೋಪ್ಪಾ."

"ನಂಗೆ ಚೆನ್ನಾಗಿ ನಿದ್ರೆ ಬರ್ಬೇಕಲ್ಲ. ಏನ್ಮಾಡ್ಲೇ ಅಮ್ಮಾ?" ಕೌಸಲ್ಯಾ ಧರ್ಮೇಂದ್ರ

ನನ್ನ ಗೆಳತಿಯೊಬ್ಬಳ ಮನೆಯಲ್ಲಿ ನಡೆದ ಘಟನೆಯಿದು. ಆ ದಿನ ಅವಳ ದೊಡ್ಡಪ್ಪ, ಸಂಜೆಯ ಸಮಯದಲ್ಲಿ ಮನೆಯ ಮುಂದೆ ಕುಳಿತಿದ್ದರು. ಆಗ ಎದುರು ಮನೆಯ ಹುಡುಗರು, "ಕಣ್ಣಾ ಮುಚ್ಚೇ, ಕಾಡೇ ಗೂಡೇ"... ಆಡುವ ಆಟ ಕಣ್ಣಿಗೆ ಬಿತ್ತು. ಏನು ಅನ್ನಿಸಿತೋ, ದೊಡ್ಡಪ್ಪನಿಗೆ, ಅವರು ಆ ಹುಡುಗರನ್ನು ಕರೆದು "ನೀವು ಆಡುತ್ತಿರುವ ಆಟದ ಅರ್ಥ ಗೊತ್ತೆ?" ಎಂದು ವಿಚಾರಿಸಿದರಂತೆ. ಆ ಹುಡುಗರು ಗೊತ್ತಿಲ್ಲ ಅಂದಾಗ, ಅವರು "ಕಣ್ಣಾ ಮುಚ್ಚೆ ಅಂದ್ರೆ, ಮನುಷ್ಯ ಸತ್ತಾಗ; ಕಾಡೇ ಗೂಡೇ... ಈ ಗೂಡು, ಈ ದೇಹ ಕಾಡಾದ ಹಾಗೇ ಆಗುತ್ತೆ. ಉದ್ದಿನ ಮೂಟೆ ಉರುಳೇಹೋಯ್ತು. ಉದ್ದಿನ ಮೂಟೆ ಅಂದ್ರೆ ಈ ದೇಹ, ಇದು ಬಿದ್ದುಹೋಗುತ್ತೆ ಅಂತ. ನಮ್ಮಯ ಹಕ್ಕಿ ಬಿಟ್ಟೇ ಬಿಟ್ಟೆ ಅಂದ್ರೆ ಈ ಪ್ರಾಣ ದೇಹಬಿಟ್ಟು ದಾರಿ ಹೋಗಿದೆ ಅಂತ," ಎಂದು ಹೇಳಿದರು. ಆಗ ದೊಡ್ಡಪ್ಪನ ಈ ರೀತಿ ಮನೆಯವರಿಗೆಲ್ಲಾ ಆಶ್ಚರ್ಯವನ್ನು ಉಂಟುಮಾಡಿತ್ತು. ಆದರೆ ಅದೇ ದಿನ ರಾತ್ರಿ ಸುಮಾರು ಎಂಟು ಘಂಟೆಯ ಹೊತ್ತಿಗೆ ದೊಡ್ಡಪ್ಪ ಹೃದಯಾಘಾತದಿಂದ ಕಾಲವಾದರು.

— ಆರ್. ಬಿ. ಅಂಬ

# ಮೂಷಕ ವಿಷಗಳು

## ಇಲಿಗಳಿಗೆ ವಿಷವಿಕ್ಕುವಾಗ ಜೋಕೆ

ಡಾ. ಎಂ. ಎಂ. ಭಟ್ಟ

ಬೊಮ್ಮನಹಳ್ಳಿಯಲ್ಲಿ ಕಿರುಕಳ ಕೊಡುತ್ತಿದ್ದ ಇಲಿ ಹೆಗ್ಗಣಗಳ ಸೈನ್ಯವನ್ನು ಕೊಳಲೂದಿ ಕಿಂದರಿಜೋಗಿ ಪತೋಟಿಗೆ ತಂದ ಕಥೆ ಕಾವ್ಯಪ್ರಪಂಚದಲ್ಲೇನೋ ಶೋಭಿಸಬಹುದು. ಆದರೆ ವಾಸ್ತವ ಜಗತ್ತಿನಲ್ಲಿ ಗಣಪತಿ ವಾಹನವಾದ ಮೂಷಕಬಳಗದ ಹಾವಳಿಯನ್ನು ನಿಭಾಯಿಸಿಕೊಳ್ಳುವುದೊಂದು ದುರ್ಭರ ಸಾಹಸವಾಗಿದೆ.

ಒಕ್ಕಲುತನ ಮಾಡುವ ಕೃಷಿಕರಿಗೂ ಆಹಾರ ಧಾನ್ಯಗಳನ್ನು ದಾಸ್ತಾನು— ವಿತರಣೆ ಮಾಡುವ ವ್ಯಾಪಾರಿಗಳಿಗೂ ಇವು ದೊಡ್ಡ ಪ್ರಮಾಣದಲ್ಲಿ ಹಾನಿಯನ್ನುಂಟುಮಾಡುತ್ತವೆ. ಸುಮಾರು ಒಂದು, ಕೋಟಿ ಟನ್ನುಗಳಷ್ಟು ಎಂದರೆ ದೇಶದಲ್ಲಿ ಒಟ್ಟು ಬೆಳೆದ ಆಹಾರ ಧಾನ್ಯಗಳ ಸೇಕಡಾ ೮ ರಷ್ಟು ಅಂಶವನ್ನು, ಈ ಬಕಾಸುರಗಳು ತಿಂದು ಹಾಳುಗೆಡವಿ ನಾಶಮಾಡುತ್ತವೆ ಎಂದರೆ ಮೂಷಕ ಸಮಸ್ಯೆ ಎಷ್ಟು ಗಂಭೀರವಾಗಿದೆ ಎಂಬುವರ ಅರಿವಾದೀತು.

ಸಣ್ಣ ಚಿಂಡಿಲಿಗಳಿಂದ ತೊಡಗಿ ಗಡವ, ಹೆಗ್ಗಣಗಳ ವರೆಗೆ ಅನೇಕ ಬಗೆಯ ಇಲಿಗಳು ಕ್ಷಿಪ್ರವಾಗಿ ಸಂತಾನಾಭಿವೃದ್ಧಿಯನ್ನು ಮಾಡಿಕೊಳ್ಳುತ್ತವೆ. ಒಂದು ಜತೆ ಇಲಿಗಳು ಒಂದು ವರ್ಷದ ಅವಧಿಯಲ್ಲಿ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಕಿರಿಮಕ್ಕಳು ಹೀಗೆ ೧೨೫೦ರಷ್ಟು ಸಂತತಿಯನ್ನು ವೃದ್ಧಿಸುತ್ತವೆಂಬುದು ಆಶ್ಚರ್ಯಕರವಾಗಿರುವಂತೆಯೇ ದೇಶದ ಪ್ರಸ್ತುತ ಆಹಾರ ಸಮಸ್ಯೆಯನ್ನು ಅನುಲಕ್ಷಿಸಿದಾಗ ಅಪಾಯಕರವೂ ಆಗಿದೆ. ಅಲ್ಲದೆ ಅವು ಪ್ಲೇಗಿನಂತಹ ಮಹಾರೋಗಗಳ ವಾಹಕವಾಗಿ ಮಾನವರಿಗೆ ಆಪತ್ತನ್ನೆ ತಂದೊಡ್ಡಬಲ್ಲವು.

ಮೂಷಕ ಸಂಹಾರದ ಪರಂಪರೆ ಈಗಿನದಲ್ಲ. ಇಲಿಗಳ ಹಾವಳಿಯನ್ನು ನೀಗಲು, ಅವುಗಳ ಅವಾಂಛಿತ ಬೆಳವಣಿಗೆಯನ್ನು ತಡೆಯಲು ನಮ್ಮಲ್ಲಿ ಬಹು ಪುರಾತನ ಕಾಲದಿಂದಲೂ ಅನೇಕ ವಿಧಾನಗಳನ್ನು ಅನುಸರಿಸುತ್ತ ಬರಲಾಗಿದೆ: ಬೋನು— ಇಲಿ ಕತ್ತರಿಗಳಲ್ಲಿ ಹಿಡಿದು, ನೀರಲ್ಲಿ ಮುಳುಗಿಸಿ ಸಾಯಿಸುವುದು, ಬೆಕ್ಕು–ನಾಯಿಗಳನ್ನು ಸಾಕುವುದು ಇತ್ಯಾದಿ. ಆದರೆ ಇವೆಲ್ಲ ಪ್ರಯತ್ನಗಳು ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ ಸಿಕ್ಕಿದಂತೆ ಏನೂ ಪ್ರತಿಫಲ ನೀಡ

ವಾದಷ್ಟು. ಇಲಿಗಳಿಗೆ ಮಾರಕವಾದ ಪದಾರ್ಥಗಳನ್ನು ತಿಂಡಿ ತಿನಿಸುಗಳಲ್ಲೊ ಆಹಾರ ಧಾನ್ಯಗಳಲ್ಲೊ ಬೆರಸಿ, ಅಥವಾ ಕೊಬ್ಬರಿ-ಸಕ್ಕರೆಯೊಂದಿಗೆ ಸೇರಿಸಿ, ಇಲಿಗಳು ಓಡಾಡುವಲ್ಲೆಲ್ಲಾ ಇರಿಸಿ, ಇಲಿಗಳು ಅವನ್ನು ಸೇವಿಸಿ ಸತ್ತು ಬೀಳುವಂತೆ ಮಾಡುವ ವಿಧಾನ ಈಗ ಬಳಕೆಯಲ್ಲಿದೆ. ಹೊಲಗಳಲ್ಲಿ, ಬಯಲು—ತೋಟಗಳಲ್ಲಿ ಬಿಲಗಳ ಮರೆಯಲ್ಲಿ ಅವಿತಿರುವ ಇಲಿಗಳನ್ನು ಕೊಲ್ಲಲು, ಬಿಲಗಳಿಗೆ ವಿಷ ವಾಯುಗಳನ್ನು ತುಂಬಿ, ಬಾಯಿಮುಚ್ಚುವ ಪದ್ಧತಿಯೂ ಕೆಲ ಮಟ್ಟಿಗೆ ಪ್ರಚಲಿತವಾಗಿದೆ.

ದುರ್ದೈವದ ಮಾತೆಂದರೆ, ಈ ಮೂಷಕ ವಿಷಗಳು ಮಾನವರಿಗೂ ಮಾರಕವಾಗಿವೆ. ಆದ್ದರಿಂದ ಇಲಿಗಳನ್ನು ಕೊಲ್ಲುವ ಭರದಲ್ಲಿ ವಿಷ ಮನುಷ್ಯರ, ಅವರಲ್ಲೂ ಮುಖ್ಯವಾಗಿ ಮಕ್ಕಳಕೈಗೆ ಸಿಗದಂತೆ ಸಿಕ್ಕಿದರೂ ತಿನ್ನದಂತೆ ಮುನ್ನೆಚ್ಚರಿಕೆ ವಹಿಸುವುದು ಅತ್ಯಗತ್ಯ. ಅಲ್ಲದೆ ಸಾಕು ಪ್ರಾಣಿಗಳಾದ ನಾಯಿ-ಬೆಕ್ಕುಗಳು, ದನಕರುವಿನಂತಹ ಪಶು ಪ್ರಾಣಿಗಳು, ಪಕ್ಷಿಗಳು ಬಾಯಿ ಹಾಕದಂತೆಯೂ ಮುಂಜಾಗ್ರತೆ ವಹಿಸಬೇಕು.

ಮಾರುಕಟ್ಟೆಯಲ್ಲಿ ದೊರಕುವ ಮೂಷಕ ವಿಷಗಳು ಮುಖ್ಯವಾಗಿ ನಾಲ್ಕು: ಥಲ್ಲಿಯಂ, ವಾರ್ಫಾರಿನ್, ಬೇರಿನ್ ಮತ್ತು ಫ್ಲೋರೋ ಏಸಿಟೇಟ್. ಇವುಗಳಲ್ಲದೆ ಶಂಖಪಾಷಾಣ, ಗಂಧಕ, ಪಾದರಸ ಮೊದಲಾದ ಲೋಹ ವಿಷಗಳನ್ನೂ ವಿಷಾನಿಲರೂಪದಲ್ಲಿ ಬಳಸುವುದು ಉಂಟು.

## ಥಲ್ಲಿಯಂ ವಿಷ:

ಮೇಲು ನೋಟಕ್ಕೆ ತಗಡಿನ ಪುಡಿಯಂತೆ ಕಾಣಿಸುವ, ಮೃದುವಾದ, ಜಡವಾದ ಬಿಳಿಯ ಲೋಹ ಥಲ್ಲಿಯಂ. ಥಲ್ಲಿಯಂ ಎಸಿಟೇಟ್‌ನಿಂದ ಸಿದ್ಧಮಾಡಿದ ಔಷಧಗಳನ್ನು ಮಕ್ಕಳ ತಲೆಯಲ್ಲಿ ತದ್ದು ಉಂಟಾದಾಗ ಚಿಕಿತ್ಸೆಗಾಗಿ ಬಳಸುತ್ತಾರೆ. ಅನುಚಿತವಾಗಿ ಬೆಳೆದು ರೂಪವನ್ನು ವಿಕಾರಗೊಳಿಸುವ ರೋಮಗಳ ನಾಶಕ್ಕಾಗಿ ಇದರ ಮುಲಾಮನ್ನು ಸವರುತ್ತಾರೆ. ಒಂದು ಗ್ರಾಮಿನಷ್ಟು ಥಲ್ಲಿಯಂ ಮಾನವನನ್ನು ಮೃತ್ಯುಮುಖಕ್ಕೊಯ್ಯಬಲ್ಲದು.

ಈ ವಿಷವನ್ನು ಮೇಲಿಂದ ಮೇಲೆ ಸ್ಪರ್ಶಿಸುವುದರಿಂದಲೂ ದೀರ್ಘಕಾಲದ ವರೆಗೆ ಮೈಕೈಗಳಿಗೆ ಹಚ್ಚುವುದರಿಂದಲೂ ನಿದ್ರಾನಾಶ, ದೇಹಾಯಾಸ, ಚಡಪಡಿಸುವುದು, ಅರುಚಿ, ಅಗ್ನಿಮಾಂದ್ಯ ಮುಂತಾದ ವಿಕಾರಗಳು ಕಾಣಿಸಿಕೊಂಡು ಮೈಕೈಗಳಲ್ಲಿ ದೌರ್ಬಲ್ಯವುಂಟಾಗುತ್ತದೆ. ಚರ್ಮದ ಬಣ್ಣ ವ್ಯತ್ಯಾಸಗೊಳ್ಳುವುದು. ಇಷ್ಟುಮಾತ್ರವಲ್ಲದೆ ಇದರ ಪ್ರಭಾವದಿಂದಾಗಿ ಮಂದವಾದ ಹೊಟ್ಟೆಶೂಲೆ, ಕಾಲು ನೋವು, ಜೊಲ್ಲು ಸುರಿಯುವುದು ಮತ್ತು ಒಸಡಿನಲ್ಲಿ ನೀಲಿ ರೇಖೆ ಸಹ ಕಾಣಿಸುವವು. ಚರ್ಮ ಒರಟಾಗುವುದು. ಸ್ತ್ರೀಯರಲ್ಲಿ ಋತುಸ್ರಾವದ ಅವ್ಯವಸ್ಥೆಯೂ ಪುರುಷರಲ್ಲಿ ವೀರ್ಯೋತ್ಪತ್ತಿಯ ಏರುಪೇರೂ ಕಾಣಿಸಬಹುದು.

ರೋಗಿಗಳ ಕೂದಲು ಮತ್ತು ರೋಮಗಳು ಉದುರುವುದು ವಿಷಪ್ರಾಶನವಾದುದರ ಪ್ರಧಾನ ಲಕ್ಷಣ. ಉಪದ್ರವಗಳು ಕಾಣಿಸಿಕೊಂಡ ಕೂಡಲೇ ಯಾವುದೇ ಬಗೆಯಲ್ಲಿ ಥಲ್ಲಿಯಮ್ಮನ್ನು ಬಳಸುವುದನ್ನಾಗಲಿ ಸ್ಪರ್ಶಿಸುವುದನ್ನಾಗಲಿ ನಿಲ್ಲಿಸಬೇಕು. B. A. L ಸೂಜಿಮದ್ದು ಉತ್ತಮ ಪ್ರತ್ಯೌಷಧ. ಥಲ್ಲಿಯಂನ ಅಲರ್ಜಿಯಿರುವವರು ಅಲರ್ಜಿಯ ಲಕ್ಷಣ ಕಂಡುಬರುತ್ತಲೇ ಥಲ್ಲಿಯಮ್‌ನಿಂದ ದೂರವಾಗಬೇಕು.

ಥಲ್ಲಿಯಂ ವಿಷ ಅಕಸ್ಮಾತ್ತಾಗಿ ಶರೀರವನ್ನು ಸೇರುವ ಸಂಭವವಿಲ್ಲದಿಲ್ಲ. ಹಾಗಾದಬಳಿಕ ಕೆಲವೊಮ್ಮೆ ಒಂದೆರಡು ತಾಸಿನೊಳಗಾಗಿ, ಕೆಲವೊಮ್ಮೆ ಅನೇಕ ದಿವಸಗಳು ಕಳೆದ ಮೇಲೆ ವಿಷ ಲಕ್ಷಣಗಳು ಕಾಣಿಸುವವು : ಬಾಯಿ ಒಣಗುವುದು, ಮೂಗು ಸೋರುವುದು, ಕಣ್ಣುನೋವು, ಗಂಟಲಲ್ಲಿ ನುಂಗಲು ತೊಂದರೆಯೆನಿಸುವುದು, ಹೊಟ್ಟೆ ಇತ್ಯಾದಿ. ನೋವು, ವಾಕರಿಕೆ ಮತ್ತು

ವಾಂತಿ, ಮೈಕೈ ನೋವು, ಜ್ವರ, ಭೇದಿ ಹಾಗೂ ದೇಹಾಯಾಸಗಳು ಉಂಟಾಗುತ್ತವೆ. ರೋಗಿಯ ದೇಹದ ಸಮತೋಲನ ತಪ್ಪುತ್ತದೆ. ಮೂತ್ರದ ಪ್ರಮಾಣ ಕಡಿಮೆಯಾಗುತ್ತದೆ ಮತ್ತು ಅದರಲ್ಲಿ ಆಲ್ಬುಮಿನ್ ಕಾಣಿಸುವುದು. ಬಡಬಡಿಕೆ, ದೇಹ ಸೆಟೆಯುವುದು, ಕಂಪನ, ಉಸಿರಾಟದ ತೊಂದರೆಗಳು ಉದ್ಭವಿಸಿ ರೋಗಿಯ ಸ್ಥಿತಿಯು ಚಿಂತಾಜನಕವಾಗುವುದು. ಪುಪ್ಪುಸದ ಊತ, ಶ್ವಾಸಕೋಶದ ಉರಿ, ಕುಸಿತ (collapse), ಸ್ಮೃತಿ ತಪ್ಪುವುದು ಅನಂತರ ಮರಣ ಕೂಡ ಸಂಭವಿಸಬಹುದು.

ವಿಷಪ್ರಾಶನವಾದಾಗ ಕಾಣುವ ಇನ್ನೊಂದು ಲಕ್ಷಣವೆಂದರೆ, ಕೂದಲು ಉದುರುವುದು. ರಕ್ತ ಪರೀಕ್ಷೆ ಮಾಡಿಸಿದರೆ ಇಸಿನೋಫಿಲಿಯಾ ಕಣಗಳು ವೃದ್ಧಿಯಾಗಿರುವುದು ಕಾಣಿಸುವುದು.

**ಚಿಕಿತ್ಸೆ ಮತ್ತು ಉಪಚಾರ:**

ಥಲ್ಲಿಯಂ ವಿಷ ಸೇವಿಸಿದ ರೋಗಿಗೆ ಹೊಟ್ಟೆ ತೊಳೆಯುವುದು (gastric lavage), ವಾಂತಿ ಮಾಡಿಸುವುದು ಮತ್ತು ವಿರೇಚನ ಮಾಡಿಸುವುದು ಮೊದಲಾದ ವಿಷ ಚಿಕಿತ್ಸೆಗಳನ್ನು ನಡೆಸಬೇಕು. ಆದುದರಿಂದ ವಿಳಂಬ ಮಾಡದೆ ವೈದ್ಯರ ಸಹಾಯವನ್ನು ಪಡೆಯಬೇಕು. ಸೋಡಿಯಂ ಥಿಯೋಸಲ್ಫೇಟ್ ಸೂಜಿಮದ್ದನ್ನೂ ಪೊಟ್ಯಾಸಿಯಂ ಕ್ಲೋರೈಡ್ ಮಿಶ್ರಣವನ್ನೂ ಡಾಕ್ಟರರು ಕೊಡುವುದಿದೆ.

ರೋಗಿಯ ಮೈಯನ್ನು ಬೆಚ್ಚಗೆ ಇರಿಸುವುದು ಅಗತ್ಯ. ಅದಕ್ಕಾಗಿ ಕಂಬಳಿ ಹೊದೆಸಿ, ಬಿಸಿ ನೀರು ತುಂಬಿದ ಸೀಸೆಗಳನ್ನು ಪಕ್ಕದಲ್ಲಿ ಇರಿಸಬೇಕು. ಮೂತ್ರವಿಕಾರ, ರಕ್ತಹೀನತೆಗಳ ಪರಿಹಾರಕ್ಕೆ ತಕ್ಕ ಕ್ರಮ ಕೈಗೊಳ್ಳಬೇಕು. ಬಾರ್ಲಿ ನೀರು, ಎಳನೀರು, ಹಾಲು, ಗ್ಲೂಕೋಸ್ ದ್ರವಗಳನ್ನು ಸಾಕಷ್ಟು ಪ್ರಮಾಣದಲ್ಲಿ ಕುಡಿಯಲು ಕೊಡಬೇಕು. ರೋಗಿಗೆ ವಿಶ್ರಾಂತಿಯೂ ಅಗತ್ಯ.

ವೈದ್ಯರು ಥಲ್ಲಿಯಂ ವಿಷಕ್ಕೆ ಪ್ರತ್ಯೌಷಧ (antidote) ವಾಗಿ B. A. L ಚುಚ್ಚುಮದ್ದನ್ನು ಕೊಡುವುದಿದೆ. ರೋಗಿಯನ್ನು ಚಿಕಿತ್ಸೆಗಾಗಿ ದವಾಖಾನೆಗೆ ಸೇರಿಸುವುದು ಅವಶ್ಯವಾಗಬಹುದು.

ಥಲ್ಲಿಯಂ ಪುಡಿಯನ್ನು ಇಲಿ ವಿಷವಾಗಿ ಬಳಸುವಾಗ ಸಕ್ಕರೆ, ಜೇನುತುಪ್ಪ ಅಥವಾ ಬೆಲ್ಲದೊಂದಿಗೆ ಮಿಶ್ರಮಾಡುತ್ತಾರೆ. ಇದನ್ನು ವಿಷಪೂರಿತವೆಂದು ತಿಳಿಯದೆ ಮಕ್ಕಳು—ಕೆಲವೊಮ್ಮೆ ದೊಡ್ಡವರು ಸಹ—ಸೇವಿಸಿ ಪ್ರಾಣಾಪಾಯವನ್ನು ತಂದುಕೊಳ್ಳುವ ಸಂಭವ ಹೆಚ್ಚಿಗಿದೆ. ಆದ್ದರಿಂದ ಈ ಬಗ್ಗೆ ಸಾಕಷ್ಟು ಮುನ್ನೆಚ್ಚರಿಕೆ ವಹಿಸಬೇಕಾದ್ದು ಅತ್ಯಗತ್ಯ.

**ವಾರ್ಫಾರಿನ್ ವಿಷ:**

ಈ ಇಲಿ ವಿಷವನ್ನು ಸೇವಿಸಿದರೆ ರಕ್ತಸ್ರಾವವಾಗುವುದರ ಪರಿಣಾಮವಾಗಿ ಅಪಾಯವುಂಟಾಗುತ್ತದೆ. ಆದರೆ, ಮೇಲಿಂದ ಮೇಲೆ ಸೇವಿಸಿದರೆ ಮಾತ್ರ ಪ್ರಾಣಾಪಾಯ ಉಂಟಾಗಬಹುದು. ಆದ್ದರಿಂದ ಸೂಕ್ತವಾದ ಮುನ್ನೆಚ್ಚ-

ರಿಕೆ ಮತ್ತು ಕ್ರಮಬದ್ಧವಾದ ಚಿಕಿತ್ಸೆಗಳನ್ನು ಕೈಕೊಂಡು ವಿಷಪ್ರಾಶನವಾದ ವ್ಯಕ್ತಿಯನ್ನು ಪ್ರಾಣಾಪಾಯದಿಂದ ಪಾರುಮಾಡಬಹುದು. ನೂರು ಮಿಲಿಗ್ರಾಮುಗಳಷ್ಟು ಪ್ರಮಾಣದಲ್ಲಿ ಈ ವಿಷ ಮಾನವನಿಗೆ ಮಾರಕವಾಗುತ್ತದೆ.

ರಕ್ತಸ್ರಾವವಾಗುವುದು ವಾರ್ಫಾರಿನ್ ವಿಷವನ್ನು ಸೇವಿಸಿದುದರ ಮುಖ್ಯ ಲಕ್ಷಣ. ಮೂಗಿನಿಂದಲೂ ಮೈಕೈಗಳಲ್ಲಿ ಚರ್ಮ ಕಿತ್ತು ಟಿಲ್ಲಿಂದಲೂ ಮಲ ಮೂತ್ರದ್ವಾರಗಳ ಮೂಲಕವೂ ರಕ್ತಸ್ರಾವವಾಗುತ್ತದೆ. ದೇಹವು ಬಿಳಿಚಿಕೊಳ್ಳುತ್ತದೆ.

**ಚಿಕಿತ್ಸೆ ಮತ್ತು ಉಪಚಾರ :**

ವಿಷಪ್ರಾಶನದ ಲಕ್ಷಣ ಕಂಡಕೂಡಲ ವೈದ್ಯರನ್ನು ಕರೆಸಬೇಕು. ಅವರು ರಕ್ತಸ್ರಾವ ನಿರೋಧಕವನ್ನು ಸೂಜಿಮದ್ದಿನ ಮೂಲಕವೂ ಸೇವನೆಯ ಮೂಲಕವೂ ಕೊಡುತ್ತಾರೆ. ಆಡುಸೋಗೆ (ಅಡಸಾಲ) ಸೊಪ್ಪಿನ ಕಷಾಯ ಕುಡಿಸಬಹುದು. ಹೊಟ್ಟೆ ತೊಳೆಯಲು ವಿರೇಚಕಗಳನ್ನು ಕೊಡಬೇಕು. ವಾರ್ಫಾರಿನ್ ವಿಷಕ್ಕೆ ಪ್ರತ್ಯೌಷಧವೆಂದರೆ ರಕ್ತಸ್ರಾವ ನಿರೋಧಕ ವಿಟಮಿನ್ K ಇಂಜಕ್ಷನ್.

**ಬೇರಿಯಂ ವಿಷ :**

ಮೂಷಕ ವಿಷವಾಗಿ ಬಳಸುವ ಬೇರಿಯಂ ವಿಷವನ್ನು ೧೫ ಗ್ರೈನ್ಸ್‌ನಷ್ಟು ಸೇವಿಸಿದರೆ ಪ್ರಾಣಾಪಾಯ ಸಂಭವಿಸುತ್ತದೆ.

ಸ್ನಾಯುಗಳ ಸೆಳೆತ, ವಾಂತಿ, ಭೇದಿ, ಮನೋವ್ಯಾಕುಲತೆ, ಉಸಿರಾಟಕ್ಕೆ ಬಾಧೆ, ಎದೆ ಬಡಿತದಲ್ಲಿ ಏರುಪೇರು ಮೊದಲಾದ ವಿಷಲಕ್ಷಣಗಳು ಕಾಣಿಸುತ್ತವೆ. ಆಕ್ಷೇಪಕ ಕಂಪನಗಳು ಉಂಟಾಗಿ ಹೃದಯಾಘಾತ ಕೂಡ ಸಂಭವಿಸಬಹುದು.

ಬೇರಿಯಂ ವಿಷಕ್ಕೆ ಪ್ರತ್ಯೌಷಧವೆಂದರೆ ಸೋಡಿಯಂ ಸಲ್ಫೇಟ್. ಅವನ್ನು ವೈದ್ಯರು ಚುಚ್ಚುಮದ್ದಿನ ಮೂಲಕವಾಗಿಯೂ ಬಾಯಿಯ (oral) ಮೂಲಕವಾಗಿಯೂ ಕೊಡುವರು. ಈ ವಿಷ ಸೇವಿಸಿದಾಗ ಪ್ರಾಣಾಪಾಯದ ಕಾಲಾವಧಿ ೨೪ ತಾಸು.

**ಫ್ಲೋರೋ ಎಸಿಟೇಟ್ :**

ಈ ಮೂಷಕ ವಿಷ ೫೦ ರಿಂದ ೧೦೦ ಗ್ರೈನ್ಸ್ ಪ್ರಮಾಣದಲ್ಲಿ ಸೇವಿಸಿದರೆ ವಿಷಪ್ರಾಶನವಾದ ೪-೬ ತಾಸಿನೊಳಗಾಗಿ ವಾಂತಿ, ಉದ್ವೇಗ, ಎದೆ ಬಡಿತದ ಏರಿಳಿತ, ಉಸಿರಾಟದಲ್ಲಿ ತೊಂದರೆಗಳು ಕಾಣಿಸಿಕೊಳ್ಳುವವು. ರೋಗಿಯು ಸ್ಮೃತಿ ತಪ್ಪಿ ಬೀಳಬಹುದು.

ಫ್ಲೋರೋಎಸಿಟೇಟ್ ವಿಷಕ್ಕೆ ಪ್ರತ್ಯೌಷಧವೆಂದರೆ ಮೋನೋ ಎಸಿಟೇಟ್ ಚುಚ್ಚುಮದ್ದು. ವಮನ, ಹೊಟ್ಟೆತೊಳೆಯುವುದು, ವಿರೇಚನ ಮುಂತಾದ ವಿಷಚಿಕಿತ್ಸೆಗಳನ್ನೂ ಸೆಟೆನಿರೋಧಕ ಮದ್ದನ್ನೂ ನೀಡಬೇಕು. ಆದರೆ ರೋಗಿಯ ಉಸಿರಾಟವನ್ನು ಮಂದಗೊಳಿಸುವ ಉಪಚಾರಗಳಾಗಲಿ ಪಾನೀಯಗಳಾಗಲಿ ನಿಷಿದ್ಧ.

ಮೂಷಿಕ ಸಂತಾನದಿಂದ ನಮ್ಮ ಆಹಾರ ಧಾನ್ಯಗಳನ್ನು ಪೋಲಾಗದಂತೆ ಕಾಪಾಡುವುದಕ್ಕೂ ಆರೋಗ್ಯರಕ್ಷಣೆಗೂ ಇಲಿಗಳ ಹಾವಳಿಯನ್ನು ಈ ವಿಧಾನದಿಂದ ಕೊನೆಗೊಳಿಸುವುದು ಅತ್ಯಗತ್ಯ. ಆದರೆ ಇಲಿಗಳ ವಿಷವಾಗಿ ಬಳಸುವ ರಾಸಾಯನಿಕ ದ್ರವ್ಯಗಳನ್ನು ಮನುಷ್ಯರು ಸೇವಿಸಿ ಆಕಸ್ಮಿಕ ಅಪಾಯಕ್ಕೆ ತುತ್ತಾಗದಂತೆ ಮುಂಜಾಗ್ರತೆ ವಹಿಸುವುದು ಸಹ ಅಷ್ಟೆ ಅಗತ್ಯವಾಗಿದೆ. ಆಕಸ್ಮಿಕವಾಗಿ ವಿಷಸೇವನೆಯಾದರೆ, ಧೈರ್ಯಗೆಡದೆ ವೈದ್ಯಸಹಾಯವನ್ನು ಪಡೆದು ರೋಗಿಯ ಜೀವವನ್ನು ಕಾಪಾಡಬಹುದು. ✡

# ಎಂ. ಜಿ. ಆರ್.
# ದ್ರಾವಿಡ ಮುನ್ನೇಟ್ರ ಕಳಗದಲ್ಲಿ ತತ್ತರ ಎಬ್ಬಿಸಿದ ಸಿನಿಮಾ ನಟ

ಕೆ. ಟಿ. ವೇಣುಗೋಪಾಲ

ಆತ ಬರುತ್ತಾನೆಂದರೆ ಜನ ಮಧ್ಯರಾತ್ರಿ ಮೀರಿದರೂ ತಾಳ್ಮೆಯಿಂದ ಕಾದಿರುತ್ತಾರೆ. ಆತನ ವ್ಯಾನು ಕಾಣಿಸಿದಾಗ ಆ ಪ್ರದೇಶವೆಲ್ಲ ಜಯಘೋಷಗಳಿಂದ ಪ್ರತಿಧ್ವನಿಸುವುದು. ಹಿರಿಯರು ಕಿರಿಯರು ಎಂದಿಲ್ಲದೆ ಆತನ ಪಾದಗಳನ್ನು ಸ್ಪರ್ಶಿಸಲು ನೂಕು ನುಗ್ಗಲು. ಆತ ಮಾತನಾಡಲಾರಂಭಿಸಿದರೆ ಸಭೆಯಲ್ಲಿ ಪೂರ್ಣ ಶಾಂತಿ ಮತ್ತು ಆಗಾಗ್ಗೆ ಕರತಾಡನ, ಜಯಘೋಷಗಳ ಅನುಮೋದನೆ. ಅಲ್ಲಿಯೇ ಒಂದು ಅತ್ಯಂತ ಹೃದಯಸ್ಪರ್ಶಿ ಘಟನೆಯೂ ತಪ್ಪದೆ ನಡೆಯುತ್ತದೆ. ತಮ್ಮ ಮೊಲೆಗೂಸುಗಳನ್ನು ಹಿಡಿದುಕೊಂಡು ತಾಯಂದಿರು ಸಾಲು ನಿಂತಿರುತ್ತಾರೆ. ಒಬ್ಬೊಬ್ಬರಾಗಿ ಆತನ ಮುಂದೆ ಬರುತ್ತಿದ್ದಂತೆಯೆ ಆತ ಶಿಶುವಿನ ತಲೆದಡವಿ ಹೆಸರಿಸುತ್ತಾನೆ: ಪರಿಮಳಮ್, ಕಲೈರ್‌ಪನ್... ಹೀಗೆ. ಅನಂತರ ಮತ್ತೆ ಬೇರೊಂದು ಊರಿನ ಕಾರ್ಯಕ್ರಮಕ್ಕಾಗಿ ಆತ ಹೊರಡುತ್ತಾನೆ. ದೂರ ನಿಂತವರೆಲ್ಲಾ ಹತ್ತಿರದಿಂದ ಆತನನ್ನು ದರ್ಶಿಸಲು ಮುನ್ನುಗ್ಗುತ್ತಾರೆ. ಕಿವಿ ಗಡಚಿಕ್ಕು-ವಂತಹ ಜಯಘೋಷಗಳು ಮತ್ತೆ ಕೇಳಿಸುತ್ತವೆ:

"ಮಕ್ಕಳ್ ತಿಲಗಂ ವಾಳ್ಗ!"
"ಪುರಟ್ಚಿ ನಟಗರ್ ವಾಳ್ಗ!"

ಜಗತ್ತಿನ ಯಾವುದೇ ನಟನಿಗಿಲ್ಲದ ಜನ

ಬೆಂಬಲ ಮದ್ರಾಸಿನ ತಮಿಳು ಚಲನಚಿತ್ರ ನಟ ಎಂ. ಜಿ. ರಾಮಚಂದ್ರನಿಗಿದೆ. ತಮಿಳು ನಾಡಿನಲ್ಲೊಂದೇ ಅಲ್ಲ, ತಮಿಳು ಮಾತನಾಡುವ ಜನರಿರುವಲ್ಲೆಲ್ಲಾ—ಅದು ಸಿಂಗಾಪುರವೇ ಆಗಿರಲಿ, ಶ್ರೀಲಂಕಾ ಆಗಿರಲಿ—ಆತ ಹೋದನೆಂದರೆ ಸಾವಿರಗಟ್ಟಳೆ ಜನ ಸೇರುತ್ತಾರೆ; ಆತನ ಮಾತುಗಳನ್ನು ಕೇಳುತ್ತಾರೆ. ಈ ವರೆಗೆ ತಮಿಳು ಬಲ್ಲವರಲ್ಲಿ ಮಾತ್ರ ಪ್ರಸಿದ್ಧನಾಗಿದ್ದ ಈ ನಟ ಈಗ ಆಳುವ ಡಿ. ಎಂ. ಕೆ. ಪಕ್ಷದಿಂದ ಹೊರ ಬಂದು ಹೊಸ ಪಕ್ಷವನ್ನು ಸ್ಥಾಪಿಸಿದುದರಿಂದ ಭಾರತ-ವಿಡೀ ಸುದ್ದಿಯ ಕೇಂದ್ರವಾಗಿದ್ದಾನೆ.

ಅಭಿಮಾನಿಗಳಲ್ಲಿ ಎಂ. ಜಿ. ಆರ್. ಎಂದು ಪ್ರಸಿದ್ಧನಾಗಿರುವ ಈ ನಟನ ಇಂತಹ ಕಲ್ಪನಾತೀತ ಪ್ರಸಿದ್ಧಿಗೆ ಆತ ನಟನಾಗಿರುವುದು ಕಾರಣವೊ, ರಾಜಕಾರಣಿಯಾಗಿರುವುದು ಕಾರಣವೊ ಎಂದು ನಿರ್ಧರಿಸುವುದು ಕಷ್ಟವಾಗಿದೆ. ಆತ ರಾಜಕಾರಣಿ—ನಟನಾಗಿರುವುದು ಕಾರಣವಾಗಿರಬೇಕು. ಎಲ್ಲಕ್ಕೂ ಮಿಗಿಲಾಗಿ ಆತನ ವ್ಯಕ್ತಿತ್ವವೇ ಜನಾಕರ್ಷಣೆಗೆಂದು ರೂಪುಗೊಂಡದ್ದು. ಆತನ ಅಭಿಮಾನಿಗಳಿಗೆ, ಇತ್ತೀಚೆಗೆ ಪ್ರಸಿದ್ಧ ಇಂಗ್ಲೀಷು ಪತ್ರಿಕೆಯೊಂದು ಬರೆದಂತೆ, ಆತ ಮಹಾಭಾರತದ ಮೂರು ಪ್ರಧಾನ ವ್ಯಕ್ತಿಗಳಾದ ಕರ್ಣ, ಅರ್ಜುನ, ಯುಧಿಷ್ಠಿರರ ಸಂಗಮ. ಎಂ. ಜಿ. ಆರ್.ನಲ್ಲಿ ಕರ್ಣನ ದಾನಶೂರತೆ, ಅರ್ಜುನನ ಶೌರ್ಯ, ಯುಧಿಷ್ಠಿರನ ಧರ್ಮಪ್ರಜ್ಞೆಗಳೆಲ್ಲವೂ ಇವೆ ಎನ್ನಲಾಗುತ್ತದೆ. ತಾನು ಅಭಿನಯಿಸುತ್ತಿರುವ ಪಾತ್ರಗಳ ಗುಣಗಳನ್ನು ಆತ ತನ್ನ ನಿಜ ಜೀವನದಲ್ಲೂ ಪ್ರತಿಫಲಿಸಲು ಪ್ರಯತ್ನಿಸುತ್ತಾನೆ. ಅವಕ್ಕೆಂದೇ ಆತ ಯಾವತ್ತೂ ಬಡವರ ಬಂಧು, ಅನ್ಯಾಯಗಳ ಶತ್ರು ಎಂದಿರುವ ಪಾತ್ರಗಳನ್ನೇ ಆರಿಸಿಕೊಳ್ಳುತ್ತಾನೆ. ಎಂ. ಜಿ. ಆರ್. ಚಿತ್ರಗಳ ಸ್ಯಾಂಪಲ್ಲೊಂದನ್ನು ನೋಡಿ: ಅಪಾಯದ ಅಂಚಿನಲ್ಲಿರುವ ನಾಯಕಿಯನ್ನು ಆತ ರಕ್ಷಿಸುತ್ತಾನೆ. ಖಳನಾಯಕನನ್ನೂ ಆತನ ನೂರಾರು ಅನುಯಾಯಿಗಳನ್ನೂ ಆತನೊಬ್ಬನೇ ಸದೆಬಡಿಯುತ್ತಾನೆ. ಸಿನಿಮಾ ಮಂದಿರದಲ್ಲಿ ನೆರೆದ ನೂರಾರು ಪ್ರೇಕ್ಷಕರು ತಮ್ಮ ನಾಯಕನ ಈ ಎಲ್ಲಾ ಸಾಹಸಗಳನ್ನು ತಲೆದೂಗಿ, ಚಪ್ಪಾಳೆ ತಟ್ಟಿ, ಸಿಳ್ಳು ಹೊಡೆದು ಅನುಮೋದಿಸುತ್ತಾರೆ. ಜನ ಬಯಸುತ್ತಾರೆಂದೇ ಕಳೆದ ಎರಡು ದಶಕಗಳಿಂದಲೂ ೫೭ ದಾಟಿದ ಈ ನಟ ಕಾಲೇಜು ವಿದ್ಯಾರ್ಥಿಯ, ಯುವ ರಾಜಕುಮಾರನ ಪಾತ್ರಗಳನ್ನು ವಹಿಸುತ್ತಾ ಬಂದಿದ್ದಾನೆ. ಎಂ. ಜಿ. ಆರ್. ಚಿತ್ರಕ್ಕೆ ಹಾಕಿದ ಬಂಡವಾಳ ಬ್ಯಾಂಕಿನಲ್ಲಿಟ್ಟ ತಮ್ಮ ಹಣಕ್ಕಿಂತಲೂ ಭದ್ರವೆಂದು ತಮಿಳುನಾಡಿನ ಎಲ್ಲಾ ಚಿತ್ರ ನಿರ್ಮಾಪಕರಿಗೆ ಗೊತ್ತು.



ಇಂದು ತಮಿಳರ ಕಣ್ಮಣಿಯಾಗಿರುವ ಈ ನಟ ಹುಟ್ಟಾ ಮಲಯಾಳಿಯೆಂದರೆ ನಿಮಗೆ ಆಶ್ಚರ್ಯವಾಗಬಹುದು. ಸಿಂಹಳದ ಕ್ಯಾಂಡಿಯಲ್ಲಿ ೧೯೧೭ರಲ್ಲಿ ಮಧ್ಯಮ ವರ್ಗದ ನಾಯರ್ ಕುಟುಂಬವೊಂದರಲ್ಲಿ ಜನನ. ತಂದೆ ಮರುದೂರು ಗೋಪಾಲ ಮೆನೋನ್, ತಾಯಿ ಸತ್ಯಭಾಮ

ಕೇರಳದಿಂದ ವಲಸೆ ಬಂದವರು. ಹೀಗಾಗಿ ಮಲಯಾಳ ನಾಡಿನ ಸಂಪರ್ಕ ಹುಟ್ಟಿನಿಂದಲೇ ರಾಮಚಂದ್ರನಿಗಿಲ್ಲ. ಹೀಗೆಂದೇ ಇರಬೇಕು, ಕೇರಳದ ನಾಯರ್ ಕುಟುಂಬದ ಸಂಪ್ರದಾಯದಂತೆ ತಾಯಿಯ ಮನೆತನದ ಹೆಸರಿಗೆ ಬದಲಾಗಿ ತಂದೆಯ ಹೆಸರನ್ನು ತನ್ನ ಹೆಸರಿಗೆ ಸೇರಿಸಿ ಮರುದೂರು ಗೋಪಾಲ ರಾಮಚಂದ್ರನ್ ಆದ. ರಾಮಚಂದ್ರನ್ ಇನ್ನೂ ಮೂರು ವರ್ಷದವನಿರುವಾಗಲೇ ತನ್ನ ತಂದೆಯನ್ನು ಕಳೆದುಕೊಂಡ. ತಾಯಿ ಸತ್ಯಭಾಮ ತನ್ನ ಎರಡು ಗಂಡುಮಕ್ಕಳೊಂದಿಗೆ* ತಮಿಳುನಾಡಿನ ಕುಂಭಕೋಣಂನಲ್ಲಿರುವ ಬಂಧುಗಳಲ್ಲಿಗೆ ಬಂದಳು. ಹುಡುಗರು ಅಲ್ಲಿ ಸ್ಕೂಲು ಸೇರಿದರು. ಆದರೆ ಮನೆಯಲ್ಲಿನ ದಾರಿದ್ರ್ಯದಿಂದಾಗಿ ಓದು ಮುಂದೆ ಸಾಗಲಿಲ್ಲ. ಓದಿಗಿಂತ ಹೊಟ್ಟೆಯದೇ ಸಮಸ್ಯೆಯಾದಾಗ ಶಾಲೆಗೆ ಶರಣು ಹೊಡೆದು ತನ್ನಣ್ಣನೊಂದಿಗೆ ಬಾಲನಟನಾಗಿ ನಾಟಕ ಕಂಪನಿಯನ್ನು ಸೇರಿದ. 'ಮಧುರೈ ಒರಿಜಿನಲ್ ಬಾಯ್ಸ್ ಕಂಪೆನಿ' ಸೇರಿದಾಗ ರಾಮಚಂದ್ರನ್‌ಗೆ ಬರೇ ಎಂಟು ವರ್ಷಗಳು. ರಂಗಭೂಮಿಯ ಮೇಲೆ ಜನಮೆಚ್ಚುಗೆ ಮತ್ತು ಪ್ರಸಿದ್ಧಿಯ ಪ್ರಮದಾಯಕ ಯಾತ್ರೆ ಇಲ್ಲಿಂದಲೇ ಆರಂಭವಾಯಿತು. ಈ ಕಂಪೆನಿಯಲ್ಲಿರುವಾಗಲೇ ಎಂ. ಜಿ. ರಾಮಚಂದ್ರನ್ ಹಲವು ಪ್ರಸಿದ್ಧ ನಟರ ಸಂಪರ್ಕಕ್ಕೂ ಪ್ರಭಾವಕ್ಕೂ ಬಂದ. ಕಾಲಿ ಎನ್. ರತ್ನಂ, ಪಿ. ಯು. ಚಿನ್ನಪ್ಪ, ಕಂದಸ್ವಾಮಿ ಮೊದಲಿಯಾರ್ ಮೊದಲಾದ ಆಗಿನ ಪ್ರಸಿದ್ಧ ನಟರು ಈ ಪರಿಶ್ರಮಶಾಲಿ ಯುವ ನಟನನ್ನು ಪ್ರೋತ್ಸಾಹಿಸಿದರು. ೧೯೩೬ ರಲ್ಲಿ ಮೊತ್ತಮೊದಲ ಬಾರಿ ಅವನಿಗೆ ಚಲಚ್ಚಿತ್ರವೊಂದರಲ್ಲಿ ಪಾತ್ರ ಲಭಿಸಿತು. ಅಂದಿನ ಜನಪ್ರಿಯ ನಟ ಎಂ. ಕೆ. ರಾಧ ನಾಯಕನಾಗಿಯೂ ಎನ್. ಎಸ್. ಕೃಷ್ಣನ್ ಹಾಸ್ಯನಟನಾಗಿಯೂ ಅಭಿನಯಿಸಿದ 'ಸತಿ ಲೀಲಾವತಿ' ಎಂಬ ಈ ಚಿತ್ರದಲ್ಲಿ ಎಂ. ಜಿ. ರಾಮಚಂದ್ರನ್ ಪೋಲೀಸು ಇನ್ಸ್‌ಪೆಕ್ಟರನ ಪಾತ್ರ ವಹಿಸಿದ.

ಆದರೆ ಚಿತ್ರರಂಗದಲ್ಲಿ ಯಾವ ಪ್ರತಿಸ್ಪರ್ಧಿಗೂ ಭೇದಿಸಲಾಗದಂಥ ಸುಭದ್ರ ನಾಯಕ ಸ್ಥಾನ ಲಭಿಸಲು ಮತ್ತೂ ೧೩ ವರ್ಷಗಳಷ್ಟು ಕಾಲ ಈತ ಕಾದುನಿಲ್ಲಬೇಕಾಯಿತು. ೧೯೪೮ ರಲ್ಲಿ ಬಂದ 'ರಾಜಕುಮಾರಿ' ಚಿತ್ರದಲ್ಲಿ ಈತ ನಾಯಕ ಪಾತ್ರವಹಿಸಿದರೂ ಅದು ಪ್ರೇಕ್ಷಕರ ಮೇಲೆ ಹೆಚ್ಚಿನ ಪ್ರಭಾವ ಬೀರದೇಹೋಯಿತು. ಆದರೆ ೧೯೫೦ ರಲ್ಲಿ ಬಂದ 'ಮರುದನಾಟ್ಟು ಇಳವರಸಿ'ಯಲ್ಲಿ ಈ ಹೊಸ ನಾಯಕನನ್ನು ಕಂಡ ಜನ ಹುಚ್ಚೆದ್ದು ಕುಣಿದರು. ಕತ್ತಿ ವರಸೆಯಲ್ಲಿ ಆತನ ಕೈಚಳಕ, ಆತನ ಸೌಂದರ್ಯ, ಮೋಡಿ ಹಿಡಿಸುವ ಮಾತುಗಳ ಬಗೆಗೆ ತಮಿಳುನಾಡಿನ ಬೀದಿ ಬೀದಿಗಳಲ್ಲಿ ಜನ ನಿಂತು ಚರ್ಚಿಸಿದರು. ಅದು ಎಂ. ಜಿ. ರಾಮಚಂದ್ರನ್ ಪಾಲಿಗೆ ಒಂದು ಆರಂಭ ಮಾತ್ರವಾಯಿತು. ಅವನನ್ನು ಪ್ರಸಿದ್ಧಿಗೆ ತಂದ ಚಿತ್ರಕ್ಕೆ ಸಂಭಾಷಣೆಯನ್ನು ಆತನ ಬಹುಕಾಲದ ಸಂಗಾತಿಯೂ ಈಗಿನ ವಿರೋಧಿಯೂ ಆದ ತಮಿಳುನಾಡಿನ ಮುಖ್ಯಮಂತ್ರಿ ಕರುಣಾನಿಧಿ ಬರೆದಿದ್ದರು. ಚಿತ್ರರಂಗಕ್ಕೆ ಹೊಸಬನಾಗಿದ್ದ ಈ ಲೇಖಕನಿಗೆ ಹಲವು ನಿರ್ಮಾಪಕರ ಪರಿಚಯ ಮಾಡಿಕೊಳ್ಳಲು ಎಂ. ಜಿ. ಆರ್. ನೆರವಾಗಿದ್ದನಂತೆ. ಎಂ. ಜಿ. ಆರ್. ಪ್ರಸಿದ್ಧಿಗೆ ಬರಲು ಕರುಣಾನಿಧಿ ಕಾರಣರಾದರು ಎಂದು ಕರುಣಾನಿಧಿ ಅಭಿಮಾನಿಗಳು ಹೇಳುತ್ತಾರೆ. ಅದು ಹೇಗಿದ್ದರೂ ಆರಂಭದ ದಿನಗಳಿಂದಲೇ ಇಬ್ಬರೂ ಒಳ್ಳೆಯ ಸ್ನೇಹಿತರಾಗಿದ್ದರು. ಇಬ್ಬರೂ ಕೂಡಿಯೇ ಮೇಲಕ್ಕೆ ಬಂದರು.

ಚಿತ್ರರಂಗದಲ್ಲಿ ಎಂ. ಜಿ. ಆರ್. ಪ್ರಸಿದ್ಧಿ ದಿನದಿಂದ ದಿನಕ್ಕೆ ವರ್ಧಿಸಿತು. ಅವರೊಂದಿಗೆ ಹಲವು ಪ್ರಶಸ್ತಿಗಳೂ ಅನುಮೋದನೆಗಳೂ ದೊರೆ

---

*** ಎಂ. ಜಿ. ಆರ್. ಅಣ್ಣ ಎಂ. ಜಿ ಚಕ್ರಪಾಣಿಯು ನಿರ್ಮಾಪಕನೆಂದು ತಮಿಳು ಚಿತ್ರರಂಗದಲ್ಲಿ ಹೆಸರು ಗಳಿಸಿದ್ದಾನೆ.**

ರವು. ೧೯೫೪ ರಲ್ಲಿ ಹೊರಬಂದ 'ಮಲೈಕಳ್ಳನ್' ಪ್ರಾದೇಶಿಕ ಚಿತ್ರಗಳಿಗಾಗಿರುವ ರಾಷ್ಟ್ರಪತಿಗಳ ಬೆಳ್ಳಿಯ ಪದಕವನ್ನು ಗಳಿಸಿತು. ತಮಿಳು ಚಿತ್ರರಂಗಕ್ಕೆ ಈ ಪ್ರಶಸ್ತಿ ದೊರೆತದ್ದು ಅದೇ ಮೊದಲ ಬಾರಿ. ಆಗ ತಮಿಳು ಜನತೆಯ ಉತ್ಸಾಹಕ್ಕೆ ಮೇರೆಯೇ ಉಳಿಯಲಿಲ್ಲ. ಜನ ತಮ್ಮ ಊಹೆಗೆ ನಿಲುಕುವಂತಹ ಬಿರುದುಗಳನ್ನೆಲ್ಲಾ ಅತನಿಗಿತ್ತರು. 'ಮಕ್ಕಳ್ ತಿಲಗಂ' (ಜನಸಾಮಾನ್ಯರಲ್ಲಿ ತಿಲಕಪ್ರಾಯ) 'ಪುರಟ್ಚಿ ನಟಿಗರ್' (ಕ್ರಾಂತಿಕಾರಿ ನಟ) ಮುಂತಾದವು ಅವುಗಳಲ್ಲಿ ಕೆಲವು. ಒಂದಿಗೆ ಹಲವು ಜನಪ್ರಿಯ ಚಿತ್ರಗಳೂ ಬಂದವು. 'ಅಲಿಬಾಬ,' 'ಗುಲೇಬಕಾವಲಿ,' 'ತಿರುಟಾದೆ,' 'ಎಂಗ ವೀಟ್ಟು ಪೆಣ್' ಈ ಎಲ್ಲಾ ಚಿತ್ರಗಳು ಬಿಡುಗಡೆಯಾದದ್ದು ತಮಿಳು ನಾಡಿನ ಎಲ್ಲ ಊರುಗಳಲ್ಲೂ ೧೦೦ ದಿನಗಳಷ್ಟು ಕಾಲ ಸತತವಾಗಿ ನಡೆದವು. ಆದರೆ ಅತನೇ ನಿರ್ಮಿಸಿ ದಿಗ್ದರ್ಶಿಸಿದ 'ನಾಡೋಡಿ ಮನ್ನನ್'ಗೆ ಎರಡು ಕೋಟಿ ರೂಪಾಯಿಗಳಿಗೂ ಮಿಕ್ಕಿದ ಬಾಕ್ಸ್ ಆಫೀಸು ಕಲೆಕ್ಷನ್ ದೊರೆಯಿತು. ಆ ಬಳಿಕ ಬಂದ 'ಅಡಿಮೈ ಪೆಣ್' ಮತ್ತು 'ರಿಕ್ಷಾಕಾರನ್' ಕೂಡ ಹಲವು ದಾಖಲೆಗಳನ್ನು ಸ್ಥಾಪಿಸಿದುವು. ೧೯೭೧ ರಲ್ಲಿ ನಟನಿಗಾಗಿರುವ ರಾಷ್ಟ್ರದ ಅತ್ಯುನ್ನತ 'ಭಾರತ್' ಪ್ರಶಸ್ತಿ 'ರಿಕ್ಷಾಕಾರನ್' ಚಿತ್ರದಲ್ಲಿನ ಅಭಿನಯಕ್ಕಾಗಿ ಎಂ. ಜಿ. ರಾಮಚಂದ್ರನ್‌ಗೆ ದೊರಕಿತು. ಈ ಪ್ರಶಸ್ತಿ ಅವನಿಗೆ ದೊರೆತದ್ದರ ಹಿಂದೆ ಅವನ ವಾಗ್ವೈಖರಿಗಿಂತಲೂ ಹೆಚ್ಚಾಗಿ ರಾಜಕೀಯವಿತ್ತು ಎಂದು ಹೇಳುವವರಿದ್ದಾರೆ. (ಈ ಚಿತ್ರದಲ್ಲಿಗಿಂತಲೂ ಅವನು ಹೆಚ್ಚು ಉತ್ತಮ ದರ್ಜೆಯ ಅಭಿನಯ ನೀಡಿದ ಚಿತ್ರಗಳಿವೆ.) ಆದರೂ ಸ್ಟಂಟ್ ಚಿತ್ರಗಳಿಗೇ ಎಂ. ಜಿ. ಆರ್. ನಟನೆ ಸೀಮಿತವಾಗಿಲ್ಲ. ಕೆಲ ಸಾಮಾಜಿಕ ಚಿತ್ರಗಳಲ್ಲೂ ಅತ ಒಳ್ಳೆಯ ಅಭಿನಯ ನೀಡಿದ್ದಾನೆ. ಜನ ಬಯಸುತ್ತಿರುವ ಸ್ಟಂಟ್ ಚಿತ್ರಗಳಲ್ಲೇ ಅತ ಹೆಚ್ಚಾಗಿ ಅಭಿನಯಿಸುತ್ತಿರುವುದರಿಂದಾಗಿ ಈಗಲೂ ತನ್ನ ಪೂರ್ಣ ಅಭಿನಯಸಾಮರ್ಥ್ಯವನ್ನು ವ್ಯಕ್ತಪಡಿಸಲು ಅತನಿಗೆ ಅವಕಾಶ ಸಿಗದೇಹೋಗಿರಬೇಕು. ಹೇಗಿದ್ದರೂ ಸ್ಟಂಟ್ ಚಿತ್ರಗಳಲ್ಲಿ ಸ್ವಾಭಾವಿಕತೆಯನ್ನು ತರಲು ಕಾರಣರಾದವರಲ್ಲಿ ಅತನೊಬ್ಬ. ಕತ್ತಿವರಸೆಯಲ್ಲಿ ಈ ಇಳಿವಯಸ್ಸಿನಲ್ಲೂ ಅತನನ್ನು ಮೀರಿಸುವ ನಟರಿಲ್ಲವೆನ್ನುತ್ತಾರೆ. ಅತ ಸ್ವತಃ ಒಳ್ಳೆಯ ಫೈಟರ್ ಆದುದರಿಂದಲೇ ಹಿಂದೆ ತಮಿಳು ಚಿತ್ರದ ಖಳನಾಯಕ ಎಂ. ಆರ್. ರಾಧ ಅತನ ಕುತ್ತಿಗೆಗೆ ನೇರವಾಗಿ ಗುಂಡಿಟ್ಟು ಕೊಲ್ಲಲು ಪ್ರಯತ್ನಿಸಿದಾಗ ತಪ್ಪಿಸಿಕೊಳ್ಳುವುದು ಸಾಧ್ಯವಾಯಿತು. ಈ ಘಟನೆ ನಡೆದ ಬಳಿಕ ಮದ್ರಾಸಿನಲ್ಲಿ ಈ ಬಗ್ಗೆ ಭಾರಿ ಕೋಲಾಹಲವೆದ್ದಿತ್ತು.

ಅತನ ಅಭಿನಯಸಾಮರ್ಥ್ಯದ ಕುರಿತು ವಿವಾದ ಏನೇ ಇರಲಿ, ಎಂ. ಜಿ. ರಾಮಚಂದ್ರನ್ ಈ ವರೆಗೆ ತಮಿಳು ನಾಡಿನಲ್ಲಿ ಬೇರಾವ ನಟನಿಗೂ ಸಾಧ್ಯವಾಗದ ಜನಪ್ರಿಯತೆಯನ್ನು ಗಳಿಸಿದ್ದಾನೆಂಬುದರಲ್ಲಿ ಎರಡಭಿಪ್ರಾಯವಿಲ್ಲ. ಅತನನ್ನು ಜನ ಸಿನಿಮಾನಟನೆಂದಲ್ಲ, ದೇವತಾಪುರುಷನೆಂದು ಪೂಜಿಸುತ್ತಾರೆ. ಈ ಜನಪ್ರಿಯತೆಯ ಫಲವೇ ಅತನ ಹೆಸರಿನಲ್ಲಿ ನಾಡಿನಾದ್ಯಂತ ಸ್ಥಾಪಿಸಲ್ಪಟ್ಟಿರುವ ಅಭಿಮಾನಿಗಳ ಕ್ಲಬ್ಬುಗಳು. ಇವುಗಳು ಎಂ. ಜಿ. ಆರ್. ಮನ್ರಂಗಳೆಂದು ಕರೆಯಲ್ಪಡುವವು. ತಮಿಳು ನಾಡಿನುದ್ದಗಲದಲ್ಲಿ ಮಾತ್ರವಲ್ಲ, ಸಿಂಹಳ, ಸಿಂಗಾಪುರ, ಮಲೇಶಿಯ, ಹಾಂಗ್ ಕಾಂಗ್ ಮುಂತಾದೆಡೆಗಳಲ್ಲೂ ಎಂ. ಜಿ. ಆರ್. ಮನ್ರಂಗಳು ಅಸ್ತಿತ್ವದಲ್ಲಿವೆ. ಒಟ್ಟು ೨೦,೦೦೦ಕ್ಕೂ ಮಿಕ್ಕ ಮನ್ರಂಗಳಿದ್ದು ಅವುಗಳ ಸದಸ್ಯತ್ವ ೫ ಲಕ್ಷಕ್ಕೂ ಮಿಕ್ಕಿ ಇದೆ. ತಮ್ಮ ನಾಯಕನ ಜನಪ್ರಿಯತೆಯನ್ನು ಕಾಪಾಡಲೆಂದು ರೂಪುಗೊಂಡ ಈ ಸಂಘಗಳು ಸಾಮಾಜಿಕ ಸೇವೆಯನ್ನೂ ಮಾಡುತ್ತಿವೆ. ಮನ್ರಂ ವತಿಯಿಂದ ರಾತ್ರಿ ಶಾಲೆಗಳು, ವ್ಯಾಯಾಮಶಾಲೆಗಳು, ವಾಚನಾಲಯಗಳು ಮುಂತಾದವುಗಳನ್ನು ನಡೆಸಲಾಗುತ್ತಿದೆ. ಒಟ್ಟಿನಲ್ಲಿ ಎಂ. ಜಿ. ಆರ್. ಜನಸಾಮಾನ್ಯರೊಂದಿಗೆ ನೇರ ಸಂಪರ್ಕವಿರಿಸಲು ಈ

ಮನ್ನಂ ಸಾಧನವಾಗಿದೆ.

ಬೆಡಗಿನ ಚಿತ್ರರಂಗದ ಈ ನಾಯಕ ಪಾತ್ರಧಾರಿಯ ನಿಜ ಜೀವನ ಬಹಳ ಸರಳ ಹಾಗೂ ನಿರಾಡಂಬರ. ಇಡಿ ತೋಳಿನ ಅಂಗಿ, ಮುಂಡು ಮತ್ತು ಡಿ. ಎಂ. ಕೆ. ಪಕ್ಷದ ಸಂಕೇತವೆನಿಸಿರುವ ಕಪ್ಪು ಕೆಂಪು ಶಾಲುಗಳ ಸರಳ ವೇಷ ಈತನದು. ತಲೆಯಲ್ಲಿರುವ ಫರ್ ಕ್ಯಾಪ್ ಮುಖದಲ್ಲಿನ ಕಪ್ಪು ಕನ್ನಡಕಗಳನ್ನುಳಿದರೆ ಸಿನಿಮಾ ನಟರ ವೈಭವಗಳಿಂದ ಈತ ಬಹಳ ದೂರ. ಅದರಂತೆ ಆತನ ದೈನಂದಿನ ಜೀವನವೂ ಸರಳ. ದಿನಾಲು ಬೆಳಿಗ್ಗೆ ೪-೩೦ ಗಂಟೆಗೆ ಆತ ಏಳುತ್ತಾನೆ. ಎದ್ದೊಡನೆ ಕೆಲ ಗಂಟೆಗಳಷ್ಟು ವ್ಯಾಯಾಮ. ಮಾಂಸಾಹಾರಿಯಾದರೂ ಮಂಗಳವಾರ, ಶುಕ್ರವಾರಗಳಂದು ಕಟ್ಟಾ ಶಾಕಾಹಾರಿ. ಮಾದಕ ಪಾನೀಯಗಳ ಮಾತಿರಲಿ, ಚಹಾ ಕಾಫಿಗಳನ್ನೂ ಈತ ಸೇವಿಸುವುದಿಲ್ಲವೆಂದರೆ ನಿಮಗೆ ಆಶ್ಚರ್ಯವಾಗಬಹುದು. ಈ ಕಟ್ಟುನಿಟ್ಟಿನ ಜೀವನವೇ ಇಳಿ ಪ್ರಾಯದಲ್ಲೂ ಆತ ಯುವಕನ ಚಟುವಟಿಕೆಗಳನ್ನು ತೋರಿಸಲು ಕಾರಣವಾಗಿರಬೇಕು. ಸಿನಿಮಾ ನಟನಾದರೂ ಹೆಚ್ಚು ಸದ್ದುಗದ್ದಲವಿಲ್ಲದ ವೈವಾಹಿಕ ಜೀವನ ಈತನದು. ತನ್ನನ್ನು ಪ್ರಸಿದ್ಧಿಗೆ ತಂದ 'ಮರುವ ನಾಟ್ಟು ಇಳವರಸಿ' ಚಿತ್ರದ ನಾಯಕಿಯಾಗಿದ್ದ ನಟಿ ವಿ. ಎನ್. ಜಾನಕಿಯನ್ನು ಈತ ವಿವಾಹವಾದ. ಸಂತಾನವಿಲ್ಲದಿರುವುದು ರಾಮಚಂದ್ರನ್ ದಂಪತಿಗಳ ಕೊರತೆ. ದೇವರು ದಿಂಡರು ಎಂದರೆ ಹೆಚ್ಚಿನ ಎಲ್ಲಾ ಡಿ. ಎಂ. ಕೆ. ನಾಯಕರಂತೆ ಈತನೂ ದೂರವಾದರೂ, ತನ್ನ ತಾಯಿಯನ್ನು ದೇವರಂತೆ ಪೂಜಿಸುತ್ತಾನೆ. ೧೯೬೩ರಲ್ಲಿ ತನ್ನ ಮಗನ ಎಲ್ಲಾ ವೈಭವಗಳನ್ನು ನೋಡಿಯೇ ತಾಯಿ ಸತ್ಯಭಾಮ ತೀರಿಕೊಂಡಳು.

ಎಂ. ಜಿ. ರಾಮಚಂದ್ರನ್‌ನ ಔದಾರ್ಯದ ಕುರಿತು ಹಲವು ಕತೆಗಳು ಜನಜನಿತವಾಗಿವೆ. ಲಕ್ಷಗಟ್ಟಳೆ ರೂಪಾಯಿಗಳನ್ನು ಆತ ಸದ್ದಿಲ್ಲದೆ ದಾನ ಮಾಡಿದ್ದಾನೆ. ತನ್ನ ಮನ್ನಂಗಳ ಮೂಲಕವೂ ತಾನೇ ನೇರವಾಗಿಯೂ ದರಿದ್ರರ ನೆರವಿಗೆ ಆತ ಧಾವಿಸಿದ ಉದಾಹರಣೆಗಳು ಹಲವು ಇವೆ. ಜನಸಾಮಾನ್ಯರಿಂದ ದೊರೆತ ಹಣವನ್ನು ಅವರ ಸೇವೆಗಾಗಿಯೆ ವಿನಿಯೋಗಿಸುವ ಈ ಧಾರಾಳ ಬುದ್ಧಿಯೇ ಆತನ ಜನಪ್ರಿಯತೆಯ ಗುಟ್ಟು.

ಶಾಲೆಯಲ್ಲಿ ಓದಿದ್ದು ಬಹಳ ಕಡಿಮೆಯಾದರೂ ಎಂ. ಜಿ. ಆರ್. ಒಳ್ಳೆಯ ಮಾತುಗಾರ. ನಿರರ್ಗಳವಾದ ತಮಿಳಿನಲ್ಲಿ ಆತ ಗಂಟೆಗಟ್ಟಳೆ ಮಾತನಾಡಬಲ್ಲ. ಜನರನ್ನು ವಶೀಕರಿಸುವ ಶಕ್ತಿ ಆತನ ಮುಖದಲ್ಲಿದ್ದಂತೆ ಮಾತುಗಳಲ್ಲೂ ಇದೆ. ಯಾವತ್ತೂ ಆತ ತನ್ನ ಶ್ರೋತೃಗಳನ್ನು ಗೌರವದಿಂದ, "ಪೆರಿಯೋರ್ಕಳೆ, ತಾಯ್‌ಮಾರ್ಕಳೆ" (ಹಿರಿಯರೇ, ತಾಯಂದಿರೆ) ಎಂದು ಸಂಬೋಧಿಸುತ್ತಾನೆ. ಮೊದಲು ಬರಿ ಕುತೂಹಲದಿಂದ ಬಂದವರೂ ಆತನ ಮಾತುಗಳನ್ನು ಕೇಳಿದ ಬಳಿಕ




"ಅವರು ಹೇಳ್ತಿರೋ... ಮಹಾಕವಿಗಳು. ಪಂಪ, ರನ್ನ ನನ್ಗೆ ಚಾಳ ಚಂದಾಗಿ ಗೊತ್ರಿ... ಬೆಂಗಳೂರಿನಲ್ಲಿ ಬಸವನ ಗುಡೀಲಿದ್ದಾರ್ರಿ..."

ಆತನ ಅಭಿಮಾನಿಯಾಗಿ ಬದಲಾಗಿ ಬಿಡುತ್ತಾರೆ. ೧೯೫೩ರಿಂದಲೂ ಎಂ. ಜಿ. ಆರ್., ಡಿ. ಎಂ. ಕೆ. ಪಕ್ಷದ ಸಕ್ರಿಯ ಸದಸ್ಯನಾಗಿದ್ದಾನೆ. ಇಂದು ಆತನ ವಿರೋಧಿಗಳು ಎಂ. ಜಿ. ಆರ್. ಮೇಲಕ್ಕೆ ಬರಲು ಡಿ. ಎಂ. ಕೆ. ಪಕ್ಷ ಕಾರಣವಾಯಿತು ಎಂದೆನ್ನುತ್ತಿರುವರಾದರೂ ಈ ಜನಪ್ರಿಯ ನಟನ ಪ್ರಭಾವವು ಡಿ. ಎಂ. ಕೆ. ಪಕ್ಷವನ್ನು ಸಂಘಟಿಸಲು ನಾಯಕ ಅಣ್ಣಾದೊರೈಗೆ ನೆರವಾಯಿತು ಎಂದು ಒಪ್ಪದಿರುವುದು ಕಷ್ಟ. ಅಣ್ಣಾದೊರೈ ಹಿಂದೊಮ್ಮೆ "ಅವರ್ ವಾಕುಕ್ಕು ಪತ್ತು ಲಕ್ಷಂ ಅವರ್ ಮುಖತ್ತಿಕ್ಕ್ ಮುಪ್ಪತ್ತು ಲಕ್ಷಂ" (ಅವರ ಮಾತಿಗೆ ಹತ್ತು ಲಕ್ಷ ಅವರ ಮುಖಕ್ಕೆ ಮೂವತ್ತು ಲಕ್ಷ) ಜನ ಸೇರುತ್ತಾರೆಂದು ಡಿ. ಎಂ. ಕೆ.ಗೆ ಎಂ. ಜಿ. ರಾಮಚಂದ್ರನ್‌ನೀಡಿದ ಸೇವೆಯನ್ನು ಮುಕ್ತ ಕಂಠದಿಂದ ಪ್ರಶಂಸಿದ್ದರು. ಕರುಣಾನಿಧಿಯೊಂದಿಗೆ ಅಭಿಪ್ರಾಯ ವ್ಯತ್ಯಾಸದಿಂದಾಗಿ ಹೊರಬರುವವರೆಗೆ ಎಂ. ಜಿ. ಆರ್. ಕಟ್ಟಾ ಡಿ. ಎಂ. ಕೆ. ಅನುಯಾಯಿಯಾಗಿದ್ದರು. ಎರಡು ಬಾರಿ ಮದ್ರಾಸು ಅಸೆಂಬ್ಲಿಗೂ ಭಾರಿ ಬಹುಮತದಿಂದ ಆರಿಸಿ ಬಂದಿದ್ದ. ಕಳೆದ ಬಾರಿ ಚುನಾವಣೆಯಲ್ಲಿ ಸ್ಪರ್ಧಿಸುವಾಗ ಎಂ. ಜಿ. ಆರ್. ಅಸೌಖ್ಯದಿಂದ ಆಸ್ಪತ್ರೆಯಲ್ಲಿದ್ದ ಎನ್ನುವುದು ಗಮನಾರ್ಹ. ಡಿ. ಎಂ. ಕೆ.ಯ ಕೋಶಾಧಿಕಾರಿಯಾಗಿಯೂ ಅಣ್ಣಾದೊರೈ ನಿಧನದ ಬಳಿಕ ಅದರ ಸಂಘಟನೆಗೆ ನೇತಾರರಾಗಿಯೂ ಆ ಪಕ್ಷ ಮೇಲೆ ಬರಲು ಅವನು ಕಾರಣರಾಗಿದ್ದನು.

ಕರುಣಾನಿಧಿ–ರಾಮಚಂದ್ರನ್ ಕಲಹದ ಕಾರಣವನ್ನು ಕುರಿತು ಹಲವು ಊಹಾಪೋಹಗಳಿವೆ. ಎಂ. ಜಿ. ರಾಮಚಂದ್ರನ್ ಜನಪ್ರಿಯತೆ ಕರುಣಾನಿಧಿಗೆ ನುಂಗಲಾಗದ ತುತ್ತಾಗಿತ್ತು ಎಂದೆನ್ನುವವರಿದ್ದಾರೆ. ಎಂ. ಜಿ. ರಾಮಚಂದ್ರನ್ ವಿರುದ್ಧವಾಗಿ ಚಿತ್ರಗಳಲ್ಲಿನ ನಾಯಕ ಸ್ಥಾನಕ್ಕೆ ತನ್ನ ಮಗ ಮುತ್ತುವನ್ನೇ ಅವರು ಎತ್ತಿ ಕಟ್ಟಿದ್ದರು ಎಂದೆನ್ನುವುದೂ ಆಧಾರರಹಿತ ಊಹೆಯಲ್ಲ. ಸ್ವತಃ ಕರುಣಾನಿಧಿ ಅಧಿಕಾರಕ್ಕೆ ಬರಲು ಎಂ. ಜಿ. ಆರ್. ಬೆಂಬಲ ಕಾರಣವೆನ್ನುವುದೂ ಸುಳ್ಳಲ್ಲ. ಅಣ್ಣಾರ ನಿಧನದ ಬಳಿಕ ಕರುಣಾನಿಧಿ–ನೆಡುಂಚೆರಿಯನ್‌ರೊಳಗೆ ಸ್ಪರ್ಧೆ ನಡೆದಾಗ ಎಂ. ಜಿ. ಆರ್. ತನ್ನ ಗೆಳೆಯನಿಗೆ ಬೆಂಬಲವಿತ್ತ, ಆತನೇ ಆಯ್ಕೆಯಾಗಲು ಕಾರಣನಾದ. ಅಂದು ಡಿ. ಎಂ. ಕೆ. ಒಡೆಯದಂತೆ ನೋಡಿಕೊಂಡ ವ್ಯಕ್ತಿ ಈಗ ಸ್ವತಃ ಆ ಪಕ್ಷವನ್ನು ಒಡೆದು ಅಣ್ಣಾ ಡಿ. ಎಂ. ಕೆ. ಎಂಬ ಹೊಸ ಪಕ್ಷ ರೂಪುಗೊಳ್ಳಲು ಯಾಕೆ ಕಾರಣನಾದ ? ಕರುಣಾನಿಧಿ ಸ್ವೇಚ್ಛಾಧಿಕಾರಿಯಂತೆ ವರ್ತಿಸಿದರೆ? ಅಥವಾ ಎಂ. ಜಿ. ಆರ್. ಕಿಂಗ್‌ಮೇಕರ್ ಆಗಿರಬೇಕೆಂದು ಬಯಸಿದನೆ ? ರಾಜಕೀಯ ಗರ್ಭದಲ್ಲಿ ಇದರ ಉತ್ತರ ಹುದುಗಿಹೋಗಿದೆ.

ಅದು ಏನೇ ಇದ್ದರೂ ಕಳೆದ ಜನವರಿ ೧೭ರಂದು ೫೭ನೆಯ ಹುಟ್ಟುಹಬ್ಬವನ್ನು ಆಚರಿಸಿದ ಈ ರಾಜಕಾರಣಿ–ನಟ ತಮಿಳು ನಾಡಿನಲ್ಲಿ ಸರಕಾರದ ವಿರುದ್ಧ ದೊಡ್ಡ ಮಟ್ಟದ ಆಂದೋಲನವನ್ನೇ ಹೂಡಿದ್ದಾನೆ. ತನ್ನ ಜನಬೆಂಬಲವನ್ನು ರಾಜಕೀಯ ಆವಶ್ಯಕತೆಗಳಿಗೆ ಉಪಯೋಗಿಸುವಲ್ಲಿ ಎಂ. ಜಿ. ಆರ್. ಎಷ್ಟು ಮಟ್ಟಿಗೆ ಪಳಗಿದ್ದಾನೆ, ಶಕ್ತನಾಗಿದ್ದಾನೆ ಎಂಬುದರ ಮೇಲೆಯೆ ಆತನ ಮತ್ತು ಆತನು ಕಟ್ಟಿದ ಪಕ್ಷದ ಯಶಸ್ಸು ಅವಲಂಬಿಸಿದೆ. ✡



**ಆವಲ್ಲಿಯೂ ರತಿ ಸೊಗಸು, ಸೋದರತ್ತೆ ಮಾವನ ಸಂಬಂಧವಾದ**
**ಭಾವಜಾರ್ಥಿಗಳಾಟ ಸೊಗಸಿನಲ್ಲಿಯುಂ ಸೊಗಸಾ ವಿಲಾಸಕೆ ಸರಿಯುಂಟೆ?**

— ರತ್ನಾಕರವರ್ಣಿ

# ಅಶನಂ

ಮೂಲ: ಕಾವೂರ್ ನೀಲಕಂಠ ಪಿಳ್ಳೆ
ಕನ್ನಡಕ್ಕೆ: ಎಂ. ಎಸ್. ಲಕ್ಷ್ಮಣಾಚಾರ್

ಪಪ್ಪನ್ ಪಿಳ್ಳೆಯ ಮನಸ್ಸು ಅದೇನೇನೋ ನೆನಪುಗಳನ್ನು ಮೆಲಕು ಹಾಕುತ್ತಿತ್ತು.......

ನಾಳೆ ತಾಯಿಯ ತಿಥಿ. ಎಷ್ಟೇ ಕೆಲಸವಿದ್ದರೂ ಇದಕ್ಕಾಗಿ ಮನೆಗೆ ಹೋಗುತ್ತಿದ್ದುದುಂಟು. ಅತಿವಾಸದ ದಿನ ಒಪ್ಪತ್ತಿನ ಊಟ ಊರಲ್ಲೇ ಆಗುತ್ತಿತ್ತು. ಇಲ್ಲದಿದ್ದರೆ ಮುಡಿಯಿಂದ ಇಲ್ಲಿ ಊಟ ಮಾಡುವುದಾದರೂ ಹೇಗೆ? ಈಗೆಲ್ಲಾ ದೇವಸ್ಥಾನದಲ್ಲಿ ಊಟ ಸಿಗುವುದಿಲ್ಲ. ನೈವೇದ್ಯಕ್ಕೇ ಅಕ್ಕಿ ಇಲ್ಲ. ಗಂಜಿ ಮಾಡಲೇ ಅಕ್ಕಿ ಇಲ್ಲದೆ ಮನುಷ್ಯರು ಬಾಯಿಬಾಯಿ ಬಿಡುತ್ತಿದ್ದಾರೆ. ಅಂಥಾದ್ದರಲ್ಲಿ ದೇವರಿಗೆ ಅದೆಂಥ ನೈವೇದ್ಯ! ಒಂದು ಹೊತ್ತು ಮುಡಿಯಲ್ಲಿ ಊಟ ಮಾಡಬೇಕಿದ್ದರೆ ಊರಿಗೇ ಹೋಗಬೇಕು. ಇವತ್ತು ಆಡಿಟಿಂಗ್ ಇತ್ತು. ಸದ್ಯ ಇವತ್ತಿಗದು ಮುಗಿದು ಹೋದದ್ದು ನನ್ನ ಅದೃಷ್ಟ. ನಾಳೆ ಬೆಳಗಿನ ಜಾವವಾದರೂ ಹೊರಡಬಹುದು.

ಬೆಳಿಗ್ಗೆ ಸ್ನಾನ ಮಾಡಿ ಒಂದು ಪಾವು ಅಕ್ಕಿ ಹಾಕಿ ಬೇಯಿಸಿಕೊಂಡು ಉಪ್ಪು, ಮೆಣಸು, ಮಜ್ಜಿಗೆ ಹಾಕಿಕೊಂಡು ತಿಂದದ್ದಾಯಿತು ಅರ್ಥಾತ್ ತಿನ್ನುವ ಶಾಸ್ತ್ರ ಮಾಡಿಯಾಯಿತು. ಬರೀ ಕಲ್ಲುಗಳೇ ತುಂಬಿದ್ದುದರಿಂದ ತಿನ್ನಲೇ ಆಗಲಿಲ್ಲ. ಅಕ್ಕಿಯಲ್ಲಿ ಕಲ್ಲು ಜಾಲಿಸಲು ನನಗೆ ಬರುವುದಿಲ್ಲ; ಬಂದರೂ ಅದಕ್ಕೆ ಪಾತ್ರೆ ಇಲ್ಲ. ಅಕ್ಕಿ ಜಾಲಿಸಲು ಮಾತ್ರವಲ್ಲ, ಒಲೆ ಹೊತ್ತಿಸಲೂ ಅಕ್ಕಿ ಬೇದಿದೆಯೇ ಎಂದು ನೋಡಲೂ ನನಗೆ ತಿಳಿಯದು. ಬಸಿಯಲು ತಕ್ಕ ಪಾತ್ರೆಯೂ ಇಲ್ಲ. ಏನೇನೂ ಫಜೀತಿಪಟ್ಟು ಗಂಜಿಯೂ ಅಲ್ಲ, ಅನ್ನವೂ ಅಲ್ಲ, ಹಾಗೊಂದು ಪದಾರ್ಥ ಸಿದ್ಧವಾಯಿತು.

ಅವರಲ್ಲಿ ಅರ್ಧ ಪಾತ್ರೆಯಲ್ಲಿ ಹಾಗೇ ಉಳಿದಿದೆ. ಯಾರಾದರೂ ಭಿಕ್ಷುಕ ಬಂದರೆ ಕೊಟ್ಟುಬಿಡಬೇಕು— ಸ್ವರ್ಗದಲ್ಲಿರುವ ತಾಯಿಗೆಷ್ಟೋ ಸಂತೋಷವಾಗುತ್ತೆ. ತಾಯಿ ಹಾಗೆ ಮಾಡುತ್ತಿದ್ದರು. ನಿತ್ಯ ಭಿಕ್ಷುಕರಿಗೆ ಕೊಡಲಿಕ್ಕೆ ಬೇಕಾದಷ್ಟು ಇದೆಯೆಂದೂ ಅಲ್ಲ, ತಾನು ತಿಂದು ಮಿಕ್ಕಿದೆಯೆಂದೂ ಅಲ್ಲ. ಸಾಕ್ಷಾತ್ ಪರಮೇಶ್ವರನೇ ಭಿಕ್ಷುಕನ ವೇಷದಲ್ಲಿ ಬರುತ್ತಾನಂತೆ. ಪರಮೇಶ್ವರನಾರು, ಭಿಕ್ಷುಕನಾರು ಎಂದು ತಿಳಿಯುವುದು ಹೇಗೆ? ಆದ್ದರಿಂದ ಕಂಡ ಯಾಚಕರನ್ನೆಲ್ಲಾ ತಾಯಿ ಪರಮೇಶ್ವರನೆಂದೇ ತಿಳಿಯುತ್ತಿದ್ದರು.

ಇಂದು ತಾಯಿ ಬದುಕಿದ್ದರೆ ಈ ಅಭಿಪ್ರಾಯ ಬದಲಿಸುತ್ತಿರಲಿಲ್ಲವೇ? ದುಡಿಯದೆ ಹಣ ಸಂಪಾದಿಸಲೆಂದು ಯಾಚನೆಗೆ ಹೋಗುವವರು, ತಾನು ಯಾಚಿಸಬೇಕಾದವನಲ್ಲವೆಂದು ಹೇಳಿ ಯಾಚಿಸುವವರು, ಕಳ್ಳತನ ಮಾಡಲು ತಕ್ಕ ಸಂದರ್ಭ ಕಂಡುಹಿಡಿಯಲೆಂದು ಭಿಕ್ಷಾಟನ ವೃತ್ತಿಯಲ್ಲಿ ತೊಡಗಿರುವವರು, ವೇಶ್ಯಾವೃತ್ತಿಯ ಮಧ್ಯದಲ್ಲಿ ನೆಪ ಮಾತ್ರಕ್ಕೆ ಭಿಕ್ಷಾಟನೆ ಮಾಡುವವರು, ಮುಂತಾದ ಭಿಕ್ಷುಕರ ಮಧ್ಯೆ ಪರಮೇಶ್ವರನೋ, ಪಾರ್ವತಿಯೋ ಇದ್ದಾರೆಂದು ತಾಯಿ ಊಹಿಸುತ್ತಿದ್ದರೇ? ಯಾರಿಗೆ ಗೊತ್ತು? ಏನಾದರಾಗಲಿ, ಬದುಕಿದ್ದಷ್ಟು ದಿನ ಭಿಕ್ಷುಕರಲ್ಲಿ ಕರುಣೆಯನ್ನೂ ಕಾವಿ ಧರಿಸಿದವರು ಮತ್ತು ಭವಿಷ್ಯ ಹೇಳುವವರಲ್ಲಿ ಭಕ್ತಿಯನ್ನೂ ತಾಯಿ ತೋರಿಸುತ್ತಿದ್ದರು. ಈ ಮನೋಭಾವವು ತಾಯಿಗೆ ನೆಮ್ಮದಿ ನೀಡಿತ್ತೆಂಬುದು ಮಾತ್ರ ನಿಜ.

ಅವರ ಮಕ್ಕಳಲ್ಲಿ ನಾನೊಬ್ಬನೇ ಮಗ. ಆದರೂ ಮೇಲಿಂದ ಮೇಲೆ ಅವರನ್ನು ಕಾಣಲು ನನಗಾಗುತ್ತಿರಲಿಲ್ಲ. ಅವರು ಅನೇಕ ಬಾರಿ ಬೇಕೆಂದು ಕೇಳಿ ಕೇಳಿ ದಣಿದ ನಂತರವೇ ನಾನವಳಿಗೆ ಎರಡು ಮೂರು ರೂಪಾಯಿ ಕಳಿಸುತ್ತಿದ್ದುದು. ಆದರೆ ತಾಯಿ ಹೇಳುತ್ತಿದ್ದುದೇನು? "ಪಾಪ, ಪಪ್ಪನಿಗೆ ದೊಡ್ಡ ಕಷ್ಟ. ನಾಲ್ಕು ಜನಗಳನ್ನು ಸಾಕಬೇಡವೇ? ಬರುವ ಸಂಬಳ ಸಾಲುವುದೂ ಇಲ್ಲ. ಅವನಿಂದ ಏನನ್ನಾದರೂ ತೆಗೆದುಕೊಂಡರೆ ಮಹಾಪಾಪ." ಅವರು ಮನಸಾರೆ ಹಾಗೆ ಹೇಳು-



ತ್ತಿದ್ದರು. ಆದರೆ ಕೇಳುವವರಿಗೆ ತಾಯಿ ಮಗನನ್ನು ಆಕ್ಷೇಪಿಸುತ್ತಿರುವಳೆಂದು ತೋರುತ್ತಿತ್ತು. ನಿಜ, ನಾನು ತಾಯಿಯ ವಿಷಯವನ್ನೇನೂ ಗಮನಿಸುತ್ತಿರಲಿಲ್ಲ. ಅವರು ಇನ್ನುಳಿದ ಮಕ್ಕಳೊಂದಿಗಲ್ಲವೇ ಇರುತ್ತಿದ್ದುದು? ಅವರು ಹೆಣ್ಣು ಮಕ್ಕಳಾದಾಕ್ಷಣ ಜವಾಬ್ದಾರಿಯಿಲ್ಲದವರೆ?

ತಾಯಿ ತೀರಿಹೋದಾಗ ನನ್ನ ಕಣ್ಣುಗಳು ತೆರೆದವು. ಆ ವಾತ್ಸಲ್ಯಮಯಿ ತಾಯಿಗೆ ನನ್ನ ಮೇಲೆ ತುಸು ಭರವಸೆಯಿತ್ತು. ತಂದೆ ತೀರಿ ಹೋದಾಗ ನನಗೆ ಆಗ ಎರಡು ವರ್ಷ ತುಂಬಿತ್ತಷ್ಟೇ. ನಾನು ರೋಗದ ಕುಳಿಯಾಗಿದ್ದೆ. ಬೆನ್ನು ನೋವು, ಪಿತ್ತಶೂಲೆ ಜೊತೆಗೆ ಇನ್ನೇನೋ ಕಾಯಿಲೆಗಳು. ಥಘಾರ ಬಂತು, ಕಾಮಾಲೆಯಾಗಿತ್ತು. ಆರು ವರ್ಷದವರೆಗೂ ನಾನು ಮೊಲೆಹಾಲು ಕುಡಿದೇ ಬೆಳೆದದ್ದಂತೆ.

"ಇನ್ನು ಅದೆಲ್ಲಾ ಒಂದೂ ಬೇಡಪ್ಪಾ" ಎಂದು ಅಜ್ಜಿಯ ಹತ್ತಿರ ತಾಯಿ ಹೇಳುವುದನ್ನು ಕೇಳಿದ್ದೆನು. ಅಜ್ಜಿ ಆಶ್ಚರ್ಯಪಟ್ಟು ಏನೇನೋ ಕೂಗಾಡಿದರು. "ಹಾಗಾದರೆ ಈ ಮಕ್ಕಳ ವಿಷಯ ಹಾಳಾದಂತೆಯೇ. ಐದಾರು ತಿಂಗಳಿಂದ ಅವನು ನನ್ನ ಹಿಂದೆಯೇ ಎಡೆಬಿಡದೆ ಸುತ್ತುತ್ತಿದ್ದಾನೆ. ಇನ್ನು ಸಾಧ್ಯವಿಲ್ಲವೆಂದು ತಿಳಿದೇ ಅವನು ತಾಯಿಯ ಬಳಿಗೆ ಶಿಫಾರಸಿಗೆ ಬಂದಿದ್ದು."

ಮಕ್ಕಳ ಸ್ಥಿತಿ ಹಾಳಾಗದಿರಲೆಂದು ಅಪ್ಪ ಪಟ್ಟ ಆಸೆ ಒಂದು ವಿಧವಾಗಿ ನೆರವೇರಿತು. ಮಕ್ಕಳ ವಿಷಯವಾಗಿ ಕೊರಗಲು ಅವಕಾಶ ಸಿಕ್ಕದಂತೆ ಆಕೆ ತನ್ನ ಜೀವನಯಾತ್ರೆ ಮುಗಿಸಿದರು.

ಆಕೆ ಸತ್ತಾಗಲೇ ನಾನಾಕೆಯನ್ನು ಪ್ರೀತಿಸತೊಡಗಿದ್ದು. ತಾಯಿ ಹೇಳಿದ ಬುದ್ಧಿವಾದಗಳನ್ನೆಲ್ಲಾ ನಾನು ಆಗಾಗ ಜ್ಞಾಪಿಸಿಕೊಳ್ಳುತ್ತಿದ್ದೆ. ಸಾಧ್ಯವಾದ ಮಟ್ಟಿಗೆ ಅವುಗಳನ್ನು ಅನುಸರಿಸುತ್ತಿದ್ದೆ. ತಾಯಿಯ ತಿಥಿ ಹಬ್ಬಗಳನ್ನು ತಪ್ಪದೆ ನಡೆಸುತ್ತಿದ್ದೆ. ಇಲ್ಲದಿದ್ದರೆ ಇನ್ನು ಆ ತಾಯಿಗೆ ನಾನು ಮಾಡಬೇಕಿರುವ ಕರ್ತವ್ಯವೇನಿದೆ!

ಸಾಯಂಕಾಲದ ಆಹಾರಕ್ಕೆ ಅವಲಕ್ಕಿ, ಹಣ್ಣು ತೆಗೆದಿಟ್ಟೆ. ಹಾಲು ಬೇಡವೆಂದಾಯಿತು. ಮೊದಲೆಲ್ಲಾ ಶುದ್ಧ ಹಾಲು, ಮೊಸರು, ಬೆಣ್ಣೆ, ಕಳ್ಳು ಸಿಗುತ್ತಿತ್ತು. ಈಗ ಎಲ್ಲವೂ ಬೇರೆಯೆ! ಅವರಲ್ಲಿ ಏನೆಲ್ಲಾ ಬೆರಸಿದೆಯೋ? ಬೆರಸಲಿ, ಆದರೆ ಅದಕ್ಕೊಂದು ಮಿತಿ ಬೇಡವೇ? ಬೆರಕೆ ಮಾಡಿ ಮಾರಾಟ ಮಾಡಿದರೆ ಲಾಭವುಂಟು, ನಿಜ. ಆದರೆ ಕೊಳಕು ಮಾಡುವುದರಿಂದ ಯಾರಿಗೆ ಲಾಭ?

ತಾಯಿ ಹಾಲಿನ ವ್ಯಾಪಾರ ಮಾಡುತ್ತಿದ್ದರು. ಮನೆಯಲ್ಲಿ ಯಾವಾಗಲೂ ಒಂದಾದರೂ ಕರೆಯುವ ಹಸುವಿರುತ್ತಿತ್ತು. ಅಕ್ಕಪಕ್ಕದ ಮನೆಗಳಲ್ಲಿನ ಹಸುಗಳ ವಿಷಯವಾಗಿ ತಾಯಿಗೆ ಚೆನ್ನಾಗಿ ಗೊತ್ತಿರುತ್ತಿತ್ತು. ಮರಿಯಾಳ ಮನೆಯ ಹಸು ಮುಂದಿನ ತಿಂಗಳು ಕರು ಹಾಕುತ್ತೆ; ಗೋಪಾಲನ ಮನೆಯ ಹಸು ಗಬ್ಬವಾಗಿದೆ ಅಂತ ಕಾಣುತ್ತೆ, ಇತ್ಯಾದಿ.

ಆ ಗ್ರಾಮದಲ್ಲಿ ಬದಲಾವಣೆಗಳು ಬಂದದ್ದು ಬಲು ನಿಧಾನವಾಗಿ. ರೋಡ್, ಹೈಸ್ಕೂಲ್, ಸಿನಿಮಾ, ರೆಸ್ಟೋರೆಂಟ್ ಇವುಗಳೆಲ್ಲಾ ಬಂದರಲ್ಲವೇ ಊರು ಸುಧಾರಿಸುವುದು. ಇದೊಂದೂ ಮೊದಲು ಅಲ್ಲಿರಲಿಲ್ಲ. ವಿಶಾಲವಾದ ಬಯಲಿನ ನಡುವೆ ಪುಟ್ಟ ಮನೆ ಕಟ್ಟಿಕೊಂಡಿರುವ ಚಿಕ್ಕ ಚಿಕ್ಕ ರೈತರೇ ಅಲ್ಲಿ ಹೆಚ್ಚು. ಹೊಲವು ಉಳುಮೆ ಬಿತ್ತನೆಗೆ ಬಂದಾಗ ಸಂತೆಯಲ್ಲಿ ಎತ್ತು ಕೊಂಡುಕೊಂಡು ಬಂದು ಉತ್ತು ಬಿತ್ತು ನಂತರ ಅದನ್ನು ಮಾರಿಬಿಡುತ್ತಿದ್ದ ಜನರೇ ಅಲ್ಲಿ ಹೆಚ್ಚಾಗಿದ್ದರು. ಅಲ್ಲಿ ಹಾಲು ಯಾರಿಗೂ ಪ್ರಿಯವಲ್ಲ. ಆದರೆ ದೇವಸ್ಥಾನಗಳಲ್ಲಿ ದಿನವೂ ನಾಲ್ಕು ಸೇರು ಹಾಲು ಬೇಕು. ಮಿಂದು ಶುದ್ಧವಾಗಿ ಹಾಲು ತೆಗೆದು ಕೊಡಬೇಕು. ಆ ಇಬ್ಬನಿಯಲ್ಲೊ ಮಳೆಯಲ್ಲೊ ಬೆಳಗಿನ ಜಾವ ತಲೆಗೆ ಸ್ನಾನ ಮಾಡಿ ನಾಲ್ಕಾರು ಮನೆಗಳಿಗೆ ಹೋಗಿ ಹಸುಗಳನ್ನು ಕರೆದು ದೇವಸ್ಥಾನಕ್ಕೆ ಹಾಲನ್ನು ತೆಗೆದುಕೊಂಡು ಹೋಗಲು ಅನೇಕರಿಗೆ ಉತ್ಸಾಹವಿಲ್ಲ. ಆದರೆ ನನ್ನ ತಾಯಿಗೆ ಈ ಉತ್ಸಾಹವಿತ್ತು. ಹಾಲು ಮಾರಿ ಸಿಗುವ ಹಣದಲ್ಲಿ ಅರ್ಧ ಹಸುವಿನ ಯಜಮಾನನಿಗೆ ಕೊಟ್ಟರೂ ತಿಂಗಳಲ್ಲಿ ಎಂಟು ರೂಪಾಯಿಗೆ ಕಡಿಮೆ ಇಲ್ಲದಷ್ಟು ಸಿಗುತ್ತಿತ್ತು. ಸಾಯಂಕಾಲದ ಹಾಲು ಕಾಯಿಸಿ ಹೆಪ್ಪುಹಾಕಿ ಮಜ್ಜಿಗೆ,

ತುಪ್ಪ, ಮಾರಿದರೆ ನಾಲ್ಕೈದು ರೂಪಾಯಿ ಸಿಗುತ್ತಿತ್ತು. ಈ ಸಂಪಾದನೆಯಿಂದಲೇ ತಾಯಿ ಮಕ್ಕಳನ್ನು ಬೆಳೆಸಿದ್ದರು. ಈಶ್ವರನ ಸೇವೆ ಯೆಂದು ಭಾವಿಸಿಕೊಂಡು ಅಮ್ಮ ಹಾಲು ಕರೆ ಯುವ ಕೆಲಸ ಮಾಡುತ್ತಿದ್ದರು. ಹಸುವಿನ ಮೈ ಮೇಲಿನ ಸಗಣಿ, ಕೆಸರನ್ನೆಲ್ಲಾ ಚೆನ್ನಾಗಿ ತೊಳೆದು ಸ್ವಚ್ಛವಾದ ಸ್ಥಳದಲ್ಲಿ ಕಟ್ಟುತ್ತಿದ್ದರು. ಕರುವನ್ನೂ ಮೀಯಿಸುತ್ತಿದ್ದರು. ಕರು ಬಿಟ್ಟು, ಅದು ಕುಡಿದ ನಂತರ ಮತ್ತೆ ಹಸುವಿನ ಕೆಚ್ಚ-ಲನ್ನು ತೊಳೆಯುತ್ತಿದ್ದರು. ಉಗುರು ಕತ್ತರಿಸಿ ಶುದ್ಧ ಮಾಡಿದ ತನ್ನ ಕೈಯನ್ನೂ ಕಾಲನ್ನೂ ತೊಳೆದು ಶುಚಿಯಾದ ವಸ್ತ್ರದಿಂದ! ಒರೆಸುತ್ತಿದ್ದರು. ಹಾಲು ಕರೆಯುವ ಪಾತ್ರೆಯ ವಿಷಯ ಹೇಳಲೇಬೇಕಿಲ್ಲ. ಅದು ಥಳಥಳ ಹೊಳೆಯುತ್ತಿತ್ತು. ತಾಯಿ ಆ ಕಾಲದಲ್ಲೂ ಶುಚಿಯಾದ ವಸ್ತ್ರಗಳನ್ನೇ ಧರಿಸುತ್ತಿದ್ದರು. ಇಷ್ಟೆಲ್ಲಾ ಆದರೂ ತಾಯಿಯೂ ಹಾಲಿಗೆ ನೀರು ಬೆರೆಸುತ್ತಿದ್ದರು. ಅವರು ಹಾಗೆ ಮಾಡುವುದಕ್ಕೆ ಕಾರಣ, ಅಳತೆ ಸರಿಮಾಡಲೆಂದು ಅಥವಾ ಹಸುಗಳಿಗೆ ದೃಷ್ಟಿ ತಾಕದಿರಲೆಂದು ಆಗಿತ್ತು. ಆದರೆ ಈಗಲೋ? ತಾವಾಗಿ ಸೇರಿಸುವ ಪದಾರ್ಥಗಳಲ್ಲದೆ ಸಗಣಿ, ಗೋಮೂತ್ರ, ಕರೆಯುವವನ ಕೈಯಲ್ಲಿನ ಕೆಸರು, ಬಟ್ಟೆಯಲ್ಲಿನ ಧೂಳು ಮುಂತಾದ ಅವೆಷ್ಟೋ ಮಾಲಿನ್ಯಗಳು ಹಾಲಿನಲ್ಲಿ ಬೆರೆಯುತ್ತಿವೆ. ಎಲ್ಲೆಲ್ಲೋ ಮಾರುವ ಹಾಲು ಕೊಂಡು ಉಪಯೋಗಿಸಲು ನನಗೆ ಅಸಹ್ಯ, ಹೆದರಿಕೆ. ನಾನು ಹೋಟೆಲ್‌ನಲ್ಲಿ ಕಾಫಿ ಕುಡಿಯುವುದಿಲ್ಲ. ಏನೇ ಆಗಲಿ, ಇವತ್ತು ಹಾಲು ಬೇಡ.

ರಾತ್ರಿ ಕೆರೆಯಲ್ಲಿ ಮಿಂದಾಯಿತು. ಜೋರಾಗಿ ಮಳೆ ಬರುತ್ತಿದ್ದರೂ ಸ್ನಾನ ಮಾಡಲು ಹಿಂತೆ-ಗೆಯಲಿಲ್ಲ. ಸ್ನಾನ ಮಾಡದಿದ್ದರೆ ಹೇಗೆ? ಆಫೀಸ್‌ನಲ್ಲಿ ಶುದ್ಧವಾಗಿತ್ತೆಂದು ಹೇಳಲಾಗುವುದಿಲ್ಲ. ಹದಿನಾಲ್ಕು ಜನ ಹೆಂಗಸರು ಆಫೀಸ್‌ನಲ್ಲಿ ಕೆಲಸದಲ್ಲಿದ್ದಾರೆ. ಅವರಲ್ಲಿ ಎಷ್ಟು ಜನ ಅಶುದ್ಧವಾಗಿರುತ್ತಾರೋ? ಪಿಂಡ ಹಾಕುವವರು ನೇಮದಿಂದಿರಬೇಡವೇ?

*

ಪಪ್ಪನ್ ಓಳ್ಳೈ ಮನೆಗೆ ಬಂದು ಸೇರುವ ವೇಳೆಗೆ ಮಳೆ ಜೋರಾಗಿತ್ತು. ಮನೆಯೆಂದರೆ ಎರಡು ರೂಮು, ಒಂದು ಕೊಟ್ಟಿಗೆಯಿರುವ ಹಳೆಯ ಕಟ್ಟಡ–ಹೆಚ್ಚು ಜನ ಸಂಚಾರವಿಲ್ಲದ, ಕಾರು ಗಾಡಿಗಳು ಓಡಾಡದ ಒಂದು ರಸ್ತೆಯ ಬದಿಯಲ್ಲಿನ ಬಯಲಲ್ಲಿತ್ತು; ಅದರ ಒಂದು ರೂಮಿನಲ್ಲಿ ಅವನು ವಾಸವಾಗಿದ್ದನು. ಮತ್ತೊಂದು ರೂಮಿನಲ್ಲಿ ಸಿನಿಮಾ ಥಿಯೇಟರ್‌ನಲ್ಲಿ ಕೆಲಸದಲ್ಲಿರುವ ನಟರಾಜ ಇರುತ್ತಿದ್ದನು. ಅವರು ಭೇಟಿಯಾಗುವುದೇ ಅಪರೂಪ. ಪಪ್ಪನ್ ಆಫೀಸ್‌ನಿಂದ ಬರುವ ಹೊತ್ತಿಗೆ ನಟರಾಜ ಕೆಲಸಕ್ಕೆ ಹೋಗಿರುತ್ತಾನೆ. ಪಪ್ಪನ್ ನಿದ್ದೆಯಲ್ಲಿದ್ದಾಗ ನಟರಾಜ ರೂಮಿಗೆ ಬರುತ್ತಾನೆ. ಅವನು ನಿದ್ದೆಯಿಂದೇಳುವ ವೇಳೆಗೆ ಪಪ್ಪನ್ ಆಫೀಸಿಗೆ ಹೋಗಿರುತ್ತಾನೆ.

ರಸ್ತೆಯ ದೀಪದ ಮಂದ ಬೆಳಕು ಕೊಟ್ಟಿಗೆಯೊಳಕ್ಕೂ ಬೀಳುವುದರಿಂದ ಬಾಗಿಲು ತೆರೆಯಲು ಬೇರೆ ದೀಪ ಬೇಕೆನಿಸದೆ ಅವನು ಹಾಗೆಯೇ ಬಂದು ಸೇರಿದ್ದನು. ಕೊಟ್ಟಿಗೆಯ ಬಳಿಯ ಸಂಪಿಗೆ ಮರದ ನೆರಳು ಮನೆಯ ಒಂದು ಭಾಗವನ್ನು ಮರೆಯಾಗಿಸಿತ್ತು. ಅಲ್ಲಿ ಯಾರೋ ನಿಂತಿರುವಂತೆ ಅವನಿಗೆ ಅನ್ನಿಸಿತು.

"ಯಾರದು?"

ಉತ್ತರ ಬರಲಿಲ್ಲ. ರೂಮಿನ ಬಾಗಿಲು ತೆಗೆದು ದೀಪ ಹಚ್ಚಿ ಬಂದು ಮತ್ತೆ ಕೇಳಿದನು.

"ಮಳೆಯಾದದ್ದರಿಂದ ಬಂದು ನಿಂತೆ." ಸ್ತ್ರೀಯ ಧ್ವನಿ. ನಾಚಿಕೆ, ಹೆದರಿಕೆ ತುಂಬಿತ್ತು ಅದರಲ್ಲಿ.

ಮಳೆ ನಿಂತರೆ ಹೋಗುತ್ತಾಳೆಂದುಕೊಂಡು ಪಪ್ಪನ್ ರೂಮಿನೊಳಕ್ಕೆ ಹೋದನು. ಅವಲಕ್ಕಿ, ಹಣ್ಣು ತಿಂದನು. ಕೈ ತೊಳೆಯಲೆಂದು ಅವನು ಹೊರಗೆ ಹೋದಾಗಲೂ ಅವಳಲ್ಲೇ ಇದ್ದಳು. ಮಳೆ ಹೆಚ್ಚಾಗಿತ್ತು.

ಈ ರಾತ್ರಿಯಲ್ಲಿ ಒಬ್ಬಳೇ! ಭಿಕ್ಷುಕಿಯಾಗಿರಬಹುದೇ? ಕೊಂಚ ಅನ್ನ ಮಿಕ್ಕಿದ್ದು ಜ್ಞಾಪಕಕ್ಕೆ ಬಂತು. ಅವನು ರೂಮಿನೊಳಕ್ಕೆ ಹೋದನು,

"ಏನು ಮಳೆಯಪ್ಪಾ ದೇವರೇ!" ಅವಳದೇ ಧ್ವನಿ. ಅವಳು ಪೂರ್ತಿ ನೆನೆದುಬಿಟ್ಟಿರಬೇಕು.

"ಈ ಬಾಗಿಲ ಬಳಿ ಬಂದು ನಿಲ್ಲು."–ತಾನು ಹಾಗೆ ಹೇಳುವುದು ತಪ್ಪೋ ಒಪ್ಪೋ ತಿಳಿಯದೆ ಅವನು ಹೇಳಿದನು.

ಬಾಗಿಲ ಮರೆಯಿಂದ ಹೊರಬರುತ್ತಿರುವ ಬೆಳಕಿನಲ್ಲಿ ಅವಳು ನಿಂತಳು. ಮಿಂಚು ಹೊಡೆದಂತಾಯಿತು. ಅವಳೋರ್ವ ಯುವತಿ. ಅವಳ ಮೇಲೆ ಬೆಳಕು ಬೀಳದಂತೆ ಬಾಗಿಲ ಬಳಿ ಮರೆ ಮಾಡಿ ನಿಂತನು.

"ನೀನೆಲ್ಲಿ ಹೋಗಬೇಕು?"

"ಗೊತ್ತಿಲ್ಲ."

"ಸರಿಹೋಯ್ತು. ನೀನೊಬ್ಬಳೇ ಬಂದಿದ್ದೀಯಾ?"

"ಹೌದು."

ಅವನಿಗೆ ಹೆದರಿಕೆಯಾಯಿತು. ಜೊತೆಯಲ್ಲಿ ಯಾರೂ ಇಲ್ಲದೆ ದಿಕ್ಕೆಟ್ಟು ನಡೆಯುವಳು. ಯಾರೋ ಹೊಸಬಳೆಂದು ತೋರುತ್ತೆ. ಭಿಕ್ಷುಕಿಯಾಗಿರಲಿಕ್ಕಿಲ್ಲ.

"ಈ ಊರಿಗೆ ಹೊಸದಾಗಿ ಬಂದಿದ್ದೀಯಾ? ಈ ರಾತ್ರಿಯಲ್ಲಿ ಮಳೆ ಸುರಿಯುತ್ತಿರುವಾಗ ಎಲ್ಲಿಗೆ ಹೋಗುವುದೆಂದು ತಿಳಿಯದೆ ಹೇಗೆ ಬಂದೆ?"

"ದೋಣಿಯಲ್ಲಿ ಬಂದೆ. ಬಂದಿಳಿಯುವ ವೇಳೆಗೆ ರಾತ್ರಿಯಾಗಿ ಬಿಟ್ಟಿತು. ಇಲ್ಲಿ ಯಾವ ಜಾಗವೂ ನನಗೆ ಗೊತ್ತಿಲ್ಲ. ಹೀಗೆ ನಡೆದು ಹೋಗುತ್ತಿರಬೇಕಾದರೆ ಮಳೆ ಬಂದುಬಿಟ್ಟಿತು. ಬಟ್ಟೆ ನೆನೆಯದಿರಲೆಂದು ಓಡಿ ಬಂದು ಇಲ್ಲಿ ಹತ್ತಿ ನಿಂತೆ." ಮಾತುಗಳು ತುಂಡುತುಂಡಾಗಿ ಕಣ್ಣೀರಿನ ಮಧ್ಯೆ ಬರುತ್ತಿದ್ದುವು.

"ನೀನೇನಾದರೂ ತಿಂದಿದ್ದೀಯಾ?"

"ಇಲ್ಲ. ಬೆಳಿಗ್ಗೆಯಿಂದ ಏನೂ ತಿಂದಿಲ್ಲ."

ಅವಳು ಅಳುತ್ತಿದ್ದಳು. ಇನ್ನು ಮಾತನಾಡಿದರೆ ಅವಳ ಅಳು ಹೆಚ್ಚುತ್ತದೆ. ನಾನು ಕೇಳುವುದು, ಅವಳು ಉತ್ತರ ಕೊಡುವುದು. ಯಾರಾದರೂ ನೋಡಿದರೆ ಮಾನ ಹೋಗುತ್ತದೆ.

"ಸ್ವಲ್ಪ ಅನ್ನ ಇದೆ ಕೊಡುತ್ತೇನೆ. ತಿಂದು ಬೇಗ ಎಲ್ಲಾದರೂ ಹೋಗು. ಯಾರಾದರೂ ಹೆಂಗಸರಿರುವಂತಹ ಮನೆಗೆ ಹೋಗು."

ಅನ್ನ ತಂದು ಅದೇ ಪಾತ್ರೆಯಲ್ಲೇ ಕೊಟ್ಟನು. ಬಾಗಿಲ ಬಳಿಯಲ್ಲೇ ಪಕ್ಕಕ್ಕೆ ಸರಿದು ಅವಳದನ್ನು ತಿಂದಳು. ತಿನ್ನುವಾಗ ಅವಳೆಂದಳು: "ಹೆಂಗಸರಿದ್ದ ಮನೆಗೆ ಹೋಗಿದ್ದೆ, ಅವರು ಅಲ್ಲಿಂದ ನನ್ನನ್ನು ಓಡಿಸಿದರು."

"ಯಾಕೆ ಓಡಿಸಿದರು ?"

"ನೀನು ಹೇಳುವುದೆಲ್ಲಾ ಸುಳ್ಳು. ರಾತ್ರಿಯ ಹೊತ್ತು ಒಬ್ಬಳೇ ಬಂದಿರುವ ನಿನಗೆ ಇಲ್ಲಿ ಮಲಗುವುದರಿಂದ ಪ್ರಯೋಜನವಿಲ್ಲ. ಎಲ್ಲಾದರೂ ಅಂಗಡಿಗಳ ಜಗುಲಿಗಳ ಮೇಲೆ ಮಲಗಿಕೋ. ಅಲ್ಲಿ ನಿನಗೆ ಯಾರಾದರೂ ಜೊತೆ ಸಿಗುತ್ತಾರೆ. ಇಲ್ಲದಿದ್ದರೆ ನಿನ್ನಂಥವರಾದರೂ ಬಂದು ಸೇರಿಕೊಳ್ಳುತ್ತಾರೆ, ಎಂದೆಲ್ಲಾ ಅವರು ಹೇಳಿದರು."

ಹಾಗೆ ಹೇಳಿದ್ದರಲ್ಲಿ ತಪ್ಪೇನೂ ಇರಲಿಲ್ಲ. ತನಗೂ ಹಾಗೇ ಅನ್ನಬೇಕೆಂದು ಅನಿಸಿತ್ತಲ್ಲವೆ, ಎನಿಸಿತು ಪಪ್ಪನ್‌ಗೆ.

"ದೋಣಿಯಿಂದಿಳಿದಾಗಿನಿಂದಲೂ ಈ ರಾತ್ರಿ ಹೇಗೆ ಕಳೆಯುತ್ತೇನೋ ಎಂದು ಒಂದೇ ಹೆದರಿಕೆ ನನಗೆ."

"ಹೇಗಾದರೂ ಕಳೆ. ಯಾರೂ ಪರಿಚಯವಿಲ್ಲದ ಸ್ಥಳಕ್ಕೆ ಯಾರೂ ಜೊತೆಯಿಲ್ಲದೆ ಬರುವುದಕ್ಕಿಂತ ಮುಂಚೆ ಈ ಯೋಚನೆ ಎಲ್ಲಿ ಹೋಗಿತ್ತು? ನಿನ್ನ ಮನೆಯವರು ಹೋಗಲೊಪ್ಪಿದರೆ? ಮನೆ ಬಿಟ್ಟು ಬಂದಿದ್ದಾದರೂ ಯಾಕೆ ?"

"ಅಯ್ಯೋ, ಈ ಮಳೆಯಲ್ಲಿ ನನ್ನನ್ನು ಓಡಿಸಬೇಡಿ, ಸಾರ್. ನಾನು ಇದಕ್ಕೆ ಮುಂಚೆ ಇಲ್ಲಿ ಬಂದಿಲ್ಲ. ಅಷ್ಟೇ ಅಲ್ಲ, ನಮ್ಮೂರು ಬಿಟ್ಟು ಇನ್ನೆಲ್ಲಿಗೂ ನಾನು ಹೋಗಿಲ್ಲ," ಎಂದಳಾಕೆ ಕಣ್ಣೀರ ಮಧ್ಯದಲ್ಲೇ.

"ಅಂಥಾದ್ದರಲ್ಲಿ ಒಬ್ಬಳೇ ಹೊರಟು ಬಂದಿದ್ದೀಯಲ್ಲಾ ? ಪಟ್ಟಣಗಳಲ್ಲಿ ಎಲ್ಲೆಲ್ಲಿಂದಲೋ ಬರುವ, ಹೇಗೆ ಹೇಗೋ ಇರುವ ಮನುಷ್ಯರಿರುತ್ತಾರೆಂದು ನಿನಗೆ ಗೊತ್ತೇ ? ಏನಾದರೂ ಆಗಲಿ, ಇಲ್ಲಿ ಮಲಗಲು ಸ್ಥಳವಿಲ್ಲ. ಹೀಗೆ ಬೀದಿಯಲ್ಲಿ ನಡೆಯುವವರೆಲ್ಲಾ ಇಲ್ಲಿ ಬಂದು ಮಲಗಲು ಸಾಧ್ಯವಿಲ್ಲ. ನೀನೇಕೆ ಮನೆ ಬಿಟ್ಟು ಬಂದೆ? ಹೇಳುವ ಮನಸ್ಸಿಲ್ಲದಿದ್ದರೆ ಬೇಡ, ಹೇಳಬೇಡ.

ಬಿಸಿಲು ಮಳೆಗಳನ್ನು ಸಹಿಸಬಹುದೆಂದೂ, ಯಾವ ದಾರಿಯಲ್ಲೂ ಮಲಗಬಹುದೆಂದೂ, ಏನು ಬೇಕಾದರೂ ಅನುಭವಿಸಬಹುದೆಂತಲೂ ಅಲ್ಲವೇ ನೀನು ಹೊರಟಿರುವುದು ?"

"ನನ್ನ ಸಹನೆ ಮೀರಿ ಹೋಗಲು ಹೊರಟು ಬಿಟ್ಟೆ. ಮೊದಲಿಗೆ ಸಿಕ್ಕ ದೋಣಿಯಲ್ಲಿ ಹತ್ತಿದೆ. ಇಲ್ಲಿಗೆ ಬಂದು ಸೇರಿದೆ. ಹೀಗೇ ಸ್ವಲ್ಪ ನಡೆದು ನೋಡಿದೆ. ಅಲ್ಲೊಂದು ಆಲದ ಮರ ಇಲ್ಲವೇ ? ಅದರ ಕಟ್ಟೆ ಮೇಲೆ ನಿಂತೆ. ಅಲ್ಲಿ ಐದಾರು ಹೆಣ್ಣು ಮಕ್ಕಳಿದ್ದರು. ಅವರು ಒಂದೊಂದೇ ಪ್ರಶ್ನೆ ಕೇಳತೊಡಗಿದರು. ಹಾಳಾದವರು, ನನ್ನನ್ನು ಬಗೆದೇ ಹಾಕಿದರು. ಅವರಲ್ಲೊಬ್ಬ ಮುದುಕಿ ಕೇಳಿದಳು, 'ನೀನು ಹೆದರಬೇಡ, ಹುಡುಗಿ, ನನ್ನೊಂದಿಗೇ ಇರು. ಮಲಗಲು ಸ್ಥಳ, ಕುಡಿಯಲು ಗಂಜಿ ಸಂಪಾದಿಸುವಿಯಂತೆ,' ಎಂದು ಹೇಳಿ ಅವಳು ನನ್ನ ತಲೆಯನ್ನೂ ಎದೆಯನ್ನೂ ಸವರಿದಳು. ಮೆಲ್ಲನೆ ಒಮ್ಮೆ ನಕ್ಕಳು. ಆಗ ಒಬ್ಬಳೆಂದಳು, 'ಅಕ್ಕನಿಗೆ ಭಾಗ್ಯ ಬಂತಲ್ಲಾ' ಎಂದು. ಆ ಅಜ್ಜಿ ಮುಟ್ಟಿದ ಸ್ಥಳವೆಲ್ಲಾ ನನಗೆ ಚುಚ್ಚುತ್ತಿದೆ. ಅವಳ ಕೈಯಲ್ಲಿ ಮುಳ್ಳಿತ್ತೋ ಎಂದೆನಿಸುತ್ತಿದೆ ನನಗೀಗ."

ಅವನ ಮನಸ್ಸು ಕರಗತೊಡಗಿತು, ಆದರೆ ಅದು ಕರುಣೆಯಿಂದ ಮಾತ್ರವೋ ? ಹತ್ತು ಹದಿನೆಂಟು ವರ್ಷ ವಯಸ್ಸಿನ ಒಂದು ಹೆಣ್ಣು. ರಾತ್ರಿ ಸಮಯ. ಭಯಂಕರವಾಗಿ ಸುರಿಯುತ್ತಿರುವ ಮಳೆ.

"ನೀನು ಎಲ್ಲಿಗೊ ಹೋಗಿದ್ದೀಯೆಂದು ಅಮ್ಮನಿಗೆ ಗೊತ್ತಿಲ್ಲ. ಇಲ್ಲದಿದ್ದರೆ ನಂತರದ ದೋಣಿಯಲ್ಲೇ ನಿನ್ನನ್ನು ಕರೆದುಕೊಂಡು ಹೋಗಲು ಅವರು ಬರುತ್ತಿದ್ದರು. ಆ ಮುದುಕಿ ನಿನ್ನನ್ನು ಕಾಣದೆ ತಲೆ ಚಜ್ಜಿಕೊಂಡು ಅಳುತ್ತಿರಬೇಕು. ಹೆತ್ತ ತಾಯಿಯನ್ನು ಸಂಕಟಪಡಿಸುತ್ತೀಯಲ್ಲಾ ನೀನು ?"

"ಅಮ್ಮ, ನಾನು ತೊಲಗಿದರೆ ಸಾಕೆಂದುಕೊಂಡಿರುತ್ತಾಳೆ. ಅದರಿಂದಲೇ ಅಲ್ಲವೇ ನನ್ನ ಮಲತಂದೆ ಮೆಟ್ಟಿದರೂ, ಒದ್ದರೂ ಅವಳು ತುಟಿ ಪಿಟಕ್ಕನ್ನದೆ ಇರುವುದು ? ಅವನೊಬ್ಬ ಒಕನಿದ್ದಂತೆ. ಅವನ ಧ್ವನಿ ಕೇಳಿದರೆ ಸಾಕು, ಹೆದರಿಬಿಡಬೇಕು. ಕಳ್ಳು ಗಂಟಲೊಳಗಿಳಿದು ಬಿಟ್ಟರೆ ಅವನು ಏನು ಮಾಡುತ್ತಾನೆಂದು ಹೇಳಲಾಗುವುದಿಲ್ಲ. ಅಂಥವನ ಬಳಿ ನಮ್ಮ ತಾಯಿ ಕೆಲವರೆದುರು ಹೇಳುತ್ತಿದ್ದಳು, 'ಇವಳ ತಂದೆ ಸತ್ತಾಗ ನನಗೆ ಬಹಳ ಸಂಕಟವೆನಿಸಿತು. ಈಗ ಅವನು ಸತ್ತದ್ದೇ ಒಳ್ಳೆಯದಾಯಿತೆಂದು ತೋರುತ್ತಿದೆ' ಎಂದು. ಇಂಥವಳು ನನ್ನ ಅಮ್ಮ. ಅವನಂತೂ ತೀರ ನಾಚಿಕೆಗೆಟ್ಟ ಮನುಷ್ಯ. ಅವನಿಗಿಂತ ನನ್ನ ಅಮ್ಮನಿಗೆ ಹತ್ತು ವರ್ಷವಾದರೂ ಹೆಚ್ಚು ವಯಸ್ಸಾಗಿದೆ. ನಾನು ಹೋಗಿದ್ದೇ ಒಳ್ಳೆಯದಾಯಿತೆಂದು ಅಮ್ಮ ತಿಳಿಯುತ್ತಾಳೆ. ಆದರೆ ಆ ರಾಕ್ಷಸನೆಲ್ಲಾದರೂ ಹುಡುಕಿಕೊಂಡು ಬರುತ್ತಾನೇನೋ ಎಂದು ನನಗೆ ಹೆದರಿಕೆಯಾಗುತ್ತಿದೆ."

"ಸಾಕು ಸಾಕು. ನನಗಿದೊಂದೂ ಕೇಳಬೇಕಿಲ್ಲ. ನೀನು ಹುರಿಯುವ ಬಾಣಲೆಯಿಂದ ಹಾರಿ ಉರಿಯುವ ಒಲೆಯೊಳಗೆ ಬಿದ್ದಿರುವೆ."

ಗಾಳಿ ಜೋರಾಗಿ ಬೀಸಿ ರೂಮಿನೊಳಕ್ಕೂ ಇರಚಲು ಬಡಿಯುತ್ತಿತ್ತು. ಅವಳು ನೆಂದು ತೊಪ್ಪೆಯಾಗಿದ್ದಳು.

"ನಿನ್ನನ್ನು ಈ ಮಳೆಯಲ್ಲಿ ಹೋಗಲು ಬಿಡಲು ನನಗೆ ಸರಿಯೆನ್ನಿಸುತ್ತಿಲ್ಲ. ಕೊಟ್ಟಿಗೆಯ ಮೂಲೆಯಲ್ಲಿ ಹೋಗಿ ಬಿದ್ದುಕೋ. ಬೆಳಕು ಹರಿಯುವುದಕ್ಕೆ ಮುಂಚೆ ಇಲ್ಲಿಂದ ಕಂಬಿ ಕೀಳಬೇಕು," ಎನ್ನುತ್ತಾ ಬಾಗಿಲ ಹಲಿಗೆ ಬಿದ್ದು ಹೋಗಿ, ಧೂಳು ಕೂಡಾ ಹೊಡೆಯದೆ ಹಾಳು ಬಿದ್ದಿದ್ದ ಆ ಕೊಟ್ಟಿಗೆಯನ್ನು ಅವಳಿಗೆ ಅವನು ತೋರಿಸಿದನು. ಇನ್ನು ಅವಳಿಗೆ ಹಾಸಿಕೊಳ್ಳಲು ಏನಾದರೂ ಬೇಕಲ್ಲಾ ಎಂಬ ಜ್ಞಾಪಕ ಈಗ ಬಂತು. ತನ್ನ ರೂಮಿನಲ್ಲಿ ಹರಡಿದ್ದ ಚಿಕ್ಕ ಹುಲ್ಲಿನ ಚಾಪೆಯೊಂದನ್ನು ಕೊಟ್ಟು ಅವಳಿಗೆ, "ಇದನ್ನು ಹಾಸಿಕೊಂಡು ಹಾಯಾಗಿ ಮಲಗಿಕೋ," ಎಂದು ಹೇಳಿದನು.

ಮತ್ತೆ ತನ್ನ ರೂಮಿಗೆ ಬಂದಾಗ ಅವನು ಆಲೋಚಿಸಿದನು. ಅಮ್ಮ ಇದ್ದಿದ್ದರೆ ತನ್ನನ್ನು ಪರೀಕ್ಷಿಸಲು ಸಾಕ್ಷಾತ್ ಪಾರ್ವತಿಯೇ ಬಂದಿದ್ದಾಳೆಂದುಕೊಳ್ಳುತ್ತಿದ್ದಳು. ಈ ಚಳಿಯಲ್ಲಿ ಹೇಗೆ ಮಲಗುತ್ತಾಳೋ. ಒಂದು ಹಳೆಯ

# ಗೃಹೋಪಕರಣಗಳಿಗೆ

# ಕೆನರಾ ಸೇಲ್ಸ್

ಕೆನರಾ ಸೇಲ್ಸ್ ಕಾರ್ಪೊರೇಷನ್ ಲಿಮಿಟೆಡ್
ಕೊಡಿಯಾಲಬೈಲು, ಮಂಗಳೂರು-3

# ನೀವು ನಮ್ಮಲ್ಲಿ ವಿಶ್ವಾಸವಿಡಬಹುದು

## ತಯಾರಕರ ಆಯ್ಕೆ

ಪ್ರಸಿದ್ಧರಾದ ತಯಾರಕರು ತಮ್ಮ ಗೃಹೋಪಕರಣ ವಸ್ತುಗಳನ್ನು ಕೆನರಾ ಸೇಲ್ಸ್ ಕಾರ್ಪೊರೇಷನ್ ಮೂಲಕ ವಿತರಣ ಮಾಡುವುದರಿಂದ ಲಾಭವಿದೆಯೆಂದು ತಿಳಿಯುತ್ತಾರೆ. ಅದಕ್ಕಿರುವ ಕಾರಣ ಊಹಿಸಲು ಕಷ್ಟವಿಲ್ಲ. 55 ವರ್ಷಗಳ ಮಾರಾಟಾನುಭವ ನಮಗಿರುವುದೇ ಅದಕ್ಕೆ ಕಾರಣ. ಎಲ್ಲಕ್ಕಿಂತ ಮಿಗಿಲಾಗಿ ನಿಮ್ಮ ಮನೆಗೆ ಉಪಯುಕ್ತವಾದುದೇನೆಂಬುದು ನಮಗೆ ಚೆನ್ನಾಗಿ ತಿಳಿದಿದೆ.

## ವ್ಯಾಪಾರಿಗಳಿಗೆ ಸೂಚನೆ

ನೀವು ವ್ಯಾಪಾರಿಗಳಾಗಿದ್ದಲ್ಲಿ, ಸ್ಟಾಕಿನ ಬಗ್ಗೆ ಚಿಂತೆ ಮಾಡಬೇಡಿ. ನಿಮಗೆ ಬೇಕಾದ ವೇಳೆಯಲ್ಲಿ, ಒಳ್ಳೆಯ ಗೃಹೋಪಕರಣಗಳನ್ನು ನಾವು ನಿಮಗೊದಗಿಸುತ್ತೇವೆ. ದೀರ್ಘಾವಧಿಯ ಕಾಲದವರೆಗೆ ನಿಮ್ಮ ಬಂಡವಾಳವನ್ನು ತೊಡಗಿಸಿಡುವ ಅಗತ್ಯವಿಲ್ಲ. ನಿಮ್ಮ ಗ್ರಾಹಕರನ್ನೂ ನೀವು ಸಂತೋಷಪಡಿಸಬಹುದು.

## ಗ್ರಾಹಕರ ಗಮನಕ್ಕೆ

ಗ್ರಾಹಕರಾದ ನೀವು, ಲಾಭದಾಯಕ ಬೆಲೆಗಳಲ್ಲಿ ಗೃಹೋಪಕರಣಗಳನ್ನು ನಿಮಗೊದಗಿಸುವ ಬಗ್ಗೆ ನಮ್ಮಲ್ಲಿ ನೀವು ವಿಶ್ವಾಸವಿಡಬಹುದು. ಅದರಿಂದಲೇ ಅಧಿಕಸಂಖ್ಯೆಯಲ್ಲಿ ಗ್ರಾಹಕರು ತಮ್ಮ ಬೇಡಿಕೆಗಳಿಗಾಗಿ ನಮ್ಮತ್ತ ತಿರುಗುತ್ತಿದ್ದಾರೆ.



















CSC-6780 Rev.

ಮುಂಡಾ (ಲುಂಗಿ)ದರೂ ಕೊಡುವುದು ಒಳ್ಳೆಯದು. ಪೆಟ್ಟಿಗೆಯೆಲ್ಲಾ ಜಾಲಾಡಿ ಬಂದು ಹಳೆಯ ಮುಂಡವನ್ನು ತೆಗೆದುಕೊಂಡನು. ಇನ್ನೇನು ಅದು ಹರಿಯಲು ಸಿದ್ಧವಾದಂತಿತ್ತು. ಅವಳಿಗೆ ಕೊಡಲೆಂದು ಬಂದಾಗ ಜ್ಞಾಪಕ ಬಂತು. ಎಲ್ಲಾದರೂ ಅನಾಹುತವಾಗಬಹುದು. ಆ ಅಗಸನ ಗುರುತನ್ನು ಹರಿದು ಹಾಕಬೇಕು. ಗುರುತು ಹರಿದು ಹಾಕಿ ಬಾಗಿಲ ಬಳಿ ಹೋಗಿ, "ನಿನ್ನ ಬಟ್ಟೆಯೆಲ್ಲಾ ನೆನೆದು ಹೋಗಿದೆಯಲ್ಲಾ, ಇದನ್ನು ಉಟ್ಟುಕೋ," ಎಂದು ಹೇಳಿ, ಮುಂಡನ್ನು ಕೊಟ್ಟು ಮತ್ತೆ ಕೇಳಿದನು: "ನಿನ್ನ ಹೆಸರೇನು?"

"ಸೌಮಿನಿ."

"ಬೆಳಕು ಹರಿಯುವುದಕ್ಕಿಂತ ಮುಂಚೆ ಇಲ್ಲಿಂದ ಹೊರಟುಹೋಗಬೇಕು. ರಾತ್ರಿ ಕೆಮ್ಮುವುದು, ಸೀನುವುದು ಇದೆಲ್ಲಾ ಕೂಡದು. ಆ ಪಕ್ಕದ ರೂಮಿಗೆ ಬೇರೆ ಮನುಷ್ಯ ಬರುತ್ತಾನೆ."

ಅವನು ತನ್ನ ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿದನು. ಎಲ್ಲೋ ಬುದ್ಧಿಯಿಲ್ಲದ ಹುಡುಗಿ! ಒಂಟಿಯಾಗಿ ರಾತ್ರಿ ಯಾರ ಕಣ್ಣಿಗಾದರೂ ಬಿದ್ದರೆ! ಒಂದು ವಿಧದಲ್ಲಿ ಈಗ ಮಾಡಿದ್ದೇ ಸರಿಯಾಯಿತು. ಅಬಲೆಯಾದ, ಕಷ್ಟದಲ್ಲಿರುವ ಒಬ್ಬಳಿಗೆ ತಾತ್ಕಾಲಿಕವಾಗಿ ಅಭಯವನ್ನು ಕೊಡಲು ತನ್ನಿಂದ ಸಾಧ್ಯವಾಯಿತು. ಆದರೂ ಎಷ್ಟು ಧೈರ್ಯ! ನೋಡಲು ಸುಮಾರಾಗಿರುವ ಒಬ್ಬ ಹುಡುಗಿ ರಾತ್ರಿ ಹೇಗೋ ಸುತ್ತಾಡಿಬಿಡೋಣವೆಂದು ಹೊರಟಿದ್ದಾಳಲ್ಲಾ! ಅದೂ ಈ ಪ್ರಾಯದಲ್ಲಿ! ಹೇಗಾದರೂ ಅವಳನ್ನು ಬೆದರಿಸಿ ಮನೆಗೆ ಹಿಂದಿರುಗಿ ಕಳಿಸಬೇಕು. ಎಷ್ಟಾದರೂ ಅವಳಿಗೊಬ್ಬ ತಾಯಿಯಿದ್ದಾಳೆ. ಎಷ್ಟೇ ಕೆಟ್ಟವಳಾದರೂ ಮಗಳೊಂದಿಗೆ ಪ್ರೀತಿಯಿಲ್ಲದೆ ಇರುತ್ತೇಯೇ? ಮಲತಂದೆ ಕೋಪದಿಂದ ಹೊಡೆದೋ ಬಡಿದೋ ಮಾಡಿರಬಹುದು. ಬೇರೊಬ್ಬನ ಮಗಳಿಗೆ ಅನ್ನಬಟ್ಟೆ ಕೊಡಲು ಅವನಿಗಿಷ್ಟವಿಲ್ಲದಿರಬಹುದು ಅಥವಾ ಅವನಿಗೆ ಶಕ್ತಿಯಿಲ್ಲದಿರಬಹುದು.

ಪಪ್ಪನ್ ಎದ್ದು ಪೆಟ್ಟಿಗೆಯನ್ನು ತೆಗೆದು ಒಂದು ರೂಪಾಯಿ ಕೈಗೆ ತೆಗೆದುಕೊಂಡು ಕೊಟ್ಟಿಗೆಯ ಬಾಗಿಲ ಬಳಿ ಹೋದನು.

"ಸೌಮಿನಿ, ಇಗೋ ಇದನ್ನು ಕೈಲಿಟ್ಟುಕೋ. ಮೊದಲನೆಯ ದೋಣಿಗೇ ಈ ಊರು ಬಿಟ್ಟು ಹೊರಟುಬಿಡಬೇಕು."

ಅವಳ ಕೈಗೆ ತನ್ನ ಕೈ ತಗುಲದಂತೆ ನೋಟನ್ನು ಅವಳ ಕೈಗೆ ಹಾಕಿದನು ಪಪ್ಪನ್. ರಸ್ತೆಯ ದೀಪದ ಮಂದ ಬೆಳಕಿನಲ್ಲಿ ಅವನು ಅವಳನ್ನು ಕಂಡನಾದರೂ ತನ್ನ ಕೈಯಿಂದ ಕಾಗದ-ಚೂರು ಜಾರಿ ಕೆಳಗೆ ಬಿದ್ದದ್ದು ಅವನಿಗೆ ಕಾಣಲಿಲ್ಲ. ಅವಳು, "ಈ ಕಡೆ ಕೊಟ್ಟಿರಾ? ಏನದು? ಇಲ್ಲೆಲ್ಲೂ ಕಾಣಿಸುತ್ತಿಲ್ಲವಲ್ಲಾ?" ಎಂದಳು.

ಅವನಿಗೆ ರೇಗಿಹೋಯಿತು. ಇನ್ನು ತಾನು ಒಳಕ್ಕೆ ಹೋಗಲೇಬೇಕು. ಅಲ್ಲಿ ಹುಡುಕಿಕೊಡಬೇಕು. ನಟರಾಜ ಬರುವ ಸಮಯವಾಯಿತು.

ಅವನು ರೂಮಿನೊಳಗೆ ಹೋಗಿ ಬೆಂಕಿಪೊಟ್ಟಣ ತೆಗೆದುಕೊಂಡು ಬಂದನು. ಕಡ್ಡಿಗೀರಲು ಅವನಿಗೆ ಹೆದರಿಕೆ. ಅವಳು ಮುಂಡು ಬದಲಾಯಿಸುತ್ತಿರಬೇಕು.

"ಸಿಕ್ಕಿತೇ ಒಂದು ರೂಪಾಯಿ ನೋಟು?"

"ಇಲ್ಲಿ ಬಹಳ ಕತ್ತಲು."

ಮಳೆಗಾಳಿ ಜೋರಾಗಿಯೇ ಇತ್ತು. ಅವನೊಂದು ಕಡ್ಡಿ ಗೀರಿದನು. ಅದು ಆರಿಹೋಯಿತು. ಕೊಟ್ಟಿಗೆಯೊಳಕ್ಕೆ ನುಗ್ಗಿದಾಗ ಅಕಸ್ಮಾತ್ತಾಗಿ ಅವಳಿಗೆ ಡಿಕ್ಕಿ ಹೊಡೆದಿದ್ದನು. ಆದರೆ ಒಡನೆ ಬೆಚ್ಚಿ ಹಿಂತೆಗೆದನು. ತಾಯಿಯ ತಿಥಿಗೋಸ್ಕರ ಮಡಿಯಲ್ಲಿದ್ದವನಲ್ಲವೇ?

"ಸಾರ್, ಯಾರ ಮನೆಯಲ್ಲಾದರೂ ಕೆಲಸ ಮಾಡಿಕೊಂಡು ಬದುಕೋಣವೆಂದಿದ್ದೇನೆ. ನೀವು ಎಲ್ಲಾದರೂ ಕೆಲಸ ಕೊಡಿಸಿ ಸಾರ್. ದೇವರು ನಿಮಗೆ ಒಳ್ಳೆಯದು ಮಾಡುತ್ತಾನೆ."

ಅವನು ಮತ್ತೊಂದು ಕಡ್ಡಿ ಗೀರಿದನು.

"ಕಾಣಿಸಿತು," ಎಂದು ಅವಳು ಹೇಳಿ ಬಗ್ಗಿ ನೋಟನ್ನು ಹೆಕ್ಕಿ ತೆಗೆದುಕೊಂಡು ಮೇಲೆದ್ದಾಗ ಅವಳ ತಲೆ ಅವನಿಗೆ ತಗುಲಿತು.

ಇವಳನ್ನು ಈಗಲೇ ಹೊರಕ್ಕೆ ದಬ್ಬಿಬಿಡಬೇಕೆಂದೆನಿಸಿತವನಿಗೆ.

"ಇಲ್ಲಿ ವಿಪರೀತ ಇರುವೆ."

ಹುಡುಗಿ ಪರವಾಗಿಲ್ಲ. ಇನ್ನೊಂದು ಸಲಕ್ಕೆ 'ಒಬ್ಬಳೇ ಮಲಗಲು ಹೆದರಿಕೆ,' ಅನ್ನುತ್ತಾಳೆ. ನಂತರ, 'ಸಾರ್, ನಿಮ್ಮ ರೂಮಿಗೆ ಬಂದು ಒಂದು ಮೂಲೆಯಲ್ಲಿ ಮಲಗಿಕೊಳ್ಳಲೇ?' ಎಂದುಬಿಡುತ್ತಾಳೆ, ಅಷ್ಟೆ.

"ಇರುವೆಯಿದ್ದರೆ ಇಲ್ಲಿಂದ ಆಚೆ ಹೋಗು. ಅಲ್ಲಿಯ ಯಾವುದಾದರೊಂದು ಅಂಗಡಿಯ ಜಗುಲಿಯ ಮೇಲೆ ಮಲಗಿಕೋ."

"ನಿಮಗಷ್ಟು ಕೋಪವಾದರೆ ಹೋಗುತ್ತೇನೆ ಸಾರ್. ಇಷ್ಟು ಉಪಕಾರ ಮಾಡಿದ ನಿಮಗೆ ಕೋಪ ತರಿಸಬಾರದು."

"ಈ ಮಳೆಯಲ್ಲಿ ಹೋಗುತ್ತೀಯಾ?" ಅವನು ಕೇಳಿಯೇಬಿಟ್ಟನು.

"ಮಳೆ ಕಡಿಮೆಯಾದಾಗ ಹೋಗುತ್ತೇನೆ."

ಒಳ್ಳೇ ಕೆಲಸ! ಇವಳು ಹೋಗುವವೇಳೆಗೆ ಸರಿಯಾಗಿ ಆ ನಟರಾಜ ಮೆಟ್ಟಲೇರಿ ಬಂದುಬಿಟ್ಟನೆಂದರೆ ಇನ್ನು ಈ ಊರಲ್ಲಿ ತಲೆಯೆತ್ತಿ ತಿರುಗಾಡಬೇಕಿಲ್ಲ.

"ಈಗ ಎಲ್ಲಾ ಕಡೆಯಲ್ಲೂ ಇರುವೆ ಜಾಸ್ತಿ ಇರುತ್ತದೆ."

ಅವನು ರೂಮಿನೊಳಗೆ ಹೋದನು. ಒಬ್ಬ ಮನುಷ್ಯನಿಗೆ ಇರುವೆಗಳ ಮಧ್ಯೆ ಮಲಗೆನ್ನುವುದು ಪಾಪ–ಅದೂ ಇಂಥ ಒಳ್ಳೆಯ ದಿವಸದಲ್ಲಿ ಪಾಪ ಮಾಡಿದವರುಂಟೇ! ಸ್ವಲ್ಪ ಡಿ. ಡಿ. ಟಿ. ತಂದು ಅಲ್ಲಿ ಸ್ಪ್ರೇ ಮಾಡಿದನು.

"ಇನ್ನು ಮಾತೆತ್ತಬೇಡ. ಬೆಳಕು ಹರಿಯುವ ವೇಳೆಗೆ ನೀನಿಲ್ಲಿ ಕಾಣಲಿರಬಾರದು. ಕಂಡರೆ ನನಗೇನಲ್ಲ, ನಿನಗೇ ಕಷ್ಟ. ಆ ಕೋಣೆಯಲ್ಲಿ ವಾಸವಾಗಿರುವವನು ನನ್ನಂತಲ್ಲ. ಇಲ್ಲಿಯದು ಅಲ್ಲಿ, ಅಲ್ಲಿಯದು ಇಲ್ಲಿ ಹೇಳಿಕೊಂಡು ನಡೆಯುವವನು. ನೀನು ಬಂದದ್ದು, ಹೋದದ್ದು ಯಾರಿಗೂ ತಿಳಿಯಬಾರದು."

ಅವನು ಹೋಗಿ ಮಲಗಿದನು. ಏನೇನು ಆಗುತ್ತೋ? ನಾಲ್ಕು ಗಂಟೆಯ ಬಸ್ಸಿನಲ್ಲಿ ತಾನು ಹೋಗಬೇಕು. ತನ್ನ ಚಾಪೆ ಹಾಸಿಕೊಂಡು ತನ್ನ ಒಗೆದ ಮುಂಡನ್ನುಟ್ಟು ಈ ಹುಡುಗಿ ಮಲಗಿದ್ದಾಳೆ. ಅದನ್ನು ನಟರಾಜನೇನಾದರೂ ಕಂಡನಾದರೆ ಭೂಕಂಪವೇ ಉಂಟಾಗುತ್ತೆ. ಮಲಗುವ ಮುಂಚೆ ಕಸ ಗುಡಿಸೋಣವೆಂದು ಅವನು ಬಂದೊಡನೆಯೇ ಪೊರಕೆ ತೆಗೆದುಕೊಳ್ಳಲು ಆ ಕೊಟ್ಟಿಗೆಗೆ ಹೋದರೆ? ದೇವರೇ, ಅವನಿಗೆ ಹಾಗೆಂದೂ ತೋರದಿರಲಿ.

ತನಗೆ ಬೇಕಾದರೆ ಅಪವಾದದಿಂದ ದೂರವಾಗಬಹುದು. ನಟರಾಜ ಕೇಳಿದರೆ ಹೇಳಿ ಬಿಡುವುದು, 'ಯಾರೋ ಗತಿಗೆಟ್ಟ ಹೆಣ್ಣು ದಾರಿ ತಪ್ಪಿ ಇಲ್ಲಿಗೆ ಬಂದಳು; ಅವಳಿಗೇನಾದರೂ ಆಪತ್ತುಂಟಾದರೋ ಎಂದು ಹೆದರಿ ಬಂದು ಮಲಗಿಕೋ ಎಂದು ಹೇಳಿದೆ. ನಿನ್ನ ಒಪ್ಪಿಗೆ ಇಲ್ಲದೆ ಯಾರಾದರೂ ಇಲ್ಲಿ ಮಲಗುವುದು ಹೇಗೆ? ಅವಳಲ್ಲಿ ಮಲಗಿರಲಿ, ಆಗದೇ?' ಎಂದು. 'ಛೆ, ಅದೆಲ್ಲಾ ಬೇಡ. ಅದು ಒಳ್ಳೆಯದಕ್ಕಿಂತ ಹೆಚ್ಚಾಗಿ ಕೆಡುಕನ್ನುಂಟುಮಾಡುತ್ತೆ. ಅವನಿಂದ ಆ ಹೆಣ್ಣು ಹಾಳಾಗುತ್ತಾಳೆ.' ಎಂದುಕೊಂಡ ಪಪ್ಪನ್.

ಮನೆಗೆ ಹೋಗುವ ವಿಷಯ ಜ್ಞಾಪಕ ಬಂತು. ತಾಯಿಯನ್ನು ಜ್ಞಾಪಕ ಮಾಡಿಕೊಂಡನು. ಸೌದಾಮಿನಿಯ ವಿಚಾರವಾಗಿಯೂ ನೆನಪು ಬಂತು. ಮಕ್ಕಳನ್ನು ಪ್ರೀತಿಯಿಂದ ಕಾಣದ ತಾಯಿಯರುಂಟೆ. ಹೆಂಗಸೊಂದು ಪಶು, ಅವಳ ಚಿಕ್ಕ ಪ್ರಾಯದ ಗಂಡನೂ ಪಶುವೇ. ಆ ಮೃಗಗಳ ನಡುವಿನಿಂದ ತಪ್ಪಿಸಿಕೊಂಡು ಬಂದ ಇವಳು ಮತ್ತೆ ಅಲ್ಲಿಗೇ ಹಿಂತಿರುಗುವಂತೆ ನಾನು ಒತ್ತಾಯ ಮಾಡುತ್ತಿದ್ದೇನಲ್ಲ! ಏನೇ ಆದರೂ ಈ ಪಟ್ಟಣದಲ್ಲಿ ಅಲೆದಾಡಿ ಕೆಲ ಜನರ ಕ್ರೂರ ನೋಟಕ್ಕೆ ಸಿಕ್ಕು ದೇಹ ಮಾರಿಕೊಂಡು ದುಸ್ಸಂತತಿಗೆ ಜನನವಿತ್ತು, ಅಂಟು ವ್ಯಾಧಿಗಳನ್ನು ಉಡುಗೊರೆಯಾಗಿ ಪಡೆದು, ನೊಂದು, ಉಪವಾಸದಿಂದ ಸೊರಗಿ, ದಯೆ ಯಾಚಿಸಿ, ದೂಷಿಸಲ್ಪಟ್ಟು, ಏಟು ತಿಂದು, ಕಂಡವರೆಲ್ಲರ ನಿಂದೆಗೆ ಗುರಿಯಾಗಿ ನರಕಯಾತನೆ ಪಡುವುದಕ್ಕಿಂತ ನಿರ್ದಯಳಾದ ಹೆತ್ತು ಬೆಳೆಸಿದ ತಾಯಿಯ ಬಳಿ ಹೋಗುವುದೇ ಒಳ್ಳೆಯದು. ಯಾವಾಗಲಾದರೂ, ಅಮ್ಮನಿಗೆ ದಯೆ, ವಾತ್ಸಲ್ಯಗಳು ತೋರದಿರುವುದಿಲ್ಲ. ತನ್ನ ಮಾತು ಕೇಳಿ ಅವಳು ಮನೆಗೆ ಹಿಂತಿರುಗಿದಳೆಂದರೆ ನರಕ ರೂಪದಿಂದ ಒಬ್ಬ ಸ್ತ್ರೀಯನ್ನು ರಕ್ಷಿಸಿದೆನಲ್ಲಾ ಎಂದು ಸಮಾಧಾನಪಡಬಹುದು.

ನಟರಾಜ ಬಂದನೆಂದು ತೋರುತ್ತೆ ದೇವರೇ! ಅವಳು ಅವನ ಕಣ್ಣಿಗೆ ಕಾಣದಿರಲಿ.

ಬೆಳಗಿನ ಜಾವ ಬಸ್‌ಸ್ಟ್ಯಾಂಡ್‌ಗೆ ಹೋಗುವ ಮುಂಚೆ ಪಪ್ಪನ್ ಕೊಟ್ಟಿಗೆಯ ಬಾಗಿಲ ಬಳಿ ಹೋಗಿ ನೋಡಿದನು. ಬೀದಿ ದೀಪದ ಪ್ರಕಾಶ ಈಗ ಹೆಚ್ಚಿತ್ತು. ಅವಳು ಒಡನೆ ಎದ್ದು ಬಾಗಿಲು ಬಳಿ ಬಂದಳು. "ಸಾರ್, ನಿಮ್ಮನ್ನು ನೆನೆಸಿಕೊಂಡೇ ಮಲಗಿದ್ದೆ. ಈಗ ಇಲ್ಲಿ ಇರುವೆ ಗಳೇ ಇಲ್ಲ!"

ತಾಯಿಯ ತಿಥಿ ಮಾಡಲು ಹೋಗುತ್ತಿರುವೆ ನೆಂಬುದು ಅವನ ಜ್ಞಾಪಕಕ್ಕೆ ಬಂತು.

"ನೀನೇನೂ ನನ್ನನ್ನು ನೆನೆಸಿಕೊಳ್ಳಬೇಕಿಲ್ಲ. ನಿನ್ನ ಹೆತ್ತ ತಾಯಿ ನಿನ್ನನ್ನು ಕಾಣದೆ ನೀರೂ ಕುಡಿಯದೇ ಅತ್ತಿತ್ತ ಅಲ್ಲೆಲ್ಲಾ ಹುಡುಕುತ್ತಿರ ಬೇಕು. ಬೇಗ ಅಲ್ಲಿಗೆ ವಾಪಸ್ ಹೋಗು. ನನ್ನ ಮೇಲೆ ನಿನಗೇನಾದರೂ ಗೌರವವೇರ್ಪಟ್ಟಿದ್ದೇ ಆದರೆ ದೇವರ ಸಾಕ್ಷಿಯಾಗಿ ನೀನು ಬೆಳಗಾಗುವ ಮೊದಲು ಇಲ್ಲಿಂದ ಹೋಗಬೇಕು. ಮೊದಲ-ನೆಯ ದೋಣಿಯಲ್ಲೇ ಹೋಗಿಬಿಡು ಎಂದವನು ಬಗ್ಗಿ, ಅವಳ ಕಿವಿಯ ಬಳಿ ಮೆಲ್ಲನೆ ಹೇಳಿದನು. ಎಲ್ಲಾದರೂ ನಟರಾಜ ಕೇಳಿಸಿ ಕೊಂಡರೆ? ಅವಳು ಉತ್ತರ ಕೊಡುವ ಮುಂಚೆ ಅವನು ಹೊರಟುಹೋದನು.

ವಾರನೆಯ ದಿನ ಬೆಳಿಗ್ಗೆ ಹಿಂತಿರುಗಿದಾಗ ನಟರಾಜ ಮನೆಯಲ್ಲೇ ಇದ್ದನು. ಪಪ್ಪನ್ ಅವನ ಮುಖವನ್ನು ದಿಟ್ಟಿಸಿ ನೋಡಿದನು. ಪಪ್ಪನ್‌ಗೆ ನಗಬೇಕೆನ್ನಿಸಿತು. ಮುವ್ವತ್ತಾರು ಗಂಟೆಗಳ ಕಾಲ ಅನುಭವಿಸಿದ ಮನಸ್ಸಿನ ತೊಳಲಾಟ ಈಗ ಕಳೆದುಹೋದಂತೆನಿಸಿತು. ಹಾಗಾದರೆ ಸೌಮಿನಿ ತನ್ನ ನಿರ್ದೇಶನವನ್ನು ಅನುಸರಿಸಿದ್ದಾಳೆ.

ಎರಡು ವಾರ ಕಳೆದು ಒಂದು ದಿವಸ ಸೆಕೆಂಡ್ ಷೋಗೆಂದು ಹೋದಾಗ ಥಿಯೇಟರಿನ ಮುಂದೆ ಪಪ್ಪನ್ ಅವಳನ್ನು ಕಂಡನು. ಅವನಿಗೆ ನೋವಾಯಿತು. ಬೀದಿಗಿಳಿದು ಬಂದಿದ್ದಾಳೆ. ಅವನ ಮನಸ್ಸಿನ ಒಂದು ಮೂಲೆಯಲ್ಲಿ ಅವಳಿಗೆ ತೋರಿಸಿದ ದಯೆ, ವಾತ್ಸಲ್ಯಗಳಿನ್ನೂ ಇದ್ದುವು. ಟಿಕೆಟ್ ಕೊಳ್ಳಲು ಹೋದಾಗ ನಟರಾಜ ಕೇಳಿದ: "ಇದೇನು ಸಾರ್, ಎಂದೂ ಇಲ್ಲದ್ದು ಇಂದು ಸಿನಿಮಾಕ್ಕೆ ಬರಲು ನಿಶ್ಚಯಿಸಿದ್ದು?"

ಅವನೇನೂ ಮಾತನಾಡಲಿಲ್ಲ. ಟಿಕೆಟ್ ತೆಗೆದು ಕೊಂಡು ಒಳಗೆ ಹೋದಾಗ ಅವನ ವ್ಯಾಕುಲ ಹೆಚ್ಚಿತು. ಥಿಯೇಟರ್‌ನಲ್ಲಿ ಕುಳಿತುಕೊಳ್ಳಲಾಗದೆ ಅವನು ತನ್ನ ಕೋಣೆಗೆ ಹಿಂತಿರುಗಿದನು. ಒಳ ಹೊಕ್ಕು ಬಾಗಿಲಿಕ್ಕಿ ಮಲಗಿದನು.

ನಟರಾಜನ ರೂಮು ತೆರೆಯುವ ಶಬ್ದ ಕೇಳಿತು. ಅನಂತರ, "ಆ ರೂಮಿನಲ್ಲಿರುವ ಮನುಷ್ಯ ಇನ್ನೂ ಸಿನಿಮಾ ನೋಡುತ್ತಾ ಇದ್ದಾನೆ."— ಆ ಧ್ವನಿ ನಟರಾಜನದು.

"ಆತನನ್ನು ಇಲ್ಲಿಂದ ಕಳಿಸಿಬಿಟ್ಟರೆ ನಾನಿಲ್ಲೇ ಇದ್ದು ನಿಮಗೆ ಅಡಿಗೆ ಮಾಡಿ ಹಾಕುತ್ತೇನೆ."

"ನಾನೇನೂ ಕಳಿಸಬೇಕಿಲ್ಲ ತಾನೇ ಹೋಗಿ ಬಿಡುತ್ತಾನೆ. ನೀನು ಇಲ್ಲಿಗೆ ಬರುವುದನ್ನು ಆತ ನಾಲ್ಕು ದಿವಸ ಕಂಡರೆ ಸಾಕು."

"ಹಾಗಾದರೆ ನಾಳೆ ಬೆಳಿಗ್ಗೆಯೇ ಆತನು ನನ್ನನ್ನು ಕಾಣಲಿ. ಆತನು ಹೋದ ನಂತರವೇ ನಾವಿಲ್ಲಿ ಅಡಿಗೆ ಮಾಡಬಹುದಲ್ಲವೇ?"

"...ಹೌದು. ಆದರೆ ನಾಳೆಯೇ ಬೇಡ. ಸಮಯ ಬಂದಾಗ ನಾನೇ ಹೇಳುತ್ತೇನೆ."

"ಆತನು ಹೇಳಿದ್ದನ್ನು ಕೇಳಿ, ನಾನು ಆ ದಿನ ಬೆಳಿಗ್ಗೆಯೇ ಊರಿಗೆ ಹೋಗಿಬಿಟ್ಟಿದ್ದರೆ ನನಗೀ ಭಾಗ್ಯ ಒದಗುತ್ತಿತ್ತೆ!" ✡



**ನಿಸರ್ಗದ ಮೇಲೆ ನಾವು ಮನುಷ್ಯರು ವಿಜಯ ಸಾಧಿಸಿದೆವೆಂದು ಹೆಮ್ಮೆಪಡು ವುದು ಬೇಡ. ಇಂಥ ಪ್ರತಿಯೊಂದು ವಿಜಯದ ಸೇಡನ್ನೂ ನಿಸರ್ಗ ತೀರಿಸಿಕೊಳ್ಳುವುದು ಖಂಡಿತ.**

**—ಫ್ರೆಡ್ರಿಕ್ ಎಂಜೆಲ್ಸ್**

ಅಮೇರಿಕದ ನೆನಪಿನ ತಜ್ಞರ
ಈ ಉಪಾಯಗಳು
ತೀರ ಸರಳವಾಗಿವೆ

# ಸ್ಮರಣಶಕ್ತಿಯನ್ನು ಹೇಗೆ ಹೆಚ್ಚಿಸಿಕೊಳ್ಳಬೇಕು?

● ರಾಧಾಕೃಷ್ಣ ರಾವ್

ಮಾನವ ಕುಲದ ಇತಿಹಾಸದಲ್ಲಿ ಇಂದಿನ ವರೆಗೆ ಸಂಗ್ರಹವಾದ ಜ್ಞಾನದಲ್ಲಿ ಅರ್ಧಕ್ಕಿಂತ ಹೆಚ್ಚು ಕಳೆದ ನಾಲ್ಕು ವರ್ಷಗಳಲ್ಲಿ ಸಂಪಾದಿಸಲ್ಪಟ್ಟಿತು ಎಂದು ಅಂದಾಜು ಮಾಡಲ್ಪಟ್ಟಿದೆ. ಮತ್ತು ಈ ಜ್ಞಾನದಲ್ಲಿ ಬಹಳ ಭಾಗ ಭೌತಿಕ ಜ್ಞಾನವಾಗಿದ್ದು ನಮ್ಮ ನಿತ್ಯಜೀವನಕ್ಕೆ ಒಂದಲ್ಲ ಒಂದು ಬಗೆಯಿಂದ ಸಂಬಂಧಿಸಿದ್ದಾಗಿರುವುದರಿಂದ ಜ್ಞಾನಸಂಗ್ರಹ ಇಂದು ಸಾಮಾನ್ಯ ಮನುಷ್ಯನಿಗೆ ಕೂಡ ಹಿಂದೆಂದಿಗಿಂತ ಅವಶ್ಯವಾಗಿದೆ. ಇವರಲ್ಲಿ ಬಹುಭಾಗ ಪುಸ್ತಕಗಳ ಮೂಲಕ ಬರಬೇಕಾದ್ದು. ನೀವು ವಿದ್ಯಾರ್ಥಿಗಳಾಗಿರಿ, ವ್ಯವಹಾರಸ್ಥರಾಗಿರಿ, ಯಾರೇ ಆಗಿರಿ, ಓದುವುದು, ಓದಿದ್ದರಲ್ಲಿ ಮುಖ್ಯಾಂಶಗಳನ್ನು ನೆನಪಿಡುವುದು, ಬೇಕಾದಾಗ ಅದನ್ನು ನೆನೆದುಕೊಳ್ಳುವುದು–ಇವು ಮುಖ್ಯ. ಆದರೆ ನೆನಪುಳಿಯದಿರುವುದೇ ಇಂದಿನ ಕಾಲದ ಮಹಾ ಸಮಸ್ಯೆಯಾಗಿದೆ.

ನಮ್ಮ ಪೂರ್ವಜರ ನೆನಪಿನ ಶಕ್ತಿಯ ಅದ್ಭುತಗಳನ್ನು ನಾವು ಈರ್ಷೆಯಿಂದ ನೆನೆದುಕೊಳ್ಳುತ್ತೇವೆ. ನಮ್ಮ ಕಾಲದ ಮರೆಗುಳಿತನವನ್ನು ವಿಷಾದದಿಂದ ಹೇಳಿಕೊಳ್ಳುತ್ತೇವೆ. ಆದರೆ ನಮ್ಮ ಕಾಲದ 'ಪತನ'ಕ್ಕಾಗಿ ನಾವು ಅಷ್ಟು ತಿರಸ್ಕಾರಪಡಬೇಕಾಗಿಲ್ಲ. ಹಿಂದಿನ ಕಾಲದಲ್ಲಿ ನೆನಪಿಡತಕ್ಕ ವಿಷಯಗಳು ಕಡಿಮೆಯಾಗಿದ್ದವು; ಇಂದಿನ ಕಾಲದಲ್ಲಿ ಅಪ್ರತಿಭಗೊಳಿಸುವಷ್ಟು ವೈವಿಧ್ಯವುಳ್ಳ ಅನೇಕಾನೇಕ ವಿಷಯಗಳನ್ನು ನಾವು ನೆನಪಿಟ್ಟುಕೊಳ್ಳಬೇಕಾಗಿದೆ.

ಓದುವುದು, ನೆನಪಿಟ್ಟುಕೊಳ್ಳುವುದು–ಈ ಸಮಸ್ಯೆಯಲ್ಲಿ ಮುಖ್ಯವಾಗಿ ಎರಡು ಅಂಶಗಳು ಇವೆ. ಒಂದು, ಮನಸ್ಸನ್ನು ಏಕಾಗ್ರಗೊಳಿಸುವುದು. ಏಕಾಗ್ರತೆಯಿಲ್ಲದೆ ಯಾವ ವಿಚಾರವೂ ಎಷ್ಟು ಸಲ ಓದಿದರೂ ನಮ್ಮ ಬುರುಡೆಯೊಳಗೆ ಇಳಿಯುಲೇ ಆರದು. ಎರಡನೆಯದು, ಓದಿದ್ದನ್ನು ಮನಸ್ಸಿನಲ್ಲಿ ಉಳಿಸಿಕೊಳ್ಳುವುದು. ಈ ಎರಡು ವಿಷಯಗಳಲ್ಲಿ ಕೆಲವೊಂದು ಸೂಚನೆಗಳನ್ನು ಇಲ್ಲಿ ಕೊಡಲಾಗುತ್ತಿದೆ. ಅಮೇರಿಕದಲ್ಲಿ ಈಚೆಗೆ ಪ್ರಮುಖ ನೆನಪಿನ ತಜ್ಞರೆನಿಸಿದ ಹರ್ಬರ್ಟ್ ಪೋಲನ್ನರೆಂಬವರು ಯೋಜಿಸಿದ ಕ್ರಮವನ್ನನುಸರಿಸಿ ಈ ಲೇಖನವನ್ನು ಅಣಿಗೊಳಿಸಲಾಗಿದೆ.

## ೧ ಏಕಾಗ್ರತೆಯನ್ನು ಹೇಗೆ ಸಾಧಿಸಬೇಕು ?

ಇಂದಿನ ಗೌಜಿ, ಗಲಾಟೆ, ಮಾನಸಿಕ ವಿಕ್ಷೇಪ

ಗಳಿಂದ ತುಂಬಿದ ಯುಗದಲ್ಲಿ ಏಕಾಗ್ರತೆ ಹಿಂದೆಗಿಂತಲೂ ದುರ್ಲಭವಾದ ಗುಣವಾಗಿದೆ. ಆದರೂ ವಿಷಯಗಳನ್ನು ಗ್ರಹಿಸುವುದಕ್ಕೂ ವಿಚಾರಗಳನ್ನು ಕ್ರಮವಾಗಿ ಸಂಘಟಿಸುವುದಕ್ಕೂ ಏಕಾಗ್ರತೆ ಹೊರತು ಮಾರ್ಗವಿಲ್ಲ.

ಏಕಾಗ್ರತೆ ಕೆಲವರಿಗೆ ಸಹಜಯೋಗ್ಯತೆಯಾಗಿ ಬಂದಿರುತ್ತದೆ ಎಂದೊಪ್ಪಬಹುದು. ಆದರೆ ಬಹಳ ಮಟ್ಟಿಗೆ ಅದು ತರಬೇತಿ, ಸಾಧನೆಯ ವಿಷಯವೂ ಹೌದು. ಏಕಾಗ್ರತೆಯಿಂದ ಸದ್ಯಕ್ಕೆ ನಮ್ಮ ಮುಂದಿರುವ ವಿಷಯವನ್ನು ಅಭ್ಯಸಿಸಲು ಅನುಕೂಲವಾಗುತ್ತದೆಂಬುದೊಂದು ಪ್ರಯೋಜನವಾದರೆ, ಪತ್ತು ಕಡೆಗೆ ಸೆಳೆದು ಮನಸ್ಸನ್ನು ವ್ಯಸ್ತಗೊಳಿಸುವ ಬಾಹ್ಯ ಆಘಾತಗಳಿಂದ ಮುಕ್ತವಾಗುವುದು ಇನ್ನೊಂದು ಲಾಭ. ಯಾವುದೊಂದು ವಿಶಿಷ್ಟ ಓದು ಅಥವಾ ಅಧ್ಯಯನದ ಸಲುವಾಗಿ ಅಲ್ಲದೆ, ಕೇವಲ 'ಶೂನ್ಯ' ಏಕಾಗ್ರತೆಯನ್ನೇ ಕೆಲ ನಿಮಿಷಗಳ ವರೆಗೆ ಸಾಧಿಸಿದರೂ ಮನಸ್ಸು ರಾಶಿಬಿದ್ದ ಆಯಾಸದಿಂದ ಮುಕ್ತವಾಗಿ ತಾಜಾ ಆಗಬಲ್ಲದೆಂದು ಅನುಭವಕ್ಕೆ ಬಂದಿದೆ.

ಏಕಾಗ್ರತೆಯ ತಾಲೀಮಿಗಾಗಿ ನೀವು ಯಾವುದೇ ಸ್ಥಾವರ ಪದಾರ್ಥವನ್ನು–ಒಂದು ಲೇಖನಿಯನ್ನೋ, ಖಾಲಿ ಪುಸ್ತಕವನ್ನೋ ಒಂದು ಕಟ್ಟಿಗೆಯ ಚೂರನ್ನೋ—ಆರಿಸಬಹುದು.

ಆ ಪದಾರ್ಥವನ್ನು ಎಷ್ಟು ಸಾಧ್ಯವೋ ಅಷ್ಟು ಕಾಲ ನೋಡುತ್ತ ಇರಿ. ಆ ಮೇಲೆ ಕಣ್ಣುಗಳನ್ನು ಮುಚ್ಚಿಕೊಂಡು ಆ ಪದಾರ್ಥದ ಬಗ್ಗೆ ಯೋಚಿಸಿರಿ. ಉದಾಹರಣೆಗೆ ಒಂದು ಪೆನ್ಸಿಲು ನಿಮ್ಮ ಏಕಾಗ್ರತೆಗೆ ವಸ್ತುವಾಗಿದೆಯೆಂದು ಕೊಂಡರೆ, ಪೆನ್ಸಿಲು ಹೇಗೆ ಕಾಣುತ್ತದೆಯೆಂದು ಚಿತ್ತದಲ್ಲೇ ವಿಚಾರಿಸಿರಿ. ಅದರ ಬಣ್ಣವೇನು, ಅದು ಹಳೆಯದೋ ಹೊಸದೋ, ಅದನ್ನು ಮೊನೆ ಮಾಡುವುದು ಅವಶ್ಯವೋ ಇತ್ಯಾದಿ.

ಸ್ವಲ್ಪ ಹೊತ್ತಿನಲ್ಲಿಯೇ ನಿಮ್ಮ ಮನಸ್ಸು ಪೆನ್ಸಿಲೆಂಬ ಪದಾರ್ಥದ ವಿಚಾರದಿಂದ ಜಾರಿ, ಬೇರೆ—ಪೆನ್ಸಿಲಿನಿಂದ ಬರೆಯುವ ಎನ್ನಿ—ವಿಚಾರಕ್ಕೆ ಸರಿಯುವುದನ್ನು ನೀವು ಗಮನಿಸುವಿರಿ. ಆಗ ಆ ಯೋಜನೆ ಬಿಟ್ಟು ಕಣ್ಣು ತೆರೆಯಿರಿ.

ಆ ಮೇಲೆ ಅರ್ಧ ನಿಮಿಷ ವಿಶ್ರಾಂತಿ ತೆಗೆದುಕೊಂಡು ಮತ್ತೆ ಅದೇ ತಾಲೀಮನ್ನು ಪ್ರಾರಂಭಿಸಿರಿ. ಈ ಸಲ ಪೆನ್ಸಿಲನ್ನು ಬಿಟ್ಟು ಮತ್ತಾವುದಾದರೂ ಜಡಪದಾರ್ಥವನ್ನು ನಿಮ್ಮ ಏಕಾಗ್ರತೆಗೆ ಗುರಿಯಾಗಿ ಆರಿಸಿಕೊಳ್ಳುವುದೊಳಿತು.

ಪ್ರಾರಂಭದಲ್ಲೇ ಪೆನ್ಸಿಲಿನ ಮೇಲೆ ಎಂಟು ಸೆಕೆಂದುಗಳಿಗಿಂತ ಹೆಚ್ಚು ಕಾಲ ಮನಸ್ಸನ್ನು ನಿಲ್ಲಿಸಿದೆನೆಂದು ಹೇಳಿಕೊಳ್ಳುವವನು ಸುಳ್ಳನಾಗಿರಬೇಕೆಂದು ಪ್ರೋಲನ್ನರು ಹೇಳುತ್ತಾರೆ. ಆದರೆ ಒಂದು ವಾರದ ಸಾಧನೆಯ ನಂತರ ಒಂದು ಸಲಕ್ಕೆ ನಾಲ್ಕು ನಿಮಿಷಗಳ ವರೆಗೆ ನೀವು ಒಂದೇ ಪದಾರ್ಥದ ಬಗ್ಗೆ ಧ್ಯಾನಿಸಬಲ್ಲಿರಿ.

ಇದು ಕೈಗೂಡಿದ ನಂತರ ನೀವು ಇದೇ ಏಕಾಗ್ರತೆಯನ್ನು ವ್ಯಕ್ತಿಗಳ ಮೇಲೂ ಆ ಮೇಲೆ ಸನ್ನಿವೇಶಗಳ ಮೇಲೂ ಕೇಂದ್ರೀಕರಿಸಬಲ್ಲಿರಿ. ಬಸ್ಸಿನಲ್ಲೋ ರೈಲಿನಲ್ಲೋ ಈ ಪಾಠವನ್ನು ಪುನರಾವರ್ತಿಸುವುದು ತುಂಬ ಒಳ್ಳೇ ತರಬೇತಿಯನ್ನು ಕೊಡಬಲ್ಲದೆಂದು ಪ್ರೋಲನ್ ಸೂಚಿಸುತ್ತಾರೆ.

ಚೆಲ್ಲಾಪಿಲ್ಲಿಯಾಗುವ ಚಿತ್ತವನ್ನು ಸೆಳೆದು ಒಂದೆಡೆ ನಿಲ್ಲಿಸುವುದಕ್ಕೂ ಹದಿನೆಂಟು ಸೆಳೆತಗಳಿಂದ ಮನಸ್ಸಿಗುಂಟಾಗುವ ಶ್ರಮದಿಂದ ವಿಶ್ರಾಂತಿ ಪಡೆಯುವುದಕ್ಕೂ ಇದು ನೆರವಾಗುವುದರಿಂದ ಅದು ಅಧ್ಯಯನಕ್ಕೆ ಸಹಾಯ ಮಾಡುತ್ತದೆ.

## ೨ ಅಭ್ಯಾಸ ಮಾಡುವುದು ಮತ್ತು ಓದಿದ್ದನ್ನು ಜ್ಞಾಪಕದಲ್ಲಿಡುವುದು ಹೇಗೆ?

ಎಷ್ಟು ಓದುತ್ತೇನೆ, ಆದರೆ ಒಂದೇ ಒಂದು ವಿಷಯ ನೆನಪಿನಲ್ಲಿ ಉಳಿಯುವುದಿಲ್ಲ—ಇದು ಅನೇಕ ವಿದ್ಯಾರ್ಥಿಗಳ ಮತ್ತು ಇತರರ ದೂರು.

ಓದಿದ್ದು ನೆನಪಿನಲ್ಲಿ ಉಳಿಯದಿದ್ದರೆ ಏನೂ ಫಲವಿಲ್ಲ.

ಶಾಲೆಗಳಲ್ಲಿ ಮಕ್ಕಳಿಗೆ "ಕಲಿಯಿರಿ, ಅಭ್ಯಾಸ ಮಾಡಿರಿ" ಎಂದು ಹೇಳುತ್ತಾರೆ. ಆದರೆ ಯಾವ ರೀತಿಯಾಗಿ ಅಭ್ಯಾಸವನ್ನು ಹೇಗೆ ಮಾಡಬೇಕು? ಎಂದು ತಿಳಿಸಿಹೇಳುವ ಗೋಜಿಗೆ ಹೋಗುವುದಿಲ್ಲ. ಪರಿಣಾಮವಾಗಿ ಪರೀಕ್ಷೆಯ ಹೊತ್ತಿಗೆ ಓದಿಕೊಳ್ಳುವುದು, ಪರೀಕ್ಷೆಯಲ್ಲಿ ಉತ್ತರ ಬರೆಯುವ ಅಥವಾ ಹೇಳುವ ವರೆಗೆ ಹೇಗೆ ಹೇಗೋ ಅದನ್ನು ನೆನಪಿನಲ್ಲಿಟ್ಟಿರುವುದು, ಆ ಮೇಲೆ ಎಲ್ಲವೂ ಮರೆವಿನ ಗರ್ಭದಲ್ಲಿ ಇಳಿದುಹೋಗುವುದು ಇದು ಹೆಚ್ಚಿನ ವಿದ್ಯಾರ್ಥಿಗಳ ಅವಸ್ಥೆಯಾಗುತ್ತದೆ.

ಪ್ರೋಲನ್ನರು ಅಭ್ಯಾಸ ಮಾಡುವ ಬಗ್ಗೆ ಕೆಲ ಸಿದ್ಧ ಮಾರ್ಗಗಳನ್ನು ಹೇಳುತ್ತಾರೆ:

ಅಭ್ಯಾಸದಲ್ಲಿ ಅತ್ಯಂತ ಮಹತ್ವದ್ದು ಕಾಲ. ಎಲ್ಲರೂ ದಿನದ ಎಲ್ಲ ಸಮಯಗಳಲ್ಲಿಯೂ ಮನಸ್ಸನ್ನು ತೊಡಗಿಸಲು ಸಮರ್ಥರಾಗುವುದಿಲ್ಲವೆಂದು ಆಗಲೇ ವಿಜ್ಞಾನಿಗಳು ತೋರಿಸಿ ಕೊಟ್ಟಿದ್ದಾರೆ. ಪ್ರತಿಯೊಬ್ಬನಿಗೂ ಮನಸ್ಸಿನ ಚುರುಕುತನ, ಮಂಪತನಗಳ ಕಾಲಚಕ್ರ ಪ್ರೊಂದಿದೆ. ಕೆಲವರು ಬೆಳಗಿನ ನಾಲ್ಕು ಗಂಟೆ ಗೆದ್ದು ಅಭ್ಯಾಸ ಮಾಡುವುದು ಉತ್ತಮ ಎನ್ನುತ್ತಾರೆ. ಆಗ ವಾತಾವರಣ ಶಾಂತವಾಗಿರುವುದರಿಂದಲೂ ಗಾಳಿ ತಾಜಾ ಇರುವುದರಿಂದಲೂ ಅಭ್ಯಾಸಕ್ಕೆ ಯೋಗ್ಯ ಕಾಲ ಎನ್ನುವುದಾಗಲಿ, ಇದು ಎಲ್ಲರಿಗೂ ಅಷ್ಟೇ ಫಲಪ್ರದವಾಗುವುದು ಎನ್ನುವುದಾಗಲಿ ಅಷ್ಟು ಸಮರ್ಪಕವಲ್ಲ. ಬೆಳಗ್ಗೆ ಬೇಗ ಏಳುವವರಿಗೆ ಕತ್ತಲಾದ ಮೇಲೆ ಮನಸ್ಸನ್ನು ದಣಿಸುವುದು ಅಸಾಧ್ಯವಾಗುತ್ತದೆ. ಹಾಗೆಯೇ ಬೆಳಗ್ಗೆ ಎದ್ದ ಕೂಡಲೆ ಅನೇಕ ಕಪ್ ಕಾಫಿಯೋ ಚಹವೋ ಬೇಕಾದರೆ ಕೆಲಸ ಪ್ರಾರಂಭಿಸಲು ಉತ್ಸಾಹವೇ ಬರುವುದಿಲ್ಲ ಎನ್ನುವವರಿಗೆ ಅಭ್ಯಾಸಕ್ಕೆ ಹಗಲು ಅಷ್ಟು ಅನುಕೂಲವಲ್ಲ.

ಅಭ್ಯಾಸಕ್ಕೆ ತಮಗೆ ತಕ್ಕ ಸಮಯ ಯಾವುದೆಂಬ ಬಗ್ಗೆ ಕೊನೆಗೆ ಪ್ರತಿಯೊಬ್ಬರು ತಾವೇ ಪರೀಕ್ಷೆ ಮಾಡಿ ತಿಳಿದುಕೊಳ್ಳಬೇಕಷ್ಟೇ.

ನೀವು ಅಭ್ಯಾಸಕ್ಕೆ ಆರಿಸಿಕೊಳ್ಳುವ ಸ್ಥಳ ಮತ್ತು ಅದರ ಪರಿಸರವೂ ಮಹತ್ವದ್ದಾಗಿದೆ. ಯಾವ ಸ್ಥಳ ಎನ್ನುವುದು ಮುಖ್ಯವಲ್ಲ. ಅದು ನಿಮಗೆ ಒಗ್ಗುವುದೇ ಎನ್ನುವುದು ಮುಖ್ಯ. ನಿಮಗೆ ಇಷ್ಟವಾದರೆ ಮಲಗುವ ಮನೆಯಲ್ಲೇ ಅಭ್ಯಾಸ ಮಾಡಬಹುದು. ಸೋಫಾ, ಕುರ್ಚಿ ಯಾವುದು ಇಷ್ಟವೋ ಅದನ್ನು ಆರಿಸಿಕೊಳ್ಳಬಹುದು. ಮುಖ್ಯವಾಗಿ ನಿಮಗೆ ಆ ಸ್ಥಳ, ಆ ಆಸನ ನೆಮ್ಮದಿ ಎನಿಸಿರಬೇಕು. ಆದರೆ ಒಮ್ಮೆ

ಒಂದು ಸ್ಥಳವನ್ನು ಆರಿಸಿಕೊಂಡ ಮೇಲೆ ಯಾವಾಗಲೂ ಅದೇ ಸ್ಥಳದಲ್ಲಿ ಕುಳಿತು ಓದು ಬರಹ ಪ್ರಾರಂಭಿಸಬೇಕು. ನಿಶ್ಚಿತ ಸ್ಥಳದಲ್ಲೇ ಅಭ್ಯಾಸ ಮಾಡುವುದರಿಂದ ಆ ಸ್ಥಳಕ್ಕೊಂದು ಮಹಿಮೆ ಪ್ರಾಪ್ತವಾಗುತ್ತದೆ. ಏಕೆಂದರೆ ಅಲ್ಲಿ ಬಂದೊಡನೆ ಮತ್ತು ಆ ಆಸನದಲ್ಲಿ ಕುಳಿತೊಡನೆ ನಿಮ್ಮ ಮನಸ್ಸು ಆ ಕೆಲಸಕ್ಕೆ ಅನುಕೂಲ ಭಾವ ವನ್ನು ತಂತಾನೆ ತಾಳುತ್ತದೆ. ಈ ಸ್ಥಿತಿಯಲ್ಲಿ ನಿಮ್ಮ ಬುದ್ಧಿ ಹೆಚ್ಚು ಚುರುಕಾಗುವುದರಿಂದ ಓದಿದ್ದು ಹೆಚ್ಚು ಗ್ರಹಿಸಲ್ಪಡುವುದು; ವಿಚಾರಕ್ಕೆ ಅದು ಪ್ರೋತ್ಸಾಹಕವಾಗುವುದು.

ಅಭ್ಯಾಸದ ಸ್ಥಳ ನಿಶ್ಶಬ್ದವಾಗಿರಬೇಕೆ? ಈ ಬಗ್ಗೆಯೂ ಎಲ್ಲರಿಗೂ ಒಂದೇ ನಿಯಮ ಅನ್ವಯಿಸುವುದಿಲ್ಲ. ಕೆಲವರಿಗೆ ಪೂರ್ಣ ನಿಶ್ಶಬ್ದತೆ ಸಹನವೇ ಆಗುವುದಿಲ್ಲ. ಉದಾಹರಣೆಗೆ ಪತ್ರಿಕೋದ್ಯೋಗಿಗಳಿಗೆ ಕಚೇರಿಯಲ್ಲಿ ಟೆಲಿಫೋನು ಗಳ ನಿರಂತರ ಬಾರಿಸುವಿಕೆ, ಟೆಲಿಪ್ರಿಂಟರುಗಳ ಕಿಲಿಕಿಲಿ, ಯಂತ್ರಗಳ ಕಡಕಡಗಳ ನಡುವೆ ಬರೆದು ಅಭ್ಯಾಸವಾಗಿ ಹೋಗಿರುವುದರಿಂದ ಮನೆಯ ಪ್ರಶಾಂತ ವಾತಾವರಣದಲ್ಲಿ ಮನ-ಸ್ಸನ್ನು ಏಕಾಗ್ರಗೊಳಿಸುವುದೇ ಕಷ್ಟವಾಗುತ್ತದೆ! ಸಂಪೂರ್ಣ ನಿಶ್ಶಬ್ದತೆ ಒಗ್ಗದವರು ರೇಡಿಯೋ ಅಥವಾ ಮತ್ತಾವ ಲಘುವಾಗಿ ಸಪ್ಪಳ ಮಾಡುವ ಸಲಕರಣೆಯನ್ನು ಉಪಯೋಗಿಸಬಹುದು. ಆದರೆ ಚಲಿಸುವ ದೃಶ್ಯಗಳ ಸಮ್ಮುಖದಲ್ಲಿ ಓದಲು ಬೇಕಾದ ಏಕಾಗ್ರತೆ ಕಷ್ಟಸಾಧ್ಯವಾಗು ತ್ತದೆ.

ಪಡೆದುಕೊಂಡ ಜ್ಞಾನವನ್ನು ಮನಸ್ಸಿನಲ್ಲಿ ನಿಚಿತಪಡಿಸಲು ಒಬ್ಬೊಬ್ಬರಿಗೆ ಒಂದೊಂದು ವಿಧಾನ ಸಹಾಯಕವಾಗುತ್ತದೆ. ಓದಿದ್ದರ ಸಾರಾಂಶವನ್ನು ಬರೆದು ತೆಗೆಯುವುದು ಒಂದು ಉತ್ತಮ ಉಪಾಯ. ಏಕೆಂದರೆ ಓದುವಾಗ ತಿಳಿದುಹೋಯಿತು ಅನಿಸಬಹುದು; ಅದನ್ನೇ ಬರೆಯಹೋದರೆ ಆಗ ತನ್ನ ತಿಳಿವಳಿಕೆಯಲ್ಲಿರುವ ಕೊರತೆಗಳ ಪ್ರತೀತಿ ಕೂಡಲೇ ಆಗುತ್ತದೆ ಮತ್ತು ಈ ಕೊರತೆಗಳನ್ನು ಕೂಡಲೆ ತುಂಬಿ ಕೊಳ್ಳಬಹುದಾಗಿದೆ. ಬೇರೆ ಕೆಲ ಪ್ರಜ್ಞಾತ್ಮರಿಗೆ ಕೇವಲ ಮನಸ್ಸಿನಲ್ಲಿ ಓದಿಕೊಂಡರೆ ಸಾಲುತ್ತದೆ. ಕೆಲವರಿಗೆ ಗಟ್ಟಿಯಾಗಿ ಓದಿದರೆ ಹಿತ. ಇತರರಿಗೆ ಇನ್ನೊಬ್ಬರ ಮುಂದೆ ಅವರ ವಿವರಗಳನ್ನು ಹೇಳುವುದು ನೆನಪಿಗೆ ಸಹಾಯಮಾಡುವು-ದುಂಟು. ಪ್ರತಿಯೊಬ್ಬರೂ ತಮ್ಮ ಪ್ರಕೃತಿ ಯನ್ನು ತಿಳಿದುಕೊಂಡು ಕಾರ್ಯಪ್ರವೃತ್ತರಾಗ ಬೇಕು.

ಒಂದು ಸಲ ಕುಳಿತರೆ ಎಷ್ಟು ಹೊತ್ತು ಅಭ್ಯಾಸಮಾಡಬಹುದು? ವೈಯಕ್ತಿಕ ಭೇದ ಗಳು ಇರಬಹುದಾದರೂ ಪ್ರಾಯಪ್ರಬುದ್ಧರ ಮಟ್ಟಿಗೆ ಹೇಳುವುದಾದರೆ, ದೀರ್ಘಕಾಲ ಅಭ್ಯಾಸ ಮಾಡಿದರೆ ಹೆಚ್ಚು ಅಭ್ಯಾಸ ಮಾಡಿದಂತಾಗುತ್ತ ದೆಂಬುದು ಶುದ್ಧ ಭ್ರಾಂತಿ. ಸಾಮಾನ್ಯ ಮನು ಷ್ಯರು ದಿನಕ್ಕೆ ಮೂರು ನಾಲ್ಕು ಗಂಟೆಗಳಿಗಿಂತ ಹೆಚ್ಚು ಅಭ್ಯಾಸ ಮಾಡಲಾರರು. ಅದಕ್ಕೂ ಮಧ್ಯೆ ಮಧ್ಯೆ ಅಲ್ಪಾವಧಿ ವಿಶ್ರಾಂತಿ ಬೇಕಾಗ ಬಹುದು. ಇದಕ್ಕಿಂತ ಹೆಚ್ಚುಕಾಲ ಮಾಡಿದ ಅಭ್ಯಾಸದಲ್ಲಿ ಗ್ರಹಣಕ್ಕೆ ಬಾರದೆ ಸೋರಿ ಹೋಗುವ ಜ್ಞಾನದ ಅಂಶ ಹೆಚ್ಚುತ್ತ ಹೋಗು ತ್ತದೆ. ಕಟ್ಟಕಡೆಗೆ ಓದಿದ್ದೇನೂ ನೆನಪಿನಲ್ಲಿ ಉಳಿಯುವುದೇ ಇಲ್ಲ.

ಇನ್ನೊಂದು ಆಶ್ಚರ್ಯಕರ ಸಂಗತಿಯೆಂದರೆ ವೇಗವಾಗಿ ಓದುವುದರಿಂದ ಗ್ರಹಣ ಮತ್ತು ಧಾರಣದ ಅಂಶ ಹೆಚ್ಚಾಗುತ್ತದೆ. ಆದ್ದರಿಂದ ವೇಗವಾಗಿ ಓದುವ ಅಭ್ಯಾಸ ಮಾಡುವುದು ಉತ್ತಮ.

ಆದರೆ ಪೋಲಸ್ನರು ಇಷ್ಟೆಲ್ಲ ವಿಧಿಗಳೊಡನೆ ಒಂದು ನಿಷೇಧವನ್ನೂ ಹೇಳುತ್ತಾರೆ: ಓದಿದ್ದು ನೆನಪಿರಬೇಕೆಂಬ ಬಯಕೆಯಿದ್ದರೆ ಹಾಸಿಗೆಯಲ್ಲಿ ಮಲಗಿ, ಅದೂ ನಿದ್ದೆ ಬರುವ ವೇಳೆಗೆ, ಓದಬೇಡಿ. ಹಾಸಿಗೆಯಲ್ಲಿ ಓದುವುದು ಮನಸ್ಸನ್ನು ಸಡಿಲು ಗೊಳಿಸಿ ನಿದ್ದೆಗೆ ನೆರವಾದೀತೇ ಹೊರತು ಗ್ರಹಣಕ್ಕೂ ಧಾರಣಕ್ಕೂ ಅಲ್ಲ. ✡

ತುರ್ಕಸ್ತಾನದ ಕಳ್ಳಕದೀಮನನ್ನು ಹಿಡಿಯಲು
ಅಮೇರಿಕನ್ ಬರಬೇಕಾಯಿತು

# ಟರ್ಕಿಷ್ ಕ್ರೈಸಿಸ್

ನಾಗರಾಜ

ತುರ್ಕಿಯ ಮಹಾನಗರ ಇಸ್ತಾಂಬುಲ್‌ನ ವಿಮಾನ ನಿಲ್ದಾಣಕ್ಕೆ ಲಂಡನ್‌ನಿಂದ BOAC ವಿಮಾನ ಬಂದು ನಿಂತಿತು. ಅದರಿಂದ ಇಳಿದ ಅನೇಕ ಪ್ರಯಾಣಿಕರಲ್ಲಿ ಒಬ್ಬ ಅಮೆರಿಕನ್ನನೂ ಇದ್ದ. ಅವನ ಪಾಸ್‌ಪೋರ್ಟಿನಲ್ಲಿ ತುರ್ಕಸ್ತಾನ ಕೊಟ್ಟಿದ್ದ ಪ್ರವಾಸಿಗರ ವೀಸಾ ಇತ್ತು.

ವಿಮಾನ ನಿಲ್ದಾಣದ ಟ್ಯಾಕ್ಸಿ ಸ್ಟ್ಯಾಂಡಿನಿಂದ ಒಂದು ಟ್ಯಾಕ್ಸಿ ತೆಗೆದುಕೊಂಡು ಈ ವ್ಯಕ್ತಿ ನಗರದ ಮಧ್ಯಭಾಗದಲ್ಲಿದ್ದ ಒಂದು ದೊಡ್ಡ ಹೋಟೆಲಿಗೆ ಹೋಗಿ, ಅಲ್ಲಿ ತಾತ್ಕಾಲಿಕವಾಗಿ ಒಂದು ಕೋಣೆಯನ್ನು ಬಾಡಿಗೆಗೆ ಹಿಡಿದ.

ಆ ದೇಶದಲ್ಲಿ ಕಾಲಿಟ್ಟಂದಿನಿಂದ ಈತ ತನ್ನನ್ನು ಯಾರಾದರೂ ವಿಶೇಷವಾಗಿ ಗಮನಿಸುತ್ತಿದ್ದಾರೆಯೋ? ಅಥವಾ ಹಿಂಬಾಲಿಸುತ್ತಿದ್ದಾರೆಯೋ? ಎಂದು ಬಹಳ ಎಚ್ಚರಿಕೆಯಿಂದ ನೋಡುತ್ತಿದ್ದಂತಿತ್ತು.

ರಾತ್ರಿ ೯ ಘಂಟೆಯ ವೇಳೆಗೆ ಹೋಟೆಲಿನಿಂದ ಹೊರಬಿದ್ದ ವ್ಯಕ್ತಿ ತನ್ನನ್ನು ಯಾರೂ ಗಮನಿಸುತ್ತಿಲ್ಲವೆಂದು ಖಚಿತಪಡಿಸಿಕೊಂಡು ಹೊರಗೆ ಸ್ವಲ್ಪ ತಿರುಗಾಡಿ ಬೀದಿಯ ಕೊನೆಯಲ್ಲಿದ್ದ ಒಂದು ಸಣ್ಣ ಅಂಗಡಿಗೆ ಬಂದು ನಿಂತ. ಅಲ್ಲಿದ್ದ ಗಿರಾಕಿಯೊಬ್ಬ ತನಗೆ ಬೇಕಾದುದನ್ನು ಕೊಂಡು ಹೊರಟಮೇಲೆ ಆತ ಅಂಗಡಿಕಾರನನ್ನು ಕುರಿತು, "ವೈಸ್‌ರಾಯ್ ಸಿಗರೇಟು ಸಿಕ್ಕುತ್ತದೆಯೇ?" ಎಂದು ಕೇಳಿದ. ಅಂಗಡಿಕಾರ ಇದನ್ನು ಕೇಳಿ ತಲೆಯೆತ್ತಿ ಇವನನ್ನು ಪರೀಕ್ಷಿಸುವಂತೆ ನೋಡಿ, "ವೈಸ್‌ರಾಯ್ ನಮ್ಮಲ್ಲಿ ಸಿಗುವುದಿಲ್ಲ. ಬೇರೆ ಯಾವುದಾದರೂ ಬೇಕೆ?" ಎಂದ.

"ಇಲ್ಲ. ನನಗೆ ವೈಸ್‌ರಾಯ್ ಬ್ರ್ಯಾಂಡ್ ಬಿಟ್ಟು ಬೇರೆ ಯಾವುದೂ ರುಚಿಸುವುದಿಲ್ಲ."

"ಹಾಗಾದರೆ ಒಳಗೆ ಬನ್ನಿ."

ಅಂಗಡಿಕಾರ ಒಳಗಿನಿಂದ ತನ್ನ ಕಡೆಯೊಬ್ಬನನ್ನು ಕರೆದು, ಕೌಂಟರಿನ ಮೇಲೆ ಕೂರಿಸಿ, ಅನಂತರ ಗಿರಾಕಿಯೊಡನೆ ಒಳಗೆ ಹೋದ. ಅಲ್ಲಿನ ಕೋಣೆ ಸುಸಜ್ಜಿತವಾಗಿತ್ತು. ಅಂಗಡಿಕಾರ ಬಾಗಿಲನ್ನು ಮುಚ್ಚಿ, ಆಗಂತುಕನ ಕಡೆಗೆ ತಿರುಗಿ, "ಹಲೋ ಮಿಸ್ಟರ್ ಜಾನ್, ಹೌ ಆರ್ ಯೂ?" ಎಂದ. ಆಗಂತುಕನು ಹಸ್ತಲಾಘವ ಮಾಡಿ, "ನೀವೇ ಮಿ॥ ಹಸನ್ ಎಂದು ತಿಳಿಯುತ್ತೇನೆ." ಎಂದ.

"ಹೌದು, ನಾನೇ ಆ ವ್ಯಕ್ತಿ. ತಮ್ಮ ಆಗಮನದ ಬಗ್ಗೆ ನನಗೆ ಮೊದಲೇ ತಿಳಿದಿತ್ತು.

"ಅದರಲ್ಲೇನೂ ತೊಂದರೆಯಾಗಲಿಲ್ಲ. ಯಾರೂ ನಾನು ಬಂದಿದ್ದನ್ನು ಗಮನಿಸಿಲ್ಲವೆಂದು ಧೈರ್ಯವಾಗಿ ಹೇಳಬಲ್ಲೆ."

"ಪೋಲೀಸ್ ಮುಖ್ಯಾಧಿಕಾರಿ ಮಹಮ್ಮದ್ ಡಿಕ್ಲರ್‌ರವರು ನಿಮಗೆ ಬೇಕಾದ ಎಲ್ಲಾ ಅನುಕೂಲಗಳನ್ನು ಒದಗಿಸಬೇಕೆಂದು ನನಗೆ ತಿಳಿಸಿದ್ದಾರೆ. CIDಯಾಗಿ ನಾನು ನೇಮಕಗೊಂಡಿದ್ದನ್ನು ಕೂಡ ರಹಸ್ಯವಾಗಿಯೇ ಇಡಲಾಗಿದೆ. ನಾಳೆ ಒಬ್ಬ ಟ್ಯಾಕ್ಸಿ ಡ್ರೈವರನಂತೆ ನಿಮ್ಮ ಹೋಟಲಿಗೆ ಬರುತ್ತೇನೆ. ಅಲ್ಲಿಂದ

ನಾವು ಮಿಸ್ಟರ್ ಡಿಕ್ಲರ್‌ರವರನ್ನು ಸಂಧಿಸಲು ಹೋಗೋಣ," ಎಂದ ಹಸನ್.

"OK, ಗುಡ್ ನೈಟ್," ಎಂದು ಜಾನ್ ಹೊರಬಂದ. ಬೀದಿಯ ಎರಡೂ ಕಡೆ ನೋಡಿ ಹೋಟಲಿಗೆ ನಿಧಾನವಾಗಿ ಹಿಂದಿರುಗಿದ.

೨

ತುರ್ಕಿಯಲ್ಲಿ ಬೆಳೆದ ಅಫೀಮು ಫ್ರಾನ್ಸಿಗೆ ಸೇರಿ ಅಲ್ಲಿ ಹೆರೋಯಿನ್ ಆಗಿ ಪರಿಷ್ಕರಿಸಲ್ಪಟ್ಟು ಅಮೇರಿಕಕ್ಕೆ ಹೇಗೋ ತಲುಪುತ್ತಿತ್ತು. ಇದನ್ನು ತಡೆಗಟ್ಟಲು ತುರ್ಕಿಯ ಪೋಲೀಸ್ ದಳ ವಿಫಲವಾಗಿತ್ತು. ಅಫೀಮು ವ್ಯಾಪಾರಿಗಳು ಅತಿ ಎಚ್ಚರಿಕೆಯಿಂದ ಪೋಲೀಸರ ಕಣ್ಣಿಗೆ ಮಣ್ಣೆರಚಿ ತಮ್ಮ ವ್ಯಾಪಾರವನ್ನು ಮುಂದುವರಿಸುತ್ತಿದ್ದರು. ಅಮೇರಿಕದ ಸರಕಾರ ಜಾನ್ ಎಂಬ ರಹಸ್ಯ ದಳದ ಅಧಿಕಾರಿಯನ್ನು ಅಫೀಮಿನ ಮೂಲವನ್ನು ಶೋಧಿಸಲು ಕಳುಹಿಸಿತ್ತು. 'ವೈಸ್ ರಾಯ್' ಅವನ ವಿಶೇಷ ಸಂಕೇತವಾಗಿತ್ತು.

ಮರುದಿನ ಜಾನ್, ಹಸನನೊಡನೆ ತುರ್ಕಿಯ ಪೋಲೀಸ್ ಇನ್ಸ್‌ಪೆಕ್ಟರ್ ಜನರಲ್ ಮಹಮ್ಮದ ಡಿಕ್ಲರ್ ಅವರನ್ನು ನೋಡಲು ಹೋದಾಗ ಅವರು ಮುಖ್ಯ ವಿಷಯಗಳನ್ನು ಹೇಳಿದರು. ತನ್ನ ಮುಂದಿದ್ದ ಸಮಸ್ಯೆ ಎಷ್ಟು ಗಹನವಾಗಿದೆಂಬುದು ಜಾನನಿಗೆ ಗೊತ್ತಾದದ್ದು ಆಗಲೆ.

ಇಸ್ತಾಂಬುಲ್ ನಗರದಿಂದ ಆರುನೂರಕ್ಕೂ ಹೆಚ್ಚು ಮೈಲು ದೂರದಲ್ಲಿರುವ, ತುರ್ಕಸ್ತಾನದ ಪೂರ್ವದ ತುದಿಯಾದ ಮಾಲಟ್ಯಾ ಪ್ರಾಂತ ಅಫೀಮಿನ ಕಳ್ಳ ಸಾಗಾಣಿಕೆಯ ತವರೂರು. ಅಲ್ಲಿ ಅತ್ಯಂತ ಪ್ರಭಾವಶಾಲಿಯಾದ ಒಬ್ಬ ಶ್ರೀಮಂತನಾದ ಇಸ್ಮಾಯಿಲ್ ವಾಜ್‌ದೆಮೀರ್ ಎಂಬಾತ ಈ ಕಳ್ಳ ಸಾಗಾಣಿಕೆಗೆ ಸೂತ್ರಧಾರ. ಅವನು ಮಾಲಟ್ಯಾ ನಗರದಲ್ಲಿ ಎರಡು ಹೋಟೆಲುಗಳನ್ನಿಟ್ಟಿದ್ದ. ಮೂರು ಸಣ್ಣ ಹಳ್ಳಿಗಳು ವಂಶಪರಂಪರೆಯಿಂದ ಈತನ ಆಸ್ತಿಯಾಗಿವೆ. ಅಲ್ಲಿ ಅತ್ಯಂತ ಗುಪ್ತವಾಗಿ ನೂರಾರು ಕಿಲೋಗಳಷ್ಟು ಅಫೀಮನ್ನು ಆತ ಬಚ್ಚಿಟ್ಟಿದ್ದಾನೆ—ಎಂಬುದು ಪೋಲೀಸ್ ಮುಖ್ಯಾಧಿಕಾರಿಯ ಮಾತಿನ ಸಾರವಾಗಿತ್ತು.



"ಇಷ್ಟೆಲ್ಲಾ ತಿಳಿದ ನೀವು ಅವನನ್ನು ಬಂಧಿಸಬಾರದೇಕೆ ?" ಜಾನ್ ಕೇಳಿದ.

"ಅಲ್ಲೇ ಇರುವುದು ಸ್ವಾರಸ್ಯ. ಆತ ಪ್ರಾಂತೀಯ ಅಸೆಂಬ್ಲಿಯ ಸದಸ್ಯ. ನಿರ್ದಿಷ್ಟವಾದ ಹಾಗೂ ಪ್ರಬಲವಾದ ಪ್ರಮಾಣವಿಲ್ಲದೆ ಆತನನ್ನು ಬಂಧಿಸುವುದು ಅಸಾಧ್ಯ. ಪೋಲೀಸರ ಕಡೆಯವನೆಂದು ಸಂಶಯ ಬಂದರೆ ಆತ ಯಾರಿಗೂ ಒಂದು ಗ್ರಾಮ್ ಅಫೀಮು ಕೂಡ ಮಾರುವುದಿಲ್ಲ. ಅಷ್ಟೇಕೆ, ಆ ಹೆಸರನ್ನೇ ತಿಳಿಯದವನಂತೆ ಆತ ಮಾತನಾಡುತ್ತಾನೆ."

"ಸರಿ, ಹಾಗಾದರೆ ನಾವೂ ತಂತ್ರ ಮಾಡಬೇಕು," ಎಂದು ಜಾನ್ ಅವರಿಗೆ ವಂದನೆಯನ್ನರ್ಪಿಸಿ ಹಿಂದಿರುಗಿದ. ಸತತವಾಗಿ ಒಂದು ವಾರ ಯೋಚಿಸಿದ ನಂತರ ಜಾನ್ ತನ್ನ ಯೋಜನೆಯನ್ನು ಹಸನನ ಮುಂದಿಟ್ಟ. ಆ ಪ್ರಕಾರ ಅವರು ಹುಸೇನ್ ಎಂಬ ಯುವಕನನ್ನು ಸರಿಯಾಗಿ ತಯಾರು ಮಾಡಿ ಮಾಲಟ್ಯಾ ನಗರಕ್ಕೆ ಕಳುಹಿಸಿದರು. ಅಲ್ಲಿನ ಒಂದೇ ಒಂದು ಒಳ್ಳೆಯ ಹೋಟೆಲೆಂದರೆ ಇವರೆಲ್ಲರ ಗುರಿಯಾಗಿದ್ದ ಇಸ್ಮಾಯಿಲ್ ವಾಜ್‌ಡೆಮೀರನ "ಎಮ್ನಿಯತ್." ಹುಸೇನ್ ಚಾಕಚಕ್ಯತೆಯಿಂದ ಅಲ್ಲಿ ಒಬ್ಬ ಕೆಲಸಗಾರನಾಗಿ ಸೇರಿಕೊಂಡ. ದಿನೇ ದಿನೇ ವಾಜ್‌ಡೆಮೀರನ ಪ್ರೀತಿ ವಿಶ್ವಾಸಗಳನ್ನು ಗಳಿಸತೊಡಗಿದ. ಆಗಾಗ್ಗೆ ಜಾನನಿಗೆ ಗುಪ್ತವಾಗಿ ಕಾಗದಗಳನ್ನು ಬರೆದು ತನ್ನ ಯಜಮಾನನ ಸ್ವಭಾವಾದಿಗಳನ್ನೂ ಆತನ ಬಗೆಗೆ ತನಗೆ ಗೊತ್ತಿದ್ದ ಸಂಗತಿಗಳನ್ನೂ ತಿಳಿಸುತ್ತಿದ್ದ. ಇದರಲ್ಲಿ ವಾಜ್‌ಡೆಮೀರ್ ಚಂದುರಂಗ ಪ್ರಿಯ ಎಂಬ ಅಂಶವೂ ಸೇರಿತ್ತು.

೩

ವಾಜ್‌ಡೆಮೀರ್ ದಡ್ಡನಲ್ಲ. ಅವನು ತನ್ನ ವ್ಯವಹಾರವನ್ನು ಬಹಳ ಜಾಗರೂಕತೆಯಿಂದಲೇ ನಡೆಸುತ್ತಿದ್ದ. ತನ್ನ ಹೋಟೆಲ್ ಇಮ್ನಿಯತ್‌ನಲ್ಲಿ ಇಳಿದುಕೊಂಡ ಹೊಸ ಅಮೇರಿಕನ್ ಅತಿಥಿಯನ್ನು ಅವನು ಮೊದಲೇನೂ ನಂಬಲಿಲ್ಲ. ಆದರೆ ಚದುರಂಗದ ಆಟ ಅವನಿಗೆ ಈ ಹೊಸಬನಲ್ಲಿ ಸ್ನೇಹವನ್ನು ಹುಟ್ಟಿಸಿತು. ಆದರೂ ಇವನನ್ನು ಪರೀಕ್ಷಿಸಬೇಕೆಂದುಕೊಂಡ. ಅದಕ್ಕೆ ಅವನು ನೇಮಿಸಿದ್ದು ಮಾತ್ರ ಜಾನನ ಸುದೈವದಿಂದ ಹುಸೇನನನ್ನೇ.

ಮೀನು ಗಾಳವನ್ನು ನೋಡುತ್ತಿದೆಯೆಂಬ ನಂಬಿಕೆ ಹುಟ್ಟಿದ ಮೇಲೆ ಜಾನ್ ಒಂದು ದಿನ ವಾಜ್‌ಡೆಮೀರನನ್ನು ಕೇಳಿದ, "ನೋಡು, ಒಂದು ಗುಟ್ಟಿನ ಮಾತನ್ನು ಹೇಳಬಯಸುತ್ತೇನೆ; ನೀನು ಅದನ್ನು ಹೊರಗೆಡಹಬಾರದು," ಎಂದು.

"ನನ್ನಾಣೆ, ಏನು ಅದು ?" ವಾಜ್‌ಡೆಮೀರ್ ಕೇಳಿದ.

"ನಾನು ಅಮೆರಿಕಕ್ಕೆ ಹೆರೋಯಿನ್ ಕಳ್ಳ ಸರಬರಾಜು ಮಾಡುತ್ತಿದ್ದೇನೆ. ಅದಕ್ಕಾಗಿ ಕಚ್ಚಾ ಅಫೀಮು ಬೇಕಾಗಿದೆ. ಹಣ ಎಷ್ಟು ಬೇಕಾದರೂ ಕೊಡುತ್ತೇನೆ."

ಮೊದಮೊದಲು ಅನುಮಾನಿಸಿದ ವಾಜ್‌ಡೆಮೀರ್ ಕೊನೆಗೆ ಒಪ್ಪಿಗೆಯನ್ನಿತ್ತ. ಮೊದಲ ಬಾರಿಗೆ ೨೦೦ ಕಿಲೋ ಅಫೀಮು ಮಾರುವುದೆಂದಾಯಿತು. ತನ್ನ ಜೊತೆಯಲ್ಲಿ ಮಾಲಿನೊಡನೆ ಬರಬೇಕೆಂದೂ ಇಸ್ತಾಂಬುಲ್‌ನಲ್ಲಿ ಹಣ ಡಾಲರ್ ರೂಪದಲ್ಲಿ ಕೊಡುವೆನೆಂದೂ ಜಾನ್ ಹೇಳಿದ. ಆದರೆ ವಾಜ್‌ಡೆಮೀರ್ ತನ್ನ ನಂಬಿಕೆಯ ಸೇವಕನೊಬ್ಬನನ್ನು ಕಳುಹಿಸುವುದಾಗಿ ಹೇಳಿದ. ಇಷ್ಟವಿಲ್ಲದಿದ್ದರೂ ಜಾನ್ ಒಪ್ಪಬೇಕಾಯಿತು. ಇಸ್ತಾಂಬುಲ್‌ನಲ್ಲಿ ಆ ಸಹಾಯಕನನ್ನು ದಸ್ತಗಿರಿಮಾಡಿಸಿ, ಅವನ ಮೂಲಕ ಅಫೀಮು ಸಂಗ್ರಹದ ಸ್ಥಾನಗಳನ್ನು ಪತ್ತೆಮಾಡಬೇಕೆಂದು ಅವನು ಯೋಚಿಸಿದ.

ಅದರಂತೆ ಅವರು ಕಾರಿನಲ್ಲಿ ಪೆಟ್ಟಿಗೆಗಳನ್ನು ತುಂಬಿಕೊಂಡು ಹೊರಟರು. ವಾಜ್‌ಡೆಮೀರ್ ಕಳುಹಿಸಿದ್ದ ಸಹಾಯಕ ಶಹೀನ್ ತುಂಬಾ ಬುದ್ಧಿವಂತನಂತೆ ಕಾಣುತ್ತಿದ್ದ.

ಇಸ್ತಾಂಬುಲ್‌ನಲ್ಲಿ ಪೆಟ್ಟಿಗೆಯನ್ನು ತೆರೆದಾಗ ಮಾತ್ರ ಜಾನ್ ಪೆಚ್ಚಾಗಬೇಕಾಯಿತು. ಅದರಲ್ಲಿ ಸೋಪು ತುಂಬಿತ್ತು. ಒಂದು ಕ್ಷಣದಲ್ಲಿ ಅವನಿಗೆ ವಾಜ್‌ಡೆಮೀರನ ತಂತ್ರ ತಿಳಿದುಹೋಯಿತು. ಜಾನ್ ಪೋಲೀಸರ ಕಡೆಯವನಾದಲ್ಲಿ ಶಹೀನನ ಬಂಧನ ಖಂಡಿತ; ಪೆಟ್ಟಿಗೆಯಲ್ಲಿ ಅಫೀಮಿನ ಗಂಧ ಸಹ ಇರದ್ದರಿಂದ ಅವನ ಬಿಡುಗಡೆಯಾಗುತ್ತದೆ ಮತ್ತು ತನ್ನನ್ನು ಹಿಡಿಯಲು ಅವಕಾಶ

ಏರ್ಪಡುವ ಪಟ್ಟಿಯೇ? ತಾನು ಸಾಕಷ್ಟು ಮುಂಜಾಗ್ರತೆ ವಹಿಸಬಹುದು ಎಂಬುದು ಅವನ ಯೋಜನೆಯಾಗಿತ್ತು. ಆದರೆ ಜಾನ್ ಸುಳಿವು ತಿಳಿದುಕೊಂಡು ತಕ್ಷಣ ಮುಖದಲ್ಲಿ ಗಾಬರಿ, ವಿಷಾದಗಳನ್ನು ತೋರಿಸಿ, "ವಾಜ್‌ಡೆಮೀರ್ ನನ್ನ ಕತ್ತು ಕೊಯ್ಯುವನೆಂದು ತಿಳಿದಿರಲಿಲ್ಲ," ಎಂದು ಕಿರುಚಿದ.

ಶಹೀನನಿಗೆ ಈಗ ಜಾನ್ ಪೋಲೀಸರ ಕಡೆಯವನಲ್ಲವೆಂಬ ವಿಶ್ವಾಸ ಮೂಡಿತು. ಅವನು ಹೇಳಿದ, "ಈ ವ್ಯಾಪಾರದಲ್ಲಿ ನಾವು ತುಂಬಾ ಎಚ್ಚರ ವಹಿಸುವುದು ಅವಶ್ಯವಾದ್ದರಿಂದ ಹೀಗೆ ಮಾಡಬೇಕಾಯಿತು. ಈಗ ಮತ್ತೆ ಮಾಲಟ್ಯಾ ಬನ್ನಿ. ನಿಮಗೆ ಅಫೀಮಿನ ಬೆಟ್ಟವನ್ನೇ ತೋರಿಸುತ್ತೇನೆ."

ಅದಕ್ಕೆ ಒಪ್ಪಿಕೊಂಡು ಜಾನ್ ಒಂದು ವಾರ ಶಹಿನನೊಡನೆ ಇಸ್ತಾಂಬುಲ್‌ನಲ್ಲೇ ಕಳೆದ. ಈ ಅವಧಿಯಲ್ಲಿ ಡಿಕ್ಲರ್‌ರವರೊಡನೆ ಗುಟ್ಟಾಗಿ ಭೇಟಿ ಮಾಡಿ ಮಾಲಟ್ಯಾ ಪ್ರಾಂತ್ಯದ ಪೋಲೀಸ್ ರಹಸ್ಯ ಪಡೆಗೆ ತನ್ನ ಸಹಾಯಕ್ಕೆ ಸಿದ್ಧವಾಗಿರಲು ಆಜ್ಞೆ ಕೊಡುವಂತೆ ಕೇಳಿಕೊಂಡ. ಅವರು ಅನುಮತಿಯನ್ನಿತ್ತು, ಮಾಲಟ್ಯಾದಲ್ಲಿದ್ದ ಹಸನನಿಗೆ ಈ ವಿಷಯವನ್ನೆಲ್ಲಾ ತಿಳಿಸಿದ.

ಸಪ್ಟೆಂಬರ್‌ನಲ್ಲಿ ಅವರು ಮತ್ತೆ ಮಾಲಟ್ಯಾಕ್ಕೆ ಬಂದರು. ಇಷ್ಟರೊಳಗೆ ಜಾನ್, ಶೀಘ್ರವಾಗಿ ಮಾಲು ತರಬೇಕೆಂಬ ಅರ್ಥ ಕೊಡುತ್ತಿದ್ದ ಫ್ರಾನ್ಸಿನಿಂದ ಬಂದ ಕೇಬಲ್‌ಗಳನ್ನು ತೆಗೆದುಕೊಂಡು ಬಂದಿದ್ದ. ಮಾಲಟ್ಯಾ ನಗರದಲ್ಲಿ ಬೇಹುಗಾರ ಭಟರ ಒಂದು ಪಡೆಯೊಡನೆ ಹಸನ್ ಇವರನ್ನು ಗಮನಿಸುತ್ತಿದ್ದ.

ಶಹೀನನ ಮಾತಿನಿಂದ ಹಾಗೂ ಜಾನ್ ತೋರಿಸಿದ ಕೇಬಲ್‌ಗಳಿಂದ ವಾಜ್‌ಡೆಮೀರ್ ಜಾನ್ ಒಬ್ಬ ಅಂತಾರಾಷ್ಟ್ರೀಯ ಕಳ್ಳಸಾಗಾಣಿಕೆಗಾರನೆಂದು ನಂಬಿದ. ಜಾನ್ ಬಳಿ ೫೦,೦೦೦ ಡಾಲರ್ ನಗದು ಹಣವಿತ್ತು. ಇಂತಹ ದೊಡ್ಡ ವ್ಯಾಪಾರವನ್ನು ಕಳೆದುಕೊಳ್ಳಲು ಅವನಿಗೆ ಮನಸ್ಸಾಗಲಿಲ್ಲ. ಜಾನ್ ಮತ್ತು ಶಹೀನರೊಡನೆ ವಾಜ್‌ಡೆಮೀರ್ ಸಪ್ಟೆಂಬರ್ ೨೩ ರಂದು ತನ್ನ ಹಳ್ಳಿ "ಬೈರಾಮು ಸಾಗಿ"ಯ ಕಡೆಗೆ ಕಾರಿನಲ್ಲಿ ಹೊರಟ. ಅಲ್ಲಿ ತನ್ನ ಕೋಟೆಯಂತಿದ್ದ ಮನೆಯಲ್ಲಿ ಜಾನನಿಗೆ ರಾಜೋಪಚಾರ ನೀಡಿ, ನಂತರ ಮನೆಯ ಹಿಂದೆ ಇದ್ದ ಸುರಂಗದಲ್ಲಿ ಅಫೀಮಿನ ಸಂಗ್ರಹವನ್ನು ತೋರಿಸಿ, ೨೦೦ ಕಿಲೋ ತೂಗಿ ಜಾನನಿಗೆ ಒಪ್ಪಿಸಿದ.

ಅಫೀಮನ್ನು ಪರೀಕ್ಷಿಸುವ ನಟನೆ ಮಾಡಿದ ಜಾನ್ ಅದು ತುಂಬಾ ಶ್ರೇಷ್ಠಮಟ್ಟದ್ದೆಂದು ಹೊಗಳಿ ಎಷ್ಟು ಸಿಕ್ಕಿದರೂ ತಾನು ಕೊಳ್ಳುವುದಾಗಿ ಹೇಳಿದ.

ಉಬ್ಬಿ ಹೋದ ವಾಜ್‌ಡೆಮೀರ್ ಬೇರೆ ಬೇರೆ ಹಳ್ಳಿಗಳಲ್ಲಿ ತಾನು ಇಟ್ಟಿರುವ ಸಂಗ್ರಹ ಎಷ್ಟಿದೆ ಎಂದು ಜಂಬ ಕೊಚ್ಚಿಕೊಂಡ.

೪

ಮರುದಿನ ಬೆಳಿಗ್ಗೆ ಸೂರ್ಯೋದಯದ ವೇಳೆಗೆ ಪೋಲೀಸರ ಜೀಪುಗಳು ಇಮ್ನಿಯತ್ ಕೋಟೆಯನ್ನು ಸುತ್ತುವರಿದಿದ್ದುವು. ಹಾಸಿಗೆಯಿಂದ ಏಳುತ್ತಿದ್ದಂತೆಯೇ ವಾಜ್‌ಡೆಮೀರನ ಕೈಗೆ ಕೊಳಗಳನ್ನು ತೊಡಿಸಲಾಯಿತು. ಕೋಪದಿಂದ ಅವನು "ಏನಿದು?" ಎನ್ನುತ್ತಿದ್ದ ಹಾಗೇ ಡಿಕ್ಲರ್‌ರೊಡನೆ ಮಾತನಾಡುತ್ತಿದ್ದ ಜಾನ್‌ನನ್ನು ನೋಡಿ, "ಅಯ್ಯೋ! ಮೋಸ ಹೋದೆ" ಎಂದು ಕಿರುಚಿಕೊಂಡ.

ಜಾನನ ನಿರ್ದೇಶದ ಮೇರೆಗೆ ಜೀಪುಗಳು ಹಳ್ಳಿಗಳ ಕಡೆ ಹೊರಟವು. ವಾಜ್‌ಡೆಮೀರನ ಎದುರಿಗೆ ಸುರಂಗ ಉಗ್ರಾಣಗಳನ್ನು ಶೋಧಿಸಲಾಯಿತು. ಒಟ್ಟಿನಲ್ಲಿ ಸುಮಾರು ಎರಡು ಕೋಟಿ ಎಪ್ಪತ್ತು ಲಕ್ಷ ಡಾಲರು ಬೆಲೆಬಾಳುವ ೭೦೦೦ ಕಿಲೋಗ್ರಾಮಿನಷ್ಟು ಅಫೀಮನ್ನು ವಶಪಡಿಸಿಕೊಳ್ಳಲಾಯಿತು.

ಡಿಕ್ಲರ್ ಮತ್ತು ಹಸನರನ್ನು ಹಾರ್ದಿಕವಾಗಿ ಬೀಳ್ಕೊಟ್ಟು ಜಾನ್ ವಿಮಾನವನ್ನೇರಿ ಸ್ವದೇಶದತ್ತ ನಡೆದ.

✡

[ಕೆಲವು ವ್ಯಕ್ತಿಗಳ ಹೆಸರನ್ನೂ ದಿನಗಳನ್ನೂ ಕಾಲ್ಪನಿಕವಾಗಿ ಕೊಟ್ಟಿದೆ. ಘಟನೆ ಸಂಪೂರ್ಣ ವಾಸ್ತವವಾಗಿದೆ.]

# ಪತ್ನೀಪರೀಕ್ಷೆ

ಇಲ್ಲಿ ಹೇಳಲಿರುವ ಕಥಾನಕವು ಫ್ರಾನ್ಸ್ ದೇಶದಲ್ಲಿ ನೂರಾರು ವರ್ಷಗಳಿಂದ ಪ್ರಸಿದ್ಧವಾಗಿದೆ. ಇದನ್ನು ಬರೆದವನು ಅಲ್ಲಿನ 'ಪ್ಯಾರಿಸ್ ನಗರದ ಸಜ್ಜನ' ಎಂಬ ಅನಾಮಧೇಯನು. ೧೪ ನೇ ಶತಮಾನದಲ್ಲಿದ್ದ ಇಂಗ್ಲಿಷ್ ಕವಿ ಛಾಸರನ ಕಾಲದಲ್ಲಿಯೇ ಕೃತಿ ವಿಖ್ಯಾತವಾಗಿದ್ದುದರಿಂದ ಅವನು ಅದನ್ನು ಸಂಕ್ಷಿಪ್ತವಾಗಿ ತನ್ನ ಕಾವ್ಯ ಕಥಾಮಾಲಿಕೆಯಲ್ಲಿ ಸೇರಿಸಿದ್ದನು.

ಆದ್ಯ ಲೇಖಕನಾದ 'ಪ್ಯಾರಿಸ್ ನಗರದ ಸಜ್ಜನ'ನು ಇದನ್ನು ಬರೆದ ಹಿನ್ನೆಲೆಯನ್ನಿಲ್ಲಿ ನೋಡುವಹಾಗಿದೆ. ಅವನು ತನ್ನ ೬೦ ನೆಯ ವಯಸ್ಸಿನಲ್ಲಿ ನವತರುಣಿಯೋರ್ವಳನ್ನು ಮದುವೆಯಾದನು. ತಾನಂತೂ ಬೇಗ ಕಣ್ಣು ಮುಚ್ಚುವವ. ಈ ಬಾಲಿಕೆಯಾದರೋ, ವಿಧವೆಯಾಗಿ ತನ್ನನ್ನೆ ನೆನೆಯುತ್ತ ಉಳಿಯುವುದು ಸಾಧ್ಯವೂ ಇಲ್ಲ: ಸಾಧುವೂ ಅಲ್ಲ. ಅವಳು ಇನ್ನೊಬ್ಬನನ್ನು ಮದುವೆಯಾಗುವುದು ಖಂಡಿತ ಅವಳು ತನ್ನ ಹೊಸ ಮನೆಯಲ್ಲಿ ತಪ್ಪಿ ನಡೆದುಕೊಂಡರೆ, ತನಗೆ ಕೆಟ್ಟ ಹೆಸರು ಬರುತ್ತದೆಂದು ಅವನ ವಿಚಾರ! ಅಂತೆಯೇ ತನ್ನ 'ಹುಡುಗಿ'ಗೆ ಹೊಸ ಹೊಸ ಕತೆಗಳನ್ನು ಹೇಳುತ್ತಿದ್ದ. ಅವುಗಳಲ್ಲಿ ಇದೂ ಒಂದು. ಈ ಕತೆಗಳ ಶೈಲಿಯನ್ನು ನೋಡಿದರೆ, ಮುದುಕ ಗಂಡನಾದರೂ ರಸಿಕನನ್ನು ಕೈಹಿಡಿದೆನೆಂದು ಆ ಹುಡುಗೆ ಸುಖದಿಂದಲೇ ಇದ್ದಿರಬೇಕು!

ಭಾರತೀಯ ಸತೀತ್ವದ ಆದರ್ಶಕ್ಕೆ ಈ ಕತೆಯ ಹೊಳಹು ತೀರ ಸಮೀಪವಾಗಿರುವುದರಿಂದ ಇದನ್ನು ನಮ್ಮ ದೇಶದ ಆವರಣಕ್ಕೇನೆ ಪರಿವರ್ತಿಸಲಾಗಿದೆ.

ಭಾರತಖಂಡದ ದಕ್ಷಿಣ ತಪ್ಪಲಿನ ನಾಡು ಅತ್ಯಂತ ಸಮೃದ್ಧವಾದುದು. ಸಕಾಲದ ಮಳೆಗಳಿಂದಲೂ ಹಚ್ಚ ಹಸುರಿನ ಬಯಲುಗಳಿಂದಲೂ ಹಿನ್ನೆಲೆಯಲ್ಲಿರುವ ಪರ್ವತಶ್ರೇಣಿಯಿಂದ ಹರಿದು ಬರುವ ಹೊಳೆ, ಹಳ್ಳ, ಝರಿಗಳಿಂದಲೂ ಆ ನಾಡು ನಿಸರ್ಗಸೌಂದರ್ಯದಿಂದ ಕೂಡಿದುದಾಗಿತ್ತು.

ಆ ನಾಡಿನ ಒಂದು ನೆರೆಯನ್ನು ನೂರಾರು ವರ್ಷಗಳ ಹಿಂದೆ ಪ್ರದೀಪನೆಂಬ ರಾಜನು ಆಳುತ್ತಿದ್ದ. ಅಲ್ಲಿರುವ ಇತರ ರಾಜರು, ನಾಯಕರಲ್ಲೆಲ್ಲ ಪ್ರದೀಪರಾಜನು ಹೆಚ್ಚು ಪ್ರತಾಪಶಾಲಿಯೂ ಪ್ರಜಾರಂಜಕನೂ ಸಿರಿವಂತನೂ ಎಂದೆನಿಸಿಕೊಂಡಿದ್ದನು. ನೋಡಲಿಕ್ಕೂ ಅವನು ಸ್ಫುರದ್ರೂಪಿಯಿದ್ದು ಯಾವಾಗಲೂ ಪ್ರಸನ್ನವದನವುಳ್ಳವನಿದ್ದನು. ಅವನ ಮಾತಿನಲ್ಲಿ ಮಿತವ್ಯಯವೂ, ನಡವಳಿಕೆಯಲ್ಲಿ ಗಾಂಭೀರ್ಯವೂ ಎದ್ದು ತೋರುತ್ತಿದ್ದವು.

ಅವನಲ್ಲಿರುವ ಒಂದು ದೋಷವೆಂದರೆ ಅವನಿಗೆ ಏಕಾಕಿತನವು ಬಹಳ ಪ್ರಿಯವಾಗಿದ್ದಿತು. ಎಂದರೆ ಅವನಿಗೆ ಜನರು ಬೇಡವೆಂದಲ್ಲ. ಆದರೆ ತನ್ನ ವೈಯಕ್ತಿಕ ಸ್ವಾತಂತ್ರ್ಯಕ್ಕೆ, ಬೇಕು–ಬೇಡಗಳಿಗೆ, ಹೆಂಡತಿ ಅಥವಾ ಯಾರೇ ಆಗಲಿ ಆತಂಕವಾಗಿರುವುದು ಅವನಿಗೆ ಸರಿಬರುತ್ತಿರಲಿಲ್ಲ. ಅನುಕೂಲೆಯಾದ ಅರ್ಧಾಂಗಿ ಸಿಕ್ಕುವುದು ಅಪೂರ್ವವೆಂದು ಭಾವಿಸಿದ್ದ. ಇದೇ ಕಾರಣದಿಂದ ಅವನು ತನ್ನ ೩೦ನೆಯ ವರುಷದ ಮೇರೆಯನ್ನು ಮೀರಿದ್ದರೂ ಮದುವೆಯಾಗಿರಲಿಲ್ಲ. ರಾಜ್ಯಕಾರ್ಯವು ಮುಗಿದೊಡನೆಯೆ, ವನವಿಹಾರ, ವನ್ಯಪಶುಗಳ ಬೇಟೆ

ಗಳಲ್ಲಿ ಮಗ್ನನಾದನೆಂದರೆ ಅವನಿಗೆ ಅನ್ಯ ವಿಷಯಗಳ ಪರಿವೆ ಇರುತ್ತಿರಲಿಲ್ಲ. ಹೆಣ್ಣಿನ ಮೋಹದ ಕಡೆಗೆ ಮನಸ್ಸು ಹರಿದಿರಲೇ ಇಲ್ಲ.

ತಮ್ಮ ಮೆಚ್ಚಿನ ದೊರೆಗೆ ಮದುವೆ ಇಲ್ಲ, ಮಕ್ಕಳಿಲ್ಲ ಎಂಬ ವಿಚಾರವು ರಾಜ್ಯದ ಪ್ರಮುಖ ರಿಗೂ ಹಿರಿಯರಿಗೂ ತಾಪದಾಯಕವೆನಿಸಿತು. ಸಮಯ ದೊರೆತಾಗೆಲ್ಲ ಅವರಲ್ಲಿ ಹಲವರು ಈ ವಿಷಯದಲ್ಲಿ ರಾಜನ ಮನವೊಲಿಸಲು ಪ್ರಯತ್ನಿಸಿದ್ದರೂ ಅದು ಸಫಲವಾಗಿರಲಿಲ್ಲ. ಅವನ ನಿರಾಕರಣದ ಕಾರಣವು ಅವರಿಗೆ ತಿಳಿದೇ ಇದ್ದಿತು.

ಕೊನೆಗೊಮ್ಮೆ ಅವರಲ್ಲಿ ಅನೇಕರು ಒಟ್ಟಾಗಿ ಸೇರಿ ರಾಜನ ಬಳಿಗೆ ಬಂದರು. ಅವರೆಲ್ಲರಲ್ಲಿ ಅತ್ಯಂತ ಹಿರಿಯನಾದವನು ರಾಜನಿಗೆ ಈ ರೀತಿ ಹೇಳಿದನು:

"ದೊರೆಯೇ, ನಿಮ್ಮ ಮೇಲೆ ನಮಗಿರುವ ಪ್ರೀತಿ-ಆದರಗಳಿಂದ ಪ್ರೇರಿತನಾಗಿ, ಇವರೆಲ್ಲರ ಪರವಾಗಿ ಒಂದೆರಡು ಮಾತನ್ನು ಹೇಳಲೆಂದು ನಿಮ್ಮೆದುರು ನಿಂತಿದ್ದೇನೆ. ವಿಷಯ ನಿಮ್ಮ ಮನಸ್ಸಿಗೆ ಹಿಡಿಯಲಿಲ್ಲವಾದರೆ, ದಯವಿಟ್ಟು ನಮ್ಮ ಮೇಲೆ ಬೇಸರಿಸಬೇಡಿ. ಸಕಲ ಗುಣ ಗಳಿಂದ ಕೂಡಿದ ನಿಮ್ಮಂತಹ ದೊರೆಯಿರುವಾಗ ನಮಗೆ ಯಾವ ಕೊರತೆಯೂ ಕಂಡುಬಂದಿಲ್ಲ. ಆದರೆ ನಿಮ್ಮ ಜೊತೆಯಲ್ಲಿ ಸಿಂಹಾಸನದ ಮೇಲೆ ಕುಳಿತ ಅರ್ಧಾಂಗಿಯನ್ನು ನೋಡುವ ಭಾಗ್ಯವನ್ನು ನಮ್ಮ ಕಣ್ಣುಗಳು ಇದುವರೆಗೆ ಕಾಣಲಿಲ್ಲವೆಂಬುದಷ್ಟೇ ನಮ್ಮ ಕೊರಗಿಗೆ ಕಾರಣ ವಾಗಿದೆ. ಕಾಲರಾಯನ ಚಕ್ರದಲ್ಲಿ ದಿನಗಳು ಹೇಗೆ ಉರುಳಿ ಹೋಗುತ್ತವೆ ಮತ್ತು ಹೀಗೆ ಹೋದ ದಿನಗಳು ಮರಳಿ ಬಾರವು ಎಂಬುದು ತಮಗೆ ಅರಿವಿಲ್ಲದಿಲ್ಲ. ಇಂದು ನೀವು ಆರೋಗ್ಯ ಭಾಗ್ಯದಿಂದ ಕೂಡಿ, ಯೌವನದ ಪಕ್ವದೆಸೆಯಲ್ಲಿ ಸುಖವಾಗಿ ಇದ್ದೀರಿ. ಆದರೆ 'ಜಾತಸ್ಯ ಮರಣಂ ಧ್ರುವಂ'-ಎಂಬ ಮಾತನ್ನು ಹಿರಿಯರು ಹೇಳಿಯೇ ಇದ್ದಾರೆ. ಸಾವು ಯಾರನ್ನೂ ಬಿಡುವುದಿಲ್ಲ. ಅದು ಎಂದು ಮತ್ತು ಹೇಗೆ ಬರುತ್ತದೆ ಎಂಬುದನ್ನೂ ಹೇಳಲು ಶಕ್ಯವಿಲ್ಲ. ನೀವು ಇರುವವರೆಗೆ ನಮಗೆ ಯಾವ ಕೊರ ತೆಯೂ ಇಲ್ಲವೆಂಬುದು ನಿಜ. ಆದರೆ ಮಕ್ಕಳು, ಮೊಮ್ಮಕ್ಕಳು ಇರುವ ನಾವು ನಿಮ್ಮ ನಂತರ, ಅವರನ್ನು ರಕ್ಷಿಸುವವರಾರು ಎಂಬ ಯೋಚನೆ ಗೊಳಗಾದರೆ ಅದರಲ್ಲಿ ತಪ್ಪಿಲ್ಲವಷ್ಟೆ? ನಿಮ್ಮ ವಂಶದ ಕುಡಿ ಹೂಬಿಡಲು ಅವಕಾಶ ಮಾಡಿ ಕೊಡುವುದಕ್ಕೆ ದಯವಿಟ್ಟು ನಮಗೆ ಸಮ್ಮತಿ ಯನ್ನು ನೀಡಬೇಕು. ಎಲ್ಲ ಬಗೆಯಿಂದ ಅನು ಕೂಲೆಯಾದ ಅರ್ಧಾಂಗಿಯು ದೊರೆಯುವುದು ಆಕಸ್ಮಿಕವೆಂಬುದು ನಿಜ. ಹಾಗೆಂದು ಆ ಪ್ರಯತ್ನ ದಿಂದ ದೂರವಿರುವುದು ಅಷ್ಟು ಸರಿಯಲ್ಲವೆಂದು ನಮ್ಮ ಭಾವನೆ. ನಿಮಗಾಗಿ ಉಚ್ಚಕುಲದ, ಸದ್ಗುಣಗಳಿಂದ ಕೂಡಿದ, ಓರ್ವ ಸುಂದರ ವಧು ವನ್ನು ಹುಡುಕಿ ತರುತ್ತೇವೆ. ಅಂತಹಳ ಕೈಹಿಡಿಯುವುದಕ್ಕೆ ದಯವಿಟ್ಟು ಒಪ್ಪಬೇಕೆಂದು ಪ್ರಾರ್ಥನೆ."

ಅಲ್ಲಿ ನೆರೆದವರ ವಿನಯಭಾವವನ್ನೂ ತನ್ನ ಮದುವೆಯ ವಿಷಯದಲ್ಲಿ ಅವರಿಗಿರುವ ಕಾತರ ಭಾವವನ್ನೂ ತದ್ವತ್ತಾಗಿ ಪ್ರತಿಬಿಂಬಿಸುವಂತಿರುವ ಆ ಹಿರಿಯನ ಮಾತುಗಳಿಂದ ಆ ಪ್ರಜಾವತ್ಸಲನ ಮನಸ್ಸು ಕರಗಿತು. ಹೆಂಡತಿಯಾಗಿ ಬರುವವಳು ತನ್ನ ಪಾಲಿಗೆ ಒಂದು ಕಾಲ್ತೊಡಕು, ತನ್ನ ಅನುದಿನದ ಸ್ವಾತಂತ್ರ್ಯಕ್ಕೆ ಒಂದು ಆತಂಕ ವೆಂಬ ಭಾವನೆ ಅವನಲ್ಲಿ ಎಷ್ಟೂ ಕದಡಿರಲಿಲ್ಲ. ಆದರೂ ತನ್ನ ವಂಶಾಭಿವೃದ್ಧಿಯನ್ನು ಕುರಿತು ಅವರಲ್ಲಿರುವ ಕಳಕಳಿ ಅವನ ಹೃದಯಕ್ಕೆ ಚೆನ್ನಾಗಿ ವೇದ್ಯವಾಯಿತು. ಅಂತೆಂದು ಈ ರೀತಿ ಉತ್ತರಿ ಸಿದನು :

"ಮಿತ್ರರೇ, ಮದುವೆಯ ವಿಷಯದಲ್ಲಿ ನನ್ನ ವಿಚಾರವೇನೆಂಬುದನ್ನು ತಾವೆಲ್ಲರೂ ಬಹುಕಾಲ ದಿಂದ ಬಲ್ಲಿರಿ. ಆದರೂ ನಿಮ್ಮ ಮೇಲಣ ಒಲುಮೆಯಿಂದಲೂ ನೀವು ನಮ್ಮ ರಾಜ- ಮನೆತನದ ವಿಷಯದಲ್ಲಿ ತೋರಿದ ಕಳಕಳಿ ಯಿಂದಲೂ ನಾನು ಈ ಮಾತಿಗೆ ಸಮ್ಮತಿಸು ತ್ತೇನೆ. ಪ್ರಜೆಗಳ ಸುಖಸಮೃದ್ಧಿಯ ಪರಂಪರೆ ಮುಂದುವರೆಯಬೇಕಾದರೆ, ರಾಜಕುಲಪ್ರಸೂ- ತರ ಪರಂಪರೆಯೂ ಬೆಳೆಯಬೇಕೆಂಬುದು ದಿಟ. ಆದರೆ ತಂದೆಯಂತೆ ಮಕ್ಕಳು ಇರುತ್ತಾವೆ ಎಂಬ ನಿಯಮವೆಲ್ಲಿದೆ? ಅದೆಲ್ಲವೂ ದೈವಾಧೀನ.

ಒಂದು ವೇಳೆ ತಂದೆಯನ್ನು ಮೀರಿಸುವ ಮಕ್ಕಳು ಹುಟ್ಟಿದರೂ ಆಗಲೂ ನಾವು ದೈವಕೃಪೆ ಯೆಂದೇ ಹೇಳಬೇಕಾಗುತ್ತದೆ. ಅದೇ ದೈವ ಕೃಪೆಯ ಮೇಲೆ ಭಾರವನ್ನು ಹಾಕಿ ನಾನು ಈಗ ಮದುವೆಗೆ ಒಪ್ಪುತ್ತೇನೆ. ಯಾವ ದೇವರು ನನ್ನ ರಾಜ್ಯವನ್ನು ರಕ್ಷಿಸುವಲ್ಲಿ ನೆರವಾಗಿರುವನೋ, ಅವನೇ ನನಗೆ ಒರ್ವ ಸದ್ಗುಣಿಯಾದ ಮತ್ತು ಅನುವರ್ತಿನಿಯಾದ ಪತ್ನಿಯನ್ನು ಕರುಣಿಸುವ ನೆಂದು ನಂಬಿದ್ದೇನೆ. ನಾನು ಮದುವೆಯಾಗು ತ್ತೇನೆ. ನಿಮ್ಮ ರಾಣಿಯನ್ನು ಹುಡುಕಿ ತರುವ ತೊಂದರೆ ನಿಮಗೆ ಬೇಡ. ನಾನೇ ಆಯ್ದುಕೊಳ್ಳು ತ್ತೇನೆ. ಆದರೆ ಈ ವಿಷಯದಲ್ಲಿ ನಾನು ನಿಮ್ಮಿಂದ ಅಪೇಕ್ಷಿಸುವುದೇನೆಂದರೆ, ನಾನು ಯಾರನ್ನೇ ಆಯ್ದುಕೊಳ್ಳಲಿ, ನೀವು ನನ್ನ ವಿಷಯದಲ್ಲಿ ತೋರುವ ಆದರ-ಪ್ರೀತಿಗಳನ್ನು ಅವಳಲ್ಲಿಯೂ ತೋರಿಸಬೇಕು. ಯಾವುದೇ ನಿಮಿತ್ತದಿಂದ ಅವಳಲ್ಲಿ ಬೇಸರ-ಅನಾದರಗಳನ್ನು ಮನಸ್ಸಿನಲ್ಲಿ ಹಿಡಿಯುವುದಿಲ್ಲವೆಂದು ತಿಳಿ-ಯಲೇ ?"

ರಾಜನ ಸರದಾರರಿಗೂ ಪುರಪ್ರಮುಖರಿಗೂ ಆದ ಆನಂದಕ್ಕೆ ಮಿತಿ ಉಳಿಯಲಿಲ್ಲ. ರಾಜ ಸಮ್ಮುಖದಲ್ಲಿ ತಾವು ಇರುವೆವೆಂಬುದನ್ನು ಮರೆತು, ಸಂತೋಷದ ಕೇಕೆ ಹಾಕಿದರು. ತಮ್ಮ ಅಭೀಷ್ಟಕ್ಕೆ ಮನ್ನಣೆಯಿತ್ತುದಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ವಯೋ-ವೃದ್ಧರು ಅವನ ಭಾವೀ ದಾಂಪತ್ಯವು ಅಖಂಡ ವಾದ 'ಆಯುರಾರೋಗ್ಯೈಶ್ವರ್ಯ'ದಿಂದ ಕೂಡಿರ ಲೆಂದು ಆಗಲೆ ಆಶೀರ್ವದಿಸುವುದಕ್ಕೆ ಹಾತೊರೆ-ದರು.

ಕೂಡಲೇ ಮದುವೆಯ ಸಿದ್ಧತೆಗಳಿಗೆ ಮೊದ-ಲಾಯಿತು—ಇಡೀ ರಾಜಧಾನಿಯೇ ಆ ಕಾರ್ಯದಲ್ಲಿ ಅಣಿಯಾದಂತೆ. ಪ್ರತಿಯೊಬ್ಬ ಪ್ರಜೆಯೂ ಒಂದಿಲ್ಲೊಂದು ಕೆಲಸದಲ್ಲಿ ತತ್ಪರನಾಗಿದ್ದನೆನ್ನ-ಬಹುದು. ಅರಮನೆಯ ಅಲಂಕಾರ, ರಾಜ ದಂಪತಿಗಳ ವಸ್ತ್ರಾಭರಣ, ದೇವಮಂದಿರಗಳಲ್ಲಿ ಷೋಡಶೋಪಚಾರ ಪೂಜೆ, ರಾಜಸಲಕರಣೆ ಗಳ ಪ್ರದರ್ಶನ-ಇವೆಲ್ಲ ದೊಡ್ಡ ಪ್ರಮಾಣದಲ್ಲಿ ಸಿದ್ಧವಾಗತೊಡಗಿದುವು. ಸಮೀಪದ ಯಾವ ರಾಜ್ಯದಲ್ಲಿಯೂ ಇಷ್ಟೊಂದು ಉತ್ಸವ, ಸನ್ನಾಹ ನಡೆದಿದ್ದಿಲ್ಲ. ಎಂದು ಹೊರಗಿನವರು ಹೇಳು ವಂತಾಯಿತು.

ಮದುವೆಯ ದಿನವೂ ಸಮೀಪಿಸಿತು. ಆದರೆ ಕುಮಾರಿಯನ್ನು ಕೊಡಬಯಸಿದ ಪುಣ್ಯಶಾಲಿ ಯಾದ ರಾಜ ಯಾರೆಂದು ಯಾರಿಗೂ ತಿಳಿದಿರಲಿಲ್ಲ. ರಾಜ್ಯ ಪ್ರಮುಖರಲ್ಲಿ ಹಲವರು ಪರ್ಯಾಯವಾಗಿ ಪ್ರದೀಪ ಮಹಾರಾಜನನ್ನು ಕೇಳಿ ನೋಡಿದರು. "ತಾನೇ ತನ್ನ ವಧುವನ್ನು ಆರಿಸುವುದಾಗಿ ರಾಜನು ಹೇಳಿದ್ದನಷ್ಟೆ. ಈ ವಿಷಯದಲ್ಲಿ ಅದುವರೆಗೆ ಅವನು ಯೋಚಿಸಿದಂತೆ ಅವರಿಗೆ ಅನಿಸಲೇ ಇಲ್ಲ. ಇತ್ತ ಮದುವೆಯ ಸಿದ್ಧತೆಗಳು ನಡೆದಾಗ ಯಥಾಪ್ರಕಾರ ಅವನು ಬೇಟೆ, ವನವಿಹಾರ ಗಳಲ್ಲಿ ಮಗ್ನನಾಗಿರುತ್ತಿದ್ದನಲ್ಲದೆ ಅವರ ಸಂದೇಹ ಆತುರಗಳಿಗೆ ಸಮಾಧಾನವನ್ನು ಹೇಳುವ ಅಪೇಕ್ಷೆಯನ್ನು ಆತ ತೋರಲಿಲ್ಲ. ಆದರೂ ಅವರಿಗೆ ತಮ್ಮ ರಾಜನಲ್ಲಿರುವ ಉನ್ನತ ಅಭಿರುಚಿಯಲ್ಲಿ, ಶುಚಿಯಾದ ದೃಷ್ಟಿಯಲ್ಲಿ ವಿಶ್ವಾಸವಿತ್ತು.

ರಾಜಧಾನಿಯಿಂದ ಒಂದು ಮೈಲಿನಷ್ಟು ಅಂತರದಲ್ಲಿ ಒಂದು ಚಿಕ್ಕ ಹಳ್ಳಿಯಿದ್ದಿತು. ಅಲ್ಲಿಯ ಜನ ಬಡವರಾದರೂ ರಾಜಧಾನಿಯಲ್ಲಿಯೂ ತಮ್ಮ ಹೊಲ ಗದ್ದೆಗಳಲ್ಲಿಯೂ ದುಡಿಯುವವ ರಾಗಿ ನೆಮ್ಮದಿಯಿಂದ ಇದ್ದರು. ಪ್ರದೀಪರಾಜನು ವನವಿಹಾರಕ್ಕೆ ಹೋಗುವಾಗ ದಾರಿಯಲ್ಲಿ ಈ ಹಳ್ಳಿಯ ಮೇಲಿಂದಲೇ ಹಾಯ್ದು ಹೋಗುತ್ತಿ ದ್ದನು. ಹಾಗೆ ಪಯಣಿಸುತ್ತಿದ್ದಾಗ ಸ್ವರ ದ್ರೂಪಿಯಾದ ಒರ್ವ ಕನ್ಯೆಯು ಹಲವಾರು ಬಾರಿ ಅವನ ಕಣ್ಣಿಗೆ ಬಿದ್ದಿದ್ದಳು. ಅವಳು ಸಮೀಪದ ನದಿಯಿಂದ ನೀರಿನ ಕೊಡವನ್ನು ಹೊತ್ತು ಕೊಂಡು ಬರುವಾಗ ರಾಜನು ಅವಳನ್ನು ಕಂಡಿ-ದ್ದನು. ರಾಜನ ಕುದುರೆಯು ವೀಥಿಯನ್ನು ತುಳಿಯುತ್ತ ದೂರದಿಂದ ಬರುವಾಗ ಬದಿಯ ಲ್ಲಿಯೆ ನಿಂತು ದಿಟ್ಟಿಸಿ ನೆಟ್ಟ ನೋಟದಿಂದ ಆಕೆ ನೋಡುತ್ತಿದ್ದಳು. ಆತ ಹತ್ತಿರ ಬಂದನೆಂದ ಕೂಡಲೇ ಅಧೀರತೆಯಿಂದ ಎರಡು ಹೆಜ್ಜೆಗಳನ್ನು ಹಿಂದಿಟ್ಟು ಅವನತಮುಖಿಯಾಗಿ ನಿಲ್ಲುತ್ತಿ ದ್ದಳು. ಮತ್ತೊಮ್ಮೆ ಆಕೆ ದಾರಿಯ ಬದಿಯಲ್ಲಿಯು

ಬಯಲಲ್ಲಿ ದನಗಳನ್ನು ಮೇಯಬಿಟ್ಟು ಕರುಗಳೊಡನೆ ಲಲ್ಲೆಯಾಡುವುದನ್ನು ರಾಜನು ಕಂಡಿದ್ದನು.

ಚಂದನಾ ಎಂಬುದು ಅವಳ ಹೆಸರು. ಆಕೆಯ ತಂದೆ ಮುತ್ತಯ್ಯನು ಒಬ್ಬ ಕಡು ಬಡವ, ಮುದುಕ. ಮನೆಯಲ್ಲಿ ಮತ್ತಾರೂ ಇರಲಿಲ್ಲ. ಬಾಲ್ಯದಲ್ಲಿ ತಂದೆಯಿಂದ ಪೋಷಣೆ ಹೊಂದಿದ್ದ ಆಕೆ ಈಗ ತನ್ನ ನಿಶ್ಯಕ್ತನಾದ, ಅಸಹಾಯನಾದ ತಂದೆಗೆ ತಾಯಿಯೋಪಾದಿಯಲ್ಲಿದ್ದಳು; ಅವನ ಶುಶ್ರೂಷೆ ಮಾಡುವುದಲ್ಲದೆ, ಮನೆಗೆಲಸ, ದನಕರುಗಳ ಪಾಲನೆ, ಗದ್ದೆಯ ಬೇಸಾಯ, ನೆರೆಯವರಿಗೆ ಸಹಾಯ ಇವನ್ನು ಶ್ರದ್ಧೆಯಿಂದ ಮಾಡುತ್ತಿದ್ದಳು.

ಆಕೆ ದೃಷ್ಟಿಗೆ ಬಿದ್ದರೆ, ಇನ್ನೊಮ್ಮೆ ನೋಡೋಣವೇ ಎಂಬ ಆಶೆಯನ್ನು ಯಾರಲ್ಲಿಯೂ ಹುಟ್ಟಿಸುವಷ್ಟು ರೂಪವತಿಯಾಗಿದ್ದಳು. ಅವಳು ತನ್ನ ಜೀವಮಾನದಲ್ಲಿ ಉತ್ತಮ ವಸ್ತ್ರಗಳನ್ನು ಕಂಡಿರಲಿಲ್ಲ. ಸ್ವಾದಿಷ್ಟ ಭೋಜ್ಯಗಳನ್ನು ತಿಂದಿರಲಿಲ್ಲ. ಆದರೂ ತಂದೆಯ ಸೇವೆಯಲ್ಲಿ, ನೆರೆಯವರ ಸೇವೆಯಲ್ಲಿ, ಪಕ್ಷಿ–ಪ್ರಾಣಿಗಳ ಮೇಲಿನ ಅನುಕಂಪದಲ್ಲಿ ಆಕೆ ಸಾಕಷ್ಟು ಸುಖವನ್ನು ಸವಿದಿದ್ದಳು; ತೃಪ್ತಿಯನ್ನು ಹೊಂದಿದ್ದಳು. ರಾಜಧಾನಿಯ ಕೆಲವು ಅನುವುಗಳಲ್ಲಿ, ಅರಮನೆಯ ಸಂದುಗಳಲ್ಲಿ, ಅವಳ ಸದ್ಗುಣಗಳ ಸೌಮ್ಯ ಪರಿಮಳವು ಹರಡಿದುದು ಒಂದು ವಿಶೇಷವೇ ಎನ್ನಬೇಕು.

ಅವಳ ಇದೆಲ್ಲ ಇತಿವೃತ್ತವು ಪ್ರದೀಪರಾಜನ ಮನವನ್ನು ಮುಟ್ಟಿತ್ತಾದ್ದರಿಂದ ಅವನು ಅವಳನ್ನು ತನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದನು. ಈ ವಿಷಯದಲ್ಲಿ ಅನ್ಯ ಕೆಲವು ಪ್ರತಿಷ್ಠಿತ ಕುಮಾರಿಯರ ಬಗ್ಗೆ ಯೋಚಿಸಿದ ಹಾಗೆಲ್ಲ ಅವನಿಗೆ ಚಂದನೆಯೇ ತನ್ನ ಹೆಂಡತಿಯಾಗಲು ಯೋಗ್ಯವೆಂದೂ ಆಗುವುದಾದರೆ ಅವಳನ್ನೇ ಮದುವೆಯಾಗಬೇಕೆಂದೂ ನಿಚ್ಚಳವಾಗಿ ಅನಿಸತೊಡಗಿತು. ಅವಳ ಆಕೃತಿಯ ಸ್ಥೂಲ ಹೊಳಹನ್ನು ಮನದಂದು ಅವಳಿಗಾಗಿ ಅನೇಕ ತರಹದ ಆಭರಣಗಳನ್ನೂ ಬೆಲೆಬಾಳುವ ವಸ್ತುಗಳನ್ನೂ ಸಿದ್ಧಪಡಿಸಲು ಹೇಳಿದನು.

ಮದುವೆಯ ದಿನ ನಾಳೆ ಎಂಬುವಾಗಲೂ, ಕನ್ಯಾಸಮೇತ ಯಾವ ರಾಜನ ದಿಬ್ಬಣವೂ ಅರಮನೆಗೆ ಬರಲಿಲ್ಲ! ಅದರಿಂದ ಪುರಪ್ರಮುಖರಿಗೆ ಕಳವಳವಾಯಿತು. ರಾಜನು ತಮ್ಮ ಮನವಿಯ ನಿಮಿತ್ತದಿಂದ ಹಾಸ್ಯ ಮಾಡುತ್ತಿರಬಹುದೆಂಬ ಸಂಶಯವೂ ಒಬ್ಬಿಬ್ಬರಿಗೆ ಸುಳಿಯದಿರಲಿಲ್ಲ. ಕೊನೆಗೆ ದೊರೆಯನ್ನು ಕೇಳಿದಾಗ, "ನಾಳೆ ಬೆಳಗಿನವರೆಗೆ ತಡೆಯಿರಿ. ನಾವೇ ಕನ್ಯೆಯ ಮನೆಗೆ ಹೋಗಿ ಕರೆತರಬೇಕಾಗುತ್ತದೆ," ಎಂದನು.

ಸೂರ್ಯೋದಯವಾಯಿತು. ವಾದ್ಯದ ಮೇಳದವರೂ ಅಲಂಕಾರದ ಸೈನಿಕರೂ ಪುರಪ್ರಮುಖರಲ್ಲಿ ಹಲವರೂ ರಾಜನ ಸಮೀಪವರ್ತಿಗಳಾದ ಕೆಲವು ಸರದಾರರೂ ಅರಮನೆಯ ಬಾಗಿಲಲ್ಲಿ ಕಾಯುತ್ತ ನಿಂತಿದ್ದರು. ರಾಜನು ಕುದುರೆಯನ್ನೇರಿದ ಕೂಡಲೇ ಅವನ ಹಿಂದೆ ಎಲ್ಲರೂ ನಡೆಯುತ್ತ ಸಾಗಿ, ಆ ಹಳ್ಳಿಗೆ ಬಂದರು.

ಚಂದನೆಗೆ ಪಾಪ, ಇದಾವುದರ ಸುಳಿವು ಕೂಡ ಇರಲಿಲ್ಲ. ಆ ದಿನ ತಮ್ಮ ಮಹಾರಾಜನ ಮದುವೆಯ ಉತ್ಸವಾದಿಗಳನ್ನು ನೋಡಲಿಕ್ಕೆಂದು ಆಕೆ ತನ್ನ ಗೆಳತಿಯೊಡನೆ ಹೋಗುವುದೆಂದು ಇಟ್ಟುಕೊಂಡಿದ್ದಳು. ಅದಕ್ಕಾಗಿ ತಂದೆಯ ಸೇವೆಯನ್ನು ಬೇಗ ಮುಗಿಸಿ, ಗೋವುಗಳಿಂದ ಹಾಲನ್ನು ಕರೆದು, ಅಲ್ಲಿಂದ ತಾನು ನದಿಗೆ ಹೋಗಿ ಮಿಂದು ಸಿದ್ಧಳಾಗಿದ್ದಳು. ಅಲ್ಲಲ್ಲಿ ತೂತು ಬಿದ್ದ ತನ್ನ ಸೀರೆಯನ್ನು ಹೊಲಿದು, ಹಿಂದಿನ ದಿನ ಒಗೆದುಕೊಂಡು ಬಂದಿದ್ದಳು.

ರಾಜನು ಅವಳ ಮನೆಯ ಸಮೀಪಕ್ಕೆ ಬಂದಾಗ ಅವಳು ತನ್ನ ಗೆಳತಿಯರ ಮನೆಗೆ ಹೋಗಲೆಂದು ಆದೇ ಹೊರಬಿದ್ದಳು. ರಾಜನು ಅವಳನ್ನು ಕರೆದು, "ನಿನ್ನ ತಂದೆ ಮನೆಯಲ್ಲಿ ಇದ್ದಾರೆಯೋ?" ಎಂದು ಕೇಳಿದನು. ಚಂದನೆಯು ಸಂಕೋಚದಿಂದ ಮುದುಡಿಕೊಂಡರೂ ಆದರದಿಂದ ನಮಸ್ಕರಿಸಿ, "ಮನೆಯಲ್ಲಿ ಇದ್ದಾರೆ," ಎಂದು ಹೇಳಿದಳು.

"ಹಾಗಿದ್ದರೆ ನಾನು ಇಲ್ಲಿ ಅವರಿಗಾಗಿ ಕಾಯುತ್ತಿದ್ದೇನೆ ಎಂದು ತಿಳಿಸು."

ಸೊರಗಿ ಸೋತುಹೋಗಿದ್ದ ಮುತ್ತಯ್ಯನು ಕಾಲೆಳೆದುಕೊಂಡು ಲಗುಬಗೆಯಿಂದ ಬಂದನು. ರಾಜನು ಕುದುರೆಯನ್ನಿಳಿದು, ತುಸು ದೂರ ಅವನ ಕೈಹಿಡಿದು ಕರೆದೊಯ್ದು ತನ್ನ ಮನದ ಇಂಗಿತವನ್ನು ಸ್ವಲ್ಪದರಲ್ಲಿ ಹೇಳಿದನು.

ಮುದಿಯನ ಬಾಯಿಂದ ಮಾತೇ ಹೊರಡಲಿಲ್ಲ. ಮನಸು, ಕನಸಿನಲ್ಲಿಲ್ಲ, ತನ್ನ ಯಾವುದೇ ಮುಂದಿನ ಜನ್ಮದಲ್ಲೂ ನಡೆಯಲಾರದಂತಹ ಕಾರ್ಯಕ್ಕಾಗಿ ರಾಜನು ತನ್ನನ್ನು ಕೇಳಿಕೊಳ್ಳುತ್ತಿದ್ದಾನೆಂದರೆ ಅವನಿಗೆ ನಂಬಿಕೆಯೂ ಆಗಲಿಲ್ಲ. ರಾಜನು ಮತ್ತೊಮ್ಮೆ, ಬೇರೆ ಮಾತುಗಳಲ್ಲಿ ನಿವೇದಿಸಿದಾಗ ಆತನು,

"ಮಹಾರಾಜ, ಎಲ್ಲವೂ ತಮ್ಮದೇ ಇರುವಾಗ, ಮತ್ತು ತಮ್ಮ ಮನಸ್ಸಿಗೆ ಈ ವಿಚಾರ ಬಂದಿರುವಾಗ, ನನ್ನ ಅನುಮತಿಯ ಪ್ರಶ್ನೆಯೇ ಇಲ್ಲ. ಪ್ರಭುಗಳ ಕೋರಿಕೆಯನ್ನು ಪೂರೈಸುವ ಭಾಗ್ಯ ನಮ್ಮದಾಯಿತಲ್ಲ ಎಂಬ ಸಂತೋಷದಲ್ಲಿದ್ದೇನೆ," ಎಂದನು.

"ಹಾಗಿದ್ದರೆ ನಿನ್ನ ಮನೆಯೊಳಗೆ ನಡೆ. ನಾನೂ ಬರುತ್ತೇನೆ. ನಿನ್ನ ಮಗಳನ್ನು ತುಸು ಕೇಳುವದಿದೆ."

ಪರಿವಾರವೆಲ್ಲ ಏನು ನಡೆದಿದೆಯೆಂಬುದು ತಿಳಿಯದೆ, ಗರ ಹೊಡೆದಂತೆ ನಿಂತಿದ್ದಿತು. ಅವರ ಸಮ್ಮುಖದಲ್ಲಿ ಇಬ್ಬರೂ ಮನೆಯೊಳಗೆ ಹೋದರು. ಚಂದನೆಯು ತಂದೆಯ ಬದಿಗೆ ಸರಿದು ನಿಂತಳು.

"ಚಂದನಾ, ನೀನು ನನ್ನ ಹೆಂಡತಿಯಾಗಬೇಕೆಂದು ನಿನ್ನ ತಂದೆಯೂ ನಾನೂ ಕೂಡಿ ನಿರ್ಧರಿಸಿದ್ದೇವೆ. ಇದು ನಿನಗೆ ಸಮ್ಮತವೆಂದು ತಿಳಿಯಲೇ?"

"ಪ್ರಭೂ, ಇದರಲ್ಲಿ ಅವಳನ್ನೇನು ಕೇಳುವುದು? ತನ್ನ ಏಳೇಳು ಜನ್ಮಗಳಲ್ಲಿಯೂ ಇಂಥ ಭಾಗ್ಯ ಒದಗಿ ಬರಲಾರದು. ಅವಳೇನು ಇಲ್ಲವೆನ್ನುವಳು ?"

"ಹಾಗಲ್ಲ. ಇದರಲ್ಲಿ ಒಂದು ಮಾತಿದೆ. ವಿಧೇಯಳಾದ ಹೆಂಡತಿಯು ನನಗೆ ದೊರೆಯಲಿಕ್ಕಿಲ್ಲವೆಂದು ನಾನು ಇಷ್ಟು ದಿನ ಮದುವೆಯಾಗದೇ ಉಳಿದಿದ್ದೆ. ಈಗ ಕೂಡ ಕಾಯಾ ವಾಚಾ ಮನಸಾ ನಾನು ಹೇಳಿದಂತೆ ಕೇಳಿಕೊಂಡು, ನನ್ನ ವಿಚಾರಗಳಿಗೆ, ನನ್ನ ಬೇಕು ಬೇಡಗಳಿಗೆ ತನ್ನ ಮನಸ್ಸನ್ನು ಸಂಪೂರ್ಣವಾಗಿ ಅಧೀನವಾಗಿಸುವುದಾದರೆ ನಾನು ನಿನ್ನನ್ನು ಮದುವೆಯಾಗುವೆ. ನಾನು ನಿನ್ನ ವಿಷಯದಲ್ಲಿ ಹೇಗೆ ನಡೆದುಕೊಂಡರೂ ನೀನು ಅದನ್ನು ತ್ರಿಕರಣಪೂರ್ವಕವಾಗಿ ಅನುಮತಿಸಬೇಕು."

ಚಂದನೆಯು ತನ್ನ ಭಾವೀ ಜೀವನದ ಭಾಗ್ಯದ ಕಲ್ಪನೆಯಿಂದಾಗಿ ತುಂಬಾ ಸಂತಸಗೊಂಡಿದ್ದರೂ ರಾಜನ ಈ ಸೂಚನೆಯಿಂದ ವಿಶೇಷ ಭಯಗೊಂಡಂತೆ ತೋರಲಿಲ್ಲ. ಆಗ ಆಕೆ ಹೀಗೆ ಉತ್ತರಿಸುವ ಧೈರ್ಯ ತೋರಿದಳು : "ಮಹಾರಾಜ, ನಾನು ನಿಮ್ಮ ಹೆಂಡತಿಯಾಗುವ ಮಾತಿರಲಿ, ನಿಮ್ಮ ಪಾದದೂಳಿಗದವರ ಸೇವಕಿಯಾಗಲೂ ಅರ್ಹಳಲ್ಲ. ಆದರೂ ಈ ಹುಲ್ಲುಕಡ್ಡಿಯನ್ನು ನೀವು ಎದೆಯ ಮೇಲೆ ಇರಿಸಿಕೊಳ್ಳಬೇಕೆನ್ನುತ್ತೀರಿ. ಈ ಜೀವ ಸಂಪೂರ್ಣವಾಗಿ ನಿಮ್ಮದು. ಯಾವ ಕಾಲದಲ್ಲೂ ಎಂಥ ವಿಪತ್ತಿನಲ್ಲೂ ನೀವು ನನ್ನ ವಿಷಯದಲ್ಲಿ ನಡೆದುಕೊಂಡ ಬಗೆಗೆ ವಿಕಲ್ಪವನ್ನೆಣಿಸುವುದಿಲ್ಲ. ನಿಮ್ಮ ಮನಸ್ಸಿಗೆ ಒಗ್ಗದ ಯಾವ ಕೆಲಸವನ್ನೂ ನಾನು ಮಾಡುವುದಿಲ್ಲ."

ಪ್ರದೀಪರಾಜನಿಗೆ ಅಷ್ಟಕ್ಕೆಯೇ ಸಮಾಧಾನವಾಯಿತು. ಮೃದುವಾಗಿ ಅವಳ ಬೆರಳನ್ನು ಹಿಡಿದುಕೊಂಡು ಹೊರಗೆ ಬಂದನು. ಮತ್ತು ತನ್ನ ಸರದಾರ ಸ್ನೇಹಿತರ ಬಳಿಗೆ ಬಂದು, "ಮಿತ್ರರೇ, ನನ್ನ ರಾಣಿಯಾಗುವವಳು ಇವಳೇ. ಈ ಮೊದಲೇ ನೀವು ಮಾತು ಕೊಟ್ಟಂತೆ, ಅವಳು ಯಾರೇ ಇರಲಿ ನನ್ನ ವಿಷಯದಲ್ಲಿ ತೋರುವಷ್ಟೇ ಪ್ರೀತ್ಯಾದರಗಳನ್ನು ತೋರಿಸುವಿರೆಂದು ನಂಬಿದ್ದೇನೆ," ಎಂದನು. ಅಲ್ಲಿಂದ ರಾಜನು ತನ್ನ ದಾಸಿಯರನ್ನು ಕರೆದು, ಅವಳಿಗೆ ಅಭ್ಯಂಗ ಸ್ನಾನ ಮಾಡಿಸಿ, ಬೇರೆ ಹೊಸ ವಸ್ತ್ರ, ಅಲಂಕಾರಗಳನ್ನು ತೊಡಿಸಿ ಸಿಂಗರಿಸಲು ಹೇಳಿದನು.

ಕೂಡಲೇ ಐದು ಜನ ದಾಸಿಯರು, ಹತ್ತು ಜನ ಊಳಿಗದವರು ಸಂಗಡ ತಂದಿದ್ದ ಉಪಕರಣಗಳಿಂದ ರಾಜನ ಆಜ್ಞೆಯಂತೆ ಅವಳನ್ನು ಸಿಂಗರಿಸಿ, ಆ ಮನೆಯಿಂದ ಹೊರಗೆ ಕರೆತಂದರು.

ಆಹಾ! ಅದೇನು ಅವಳ ರೂಪ. ಅದೆಂಥ ಮುಖಕಾಂತಿ! ರಾಜನು ಆ ಮುಂಚೆ ಹೇಳಿರದಿದ್ದರೆ, ಅವಳೊಬ್ಬ ಮಹಾ ಸಮ್ರಾಟನ ಕುವರಿ ಇರಬಹುದೆಂದು ಎಲ್ಲರೂ ತಿಳಿಯುತ್ತಿದ್ದರು. ಅಲ್ಲಿ ನೆರೆದಿದ್ದವರೆಲ್ಲರಿಗೂ ಅತ್ಯಾನಂದವಾಯಿತು. ಸಂಭ್ರಮದಿಂದ ಅವಳನ್ನು ನಗರಕ್ಕೆ ಕರತಂದರು. ಮಹಾ ವಿಭವದಿಂದ ನೆರವೇರಿದ ಮದುವೆಯು ಆ ಕಾಲಕ್ಕೆ ಅವಳೊಬ್ಬಳನ್ನು ಬಿಟ್ಟು ಯಾರಿಗೂ ಆಕೆ ಓರ್ವ ಕಡು ಬಡವನ, ಅಶಿಕ್ಷಿತ ಮಗಳು ಎಂದು ಅನಿಸದಂತೆ ಅವಳ ಆಚರಣೆ ಇದ್ದಿತು.

ಬಂದ ಕೆಲವೇ ದಿನಗಳಲ್ಲಿ ಅವಳು ಅರಮನೆಯ ಆಗುಹೋಗುಗಳನ್ನು ಅರಿತುಕೊಂಡು ಎಲ್ಲ ಪರಿವಾರವನ್ನೂ ಅವರವರ ಸ್ಥಾನ-ಯೋಗ್ಯತೆಗಳಿಗೆ ತಕ್ಕಂತೆ ಹಿತದಿಂದ ನಡೆಸಿಕೊಳ್ಳತೊಡಗಿದಳು. ಮಹಾರಾಜನ ನಿತ್ಯಜೀವನದಲ್ಲಿಯ ಬೇಕು, ಬೇಡಗಳನ್ನು ಅರಿತು ಅದರಂತೆ ನಡೆಯುತ್ತಿದ್ದಳು. ಅವಳ ಉದಾರದೃಷ್ಟಿಯ ಪರಿಣಾಮವಾಗಿ ಆ ರಾಜ್ಯದ ಪ್ರಜೆಗಳಲ್ಲಷ್ಟೇ ಅಲ್ಲದೆ ಸುತ್ತಲಿನ ಸೀಮೆಯಲ್ಲಿಯೂ ಅವಳ ಹೆಸರು ಜನಜನಿತವಾಯಿತು. ರಾಜಕಾರಣದಲ್ಲಿಯೂ ಅವಳು ಪತಿಯ ಹಿಂದಿದ್ದುಕೊಂಡು ಸಲಹೆಯನ್ನು ನೀಡುತ್ತಿದ್ದಳು. ಸರದಾರರಲ್ಲಿ ಭಿನ್ನ ಮತವುಂಟಾಗಿ ಪರಿಸ್ಥಿತಿಯು ವಿಕೋಪಕ್ಕೆ ಹೋದಾಗ ರಾಣಿಯು ತನ್ನ ಸಮತೋಲನ ದೃಷ್ಟಿಯಿಂದಲೂ ಮೃದು ವಚನದಿಂದಲೂ ನಿರ್ಣಯವನ್ನು ಕೊಡುತ್ತಿದ್ದಳು. ಅದು ಎಲ್ಲರಿಗೂ ಮಾನ್ಯವಾಗಿ ಅದರಂತೆ ನಡೆದುಕೊಳ್ಳುತ್ತಿದ್ದರು.

ಮುಂದೆ ಕೆಲ ದಿನಗಳಲ್ಲಿ ಚಂದನೆಯು ಪ್ರಸೂತಿಯಾದಳು. ತನಗಿಂತ ಸುಂದರಿಯಾದ ಕುವರಿಯನ್ನು ಹೆತ್ತಳು. ಯುವರಾಜ-ಕುಮಾರನು ಜನಿಸಲೆಂದು ಪ್ರಜೆಗಳ ಆಸೆ ಇತ್ತಾದರೂ ಅವರ ಸಂಭ್ರಮಕ್ಕೆ ಕೊರತೆಯೇನಿ-ರಲಿಲ್ಲ. ಅದರಲ್ಲಿಯೇ ಎರಡು ವರ್ಷಗಳು ಉರುಳಿದುವು.

ಮನುಷ್ಯ ಸ್ವಭಾವವೊಂದು ವಿಚಿತ್ರ! ತಾನು ಎಣಿಸಿದ್ದಕ್ಕಿಂತಲೂ ವಿಧೇಯಳಾದ, ಉತ್ತಮಳಾದ ಭಾರ್ಯೆಯು ದೊರೆತಾಗ ರಾಜನಿಗೆ ಅವಳನ್ನು ಇನ್ನಷ್ಟು ಒರೆಗೆ ಹಚ್ಚಿ ಪರೀಕ್ಷಿಸುವ ಬುದ್ಧಿಯುಂಟಾಯಿತು. ಆ ಬುದ್ಧಿ ದಿನದಿನಕ್ಕೆ ಬೆಳೆಯಿತು. ದುರ್ದಮನೀಯವಾದ ಆ ಆಸೆಯನ್ನು ಹೃದಯದ ಅತಿ ಅಂತರಾಳದಲ್ಲಿ ಹುದುಗಿಸಿಕೊಂಡು, ಒಂದು ದಿನ ರಾಜನು ಮನಸ್ಸಿಗೆ ಬಹಳ ಬೇಸರವಾದವರಂತೆ ಮುಖವನ್ನು ಮಾಡಿಕೊಂಡು ಚಂದನೆಗೆ ಹೇಳಿದನು:

"ಕಡು ಬಡತನದಲ್ಲಿ ಬೆಳೆದ ನೀನು ಈ ಉನ್ನತ ಪದವಿಗೆ, ಅದಕ್ಕೆ ತಕ್ಕಂತೆ ನಿನ್ನ ಗುಣ ಗೌರವವನ್ನು ಬೆಳೆಸಿಕೊಂಡು ಬಂದಿದ್ದೀಯೆ. ಮಗುವಿನ ತಾಯಿಯಾದ ಮೇಲಂತೂ ನೀನು ನನಗೆ ಸಾಕಷ್ಟು ಪ್ರೀತ್ಯಾಸ್ಪದಳಾಗಿರುವೆ. ನಮ್ಮ ಮಟ್ಟಿಗೆ ಎಲ್ಲವೂ ಸರಿ ಇದ್ದರೂ ನನ್ನ ಪ್ರಜೆಗಳೂ ಸರದಾರರೂ ಹಾಗೆ ತಿಳಿದಿಲ್ಲ. ನೀನು ಕೀಳು ತರಗತಿಯ ಕುಟುಂಬದಿಂದ ಬಂದವಳೆಂಬುದನ್ನು ಅವರು ಮರೆತಿಲ್ಲ. ಅಂಥವಳ ಮಗಳನ್ನು ರಾ ಜ ಕು ವ ರಿ ಯಾ ಗಿ ಹೇಗೆ ಸ್ವೀಕರಿಸುವುದು ಎಂದು ಆಡಿಕೊಳ್ಳುತ್ತಿದ್ದಾರೆ. ಕೆಲವರಂತೂ ಬಹಿರಂಗವಾಗಿ ವಾದ ಹಾಕುತ್ತಿದ್ದಾರೆ. ನಮ್ಮ ವಂಶವು ಎಂದಿನಿಂದಲೂ ಪ್ರಜಾವತ್ಸಲವೆಂದು ಹೆಸರುವಾಸಿಯಾದದ್ದಿದೆ. ಆದುದರಿಂದ ಅವರ ವಿರೋಧವನ್ನು ನಾನು ಕಟ್ಟಿಕೊಳ್ಳಬೇಕೆಂದು ನೀನೂ ಅಪೇಕ್ಷಿಸಲಾರೆ. ಕಾರಣ ನಿನ್ನ ಮಗುವನ್ನು ನನ್ನ ವಶಕ್ಕೆ ಒಪ್ಪಿಸು. ಅದರ ಹೇಳಹೆಸರಿಲ್ಲದಂತೆ ಮಾಡುವುದು ತಂದೆಯಾದ ನನಗೂ ಮನವೊಪ್ಪತಕ್ಕ ಮಾತಲ್ಲ. ರಾಜಧರ್ಮಕ್ಕಾಗಿ ಹಾ ಗೆ ಮಾಡಬೇಕಾಗಿ ಬಂದಿದೆ, ಅದೂ ನೀನು ಒಪ್ಪಿದರೆ."

ಪತಿಯ ಈ ಮಾತುಗಳು ಶಲ್ಯಸಮಾನವಾಗಿದ್ದರೂ ಆಕೆಯ ಮುಖವು ಇನಿತೂ ವಿಕಾರಗೊಳ್ಳಲಿಲ್ಲ. ಒಳಗಿನ ಭಾವನೆಗಳನ್ನು ಬಿಟ್ಟುಕೊಡಲಿಲ್ಲ. ಆಕೆ ಉತ್ತರಿಸಿದಳು:

"ನಿಮ್ಮದಲ್ಲದ್ದು ನನ್ನಲ್ಲಿ ಏನೂ ಇಲ್ಲ. ನನ್ನಂತೆ ಈ ಮಗುವಿಗೂ ನೀವೇ ಒಡೆಯರು. ನಿಮ್ಮ ಹಿತಸಂಬಂಧಕ್ಕೆ ಧಕ್ಕೆ ತಟ್ಟಿರುವಾಗ ನಾನು ಒಪ್ಪದೇ ಉಳಿಯಲೆ? ಈ ಮಗುವನ್ನು ಅಗತ್ಯವಾಗಿ ನಿಮ್ಮ ವಶಕ್ಕೆ ಒಪ್ಪಿಸುತ್ತೇನೆ. ನಿಮಗೆ ಸರಿ ಕಂಡಂತೆ ಮಾಡಿರಿ."

ರಾಣಿಯ ಉತ್ತರದಿಂದ ರಾಜನಿಗೆ ತೃಪ್ತಿಯಾದರೂ ಅದನ್ನು ಹೊರಗೆ ತೋರಗೊಡದೆ ತ್ರಸ್ತಮುಖನಾಗಿ ಅಲ್ಲಿಂದ ಹೊರಬಿದ್ದನು. ಮತ್ತು ತನ್ನ ಒಬ್ಬ ಸ್ವಾಮಿನಿಷ್ಠ ಸರದಾರನನ್ನು ಕರೆದು, ಗುಪ್ತವಾಗಿ ನಾಲ್ಕು ಮಾತು ಹೇಳಿ ರಾಣಿಯ ಬಳಿಗೆ ಕಳುಹಿದನು. ಆ ಸ್ವಾಮಿನಿಷ್ಠನು ಬಂದು,

"ಮಹಾರಾಣಿಯವರು ನಾನು ಬಂದ ಕೆಲಸಕ್ಕಾಗಿ ಕ್ಷಮಿಸುವರೆಂದು ನಂಬಿದ್ದೇನೆ. ನಿಮ್ಮಂತೆ ನನಗೂ ಸ್ವಾಮಿಯಾದವನ ಕಟುವಾದ ಆಜ್ಞೆಯನ್ನು ಶಿರದಲ್ಲಿ ಧರಿಸಿಕೊಂಡು ತಮ್ಮ ಕಡೆಗೆ ಬಂದಿದ್ದೇನೆ. ಕರ್ತವ್ಯವು ಎಷ್ಟು ಕಠೋರವಾಗಿದ್ದರೂ ಅದನ್ನು ಪಾಲಿಸಲೇಬೇಕಾದುದೆಂಬುದು ತಮಗೆ ಅರಿಯದ್ದಲ್ಲ. ನಿಮ್ಮ ಮಗುವನ್ನು ಕೊಂಡೊಯ್ದು, ಅವರು ಆಜ್ಞೆ ಮಾಡಿದಂತೆ ಮುಂದಿನ ಕೆಲಸವನ್ನು ಕೈಕೊಳ್ಳುವ ದುರ್ಧರ ಪ್ರಸಂಗ ನನ್ನ ಪಾಲಿಗೆ ಬಂದಿದೆ," ಎಂದನು.

ಚಂದನೆಯು ಗಂಡನ ಮಾತುಗಳನ್ನು ನೆನೆದಳು. ಮಗುವಿನ ಮೇಲಣ ವಾತ್ಸಲ್ಯವನ್ನು ಕರ್ತವ್ಯವೆಂಬ ಬಂಡೆಗಲ್ಲಿನ ಮೇಲೆ ಬೀಸಾಡಬೇಕೆಂಬುದು ಅವಳಿಗೆ ಸಹಜಸ್ಫೂರ್ತವಾಯಿತು. ಆಕೆ ಒಳಕೋಣೆಗೆ ಹೋಗಿ ಮಗುವನ್ನು ತಾನೇ ಕರೆತಂದಳು; ಅವನಿಗೆ ಒಪ್ಪಿಸಿದಳು. ಆಗ ಆಕೆಯ ಕಣ್ಣಲ್ಲಿ ನೀರು ಬರಲಿಲ್ಲ; ಧ್ವನಿ ಗದ್ಗದಿತವಾಗಲಿಲ್ಲ; ಕೆಳದುಟಿಯು ಅದುರಲಿಲ್ಲ. ಆದರೆ ತಡೆಯಲಾರದೆ ಆ ಸ್ವಾಮಿನಿಷ್ಠನಿಗೆ ಒಂದೇ ಮಾತನ್ನು ಹೇಳಿದಳು:

"ಅಪ್ಪಾ, ನನ್ನದೊಂದು ವಿನಂತಿ ಇದೆ. ಈ ಕೋಮಲ ಶರೀರಿಯನ್ನು ಅಡವಿಯಲ್ಲಿ ನರಿ–ನಾಯಿಗಳ ಪಾಲಿಗೆ ಬಿಡಬೇಡ. ಇನ್ನೇನು ಬೇಕಾದರೂ ಮಾಡು."

ಆ ಸ್ವಾಮಿನಿಷ್ಠನ ಹೃದಯವು ತತ್ತರಿಸಿತು. ಕೂಡಲೇ ಮುಖವನ್ನು ತಿರುಗಿಸಿ ಹೊರಟವನೆ ಪ್ರದೀಪರಾಜನ ಬಳಿಗೆ ಬಂದು ಎಲ್ಲವನ್ನೂ ನಿವೇದಿಸಿದನು. ರಾಜನು ಮಗುವಿಗೆ ತಾನು ಹೊದ್ದ ಶಾಲನ್ನೆ ಮೈತುಂಬ ಹೊದಿಸಿದನು. ನಿದ್ದೆಯಲ್ಲಿ ಅದ್ದಿ ತೆಗೆದ ಅದರ ಮುಖಮಾಟವನ್ನು ಒಮ್ಮೆ ಮುದ್ದಿಸಿದನು. ಕೂಡಲೇ ಆ ಸ್ವಾಮಿನಿಷ್ಠನಿಗೆ ಅಶ್ವಾರೂಢನಾಗಿ ಬರಲು ತಿಳಿಸಿ ಆ ಮಗುವನ್ನು ಬಹುದೂರದಲ್ಲಿರುವ ತನ್ನ ಅಕ್ಕನ ರಾಜ್ಯಕ್ಕೆ ಕರೆದೊಯ್ಯಬೇಕೆಂದೂ ಬೆಳಗು ಹರಿಯುವುದಕ್ಕೆ ಮುಂಚೆಯೇ ಯಾರಿಗೂ ತಿಳಿಯದಂತೆ ಅವಳಿಗೆ ಒಪ್ಪಿಸಬೇಕೆಂದೂ ಅವಳ ಗಂಡನಿಗೂ ಈ ಮಗು ಯಾರದೆಂದು ಗೊತ್ತಾಗಬಾರದೆಂದೂ ಯೋಗ್ಯ ಸಮಯದಲ್ಲಿ ತಾನು ಹೇಳಿ ಕಳಿಸುವ ವರೆಗೆ ಅವಳಲ್ಲಿಯೆ ಮಗುವು ಇರಬೇಕೆಂದೂ ಆಜ್ಞೆ ವಿಧಿಸಿದನು. ಅದರಂತೆ ಆ ಸ್ವಾಮಿನಿಷ್ಠನು ತನ್ನ ಕರ್ತವ್ಯವನ್ನು ನೆರವೇರಿಸುವುದಕ್ಕೂ ಪ್ರದೀಪರಾಜನ ಅಕ್ಕನು ಮಗುವನ್ನು ಅತ್ಯಂತ ಆದರದಿಂದ ಬರಮಾಡಿಕೊಂಡು ತಮ್ಮನ ಇಂಗಿತವನ್ನು ಕಾಪಾಡುವುದಕ್ಕೂ ಸರಿಹೋಯಿತು.

ಇತ್ತ ರಾಣಿಯು ತನ್ನ ಮಗು ಸತ್ತುಹೋಯಿತೆಂದು ಭಾವಿಸಿದಳು. ರಾಜನಾದರೂ ಅದರ ಬಗ್ಗೆ ಅವಳ ಮುಂದೆ ಚಕಾರ ಶಬ್ದವನ್ನೆತ್ತಲಿಲ್ಲ. ಅವಳ ನಡತೆಯಲ್ಲಿ ಬದಲಾವಣೆಯಾಗಿದೆಯೆ ಎಂದು ಪರೀಕ್ಷಿಸಿದ. ಆಕೆಯು ಮಗು ಹುಟ್ಟದಿದ್ದ ಪೂರ್ವದಲ್ಲಿ ಯಾವ ರೀತಿಯಾಗಿ ಪತಿಯೊಂದಿಗೆ ನಡೆದುಕೊಳ್ಳುತ್ತಿದ್ದಳೋ ಅದೇ ರೀತಿಯಾಗಿ ವರ್ತಿಸಿದಳು. ಮಗುವಿನ ಹೆಸರನ್ನು ಅವಳು ಯಾರ ಮುಂದೆಯೂ ಎತ್ತಿರಲಿಲ್ಲ.

ಹೀಗೆಯೆ ನಾಲ್ಕು ವರ್ಷಗಳು ಕಳೆದುವು. ಅದೇ ಪರಸ್ಪರ ಪ್ರೀತಿ, ಅದೇ ಬಗೆಯ ಸುಖ ಶಾಂತಿಗಳಿಂದ ದಿನಗಳು ಉರುಳತೊಡಗಿದ್ದುವು. ಅವಳ ಸಹನೆಗೆ ತಕ್ಕ ಪ್ರತಿಫಲವೆಂಬಂತೆ ರಾಣಿಯು ಮತ್ತೆ ಗರ್ಭವನ್ನು ಧಾರಣಮಾಡಿದಳು. ಈ ಸಲ ಅವಳು ಹೆತ್ತದ್ದು ಸುರಸುಂದರ ಗಂಡು ಮಗುವನ್ನು. ರಾಜ್ಯದಲ್ಲೆಲ್ಲ ಸಂತಸದ ಸಂಭ್ರಮವು ಕೋಡಿವರಿದು ಹರಿಯಿತು. ರಾಜಪುರೋಹಿತರು ಮಗುವಿನ ಕುಂಡಲಿಯನ್ನು ಗುಣಿಸಿ, ಅದಕ್ಕೆ ಚಕ್ರವರ್ತಿ ಲಕ್ಷಣಗಳಿವೆಯೆಂದು ಸಾರಿದರು. ಸರದಾರರು ಒಬ್ಬೊಬ್ಬರಾಗಿ, ಪ್ರಜಾಜನರು ಗುಂಪುಗುಂಪಾಗಿ ಬಂದು, ಮಗುವಿನ ದರ್ಶನವನ್ನು ಪಡೆದು, ಅದರ ತಾಯಿಯನ್ನು ಮನಸಾರೆ ಅಭಿನಂದಿಸಿದರು.

ಮಗುವು ತನ್ನ ಬಾಲಲೀಲೆಗಳಿಂದ ತಾಯಿ

# ಹೊಂಗನಸಿನ ಹೆಬ್ಬಾಗಿಲು

ಮೋಹಕತೆ ಹೆಂಗೆಳೆಯರ ಹೊಂಗನಸು. ಆ ಕನಸಿನ ಲೋಕಕ್ಕೆ ತೆರೆದೊಯ್ಯುವ ಹೆಬ್ಬಾಗಿಲು, ಮಹದೇವ್ ಬಟ್ಟೆಗಳು. ಮಹದೇವ್ ಬಟ್ಟೆಗಳನ್ನು ಉಪಯೋಗಿಸಿ ಮೋಹಕತೆಯಿಂದ ಮೆರೆಯಿರಿ.




ಮಹದೇವ್
ಟೆಕ್ಸ್‌ಟೈಲ್ ಮಿಲ್ಸ್
ಮುಂಬೈ

Rachana MTM 1a Kan

ಮೈಸೂರು ರಾಜ್ಯಕ್ಕೆ ಏಜಂಟರು

ಎಮ್. ಕೆ. ಏಜೆನ್ಸೀಜ್, ಬೆಳಗಾಂವಿಗಲ್ಲಿ, ಹುಬ್ಬಳ್ಳಿ.

ಯನ್ನು ಸಂತುಷ್ಟಗೊಳಿಸುತ್ತ ಎರಡು ವರ್ಷಗಳನ್ನು ದಾಟಿರುವಾಗ ರಾಜನಿಗೆ ಮತ್ತೆ ತನ್ನ ಪತ್ನಿಯನ್ನು ಪರೀಕ್ಷಿಸುವ ಹಳೆಯ ಆಸೆ ತಲೆಯೆತ್ತಿತು. ಅವನು ರಾಣಿಯ ಕೋಣೆಗೆ ಬಂದು ಹೇಳಿದನು:

"ನಮ್ಮ ಮದುವೆಯ ಬಗ್ಗೆ ಅನೇಕ ಜನ ಸರದಾರರು ತಪ್ಪು ಅಭಿಪ್ರಾಯವನ್ನು ಮಾಡಿಕೊಂಡು ಅದು ಹೇಗೆ ವಿರೋಧಕ್ಕಾಗಿ ಕಾಯುತ್ತಿದ್ದಾರೆಂಬುದನ್ನು ನೀನು ಬಲ್ಲೆ. ಈಗಂತೂ ನೀನು ರಾಜಕುಮಾರಿಕರ ತಾಯಿಯೂ ಆಗಿರುವುದರಿಂದ ಅವರ ದುರಭಿಮಾನಕ್ಕೆ ಅಂಕುಶವಿಟ್ಟಂತಾಗಿದೆ. ಈ ಬಾರಿ ನೀನು ಗಂಡುಮಗನ ತಾಯಿಯಾಗಿರುವುದರಿಂದ ಅವರೇನೆನ್ನುತ್ತಿದ್ದಾರೆ ಗೊತ್ತೆ ?

"'ನಮ್ಮ ರಾಜರು ತೀರಿಕೊಂಡ ಮೇಲೆ ಹೀನ ಕುಲದವನೊಬ್ಬ ರಾಜನಾಗಿ ಬರುತ್ತಾನೆ. ಅವನ ಹಳ್ಳಿಗಾಡಿನ ಅಜ್ಜ ಮಹಾಮಂತ್ರಿಯಾಗಿರುತ್ತಾನೆ.' ಓ ದೇವರೇ, ದಿನವೂ ಇಂತಹ ಮಾತುಗಳನ್ನು ಕೇಳಿ ಕೇಳಿ ನನಗೆ ಸಾಕಾಗಿಹೋಗಿದೆ. ನನ್ನ ಮನಶ್ಶಾಂತಿಯೆಂಬುದು ಕದಡಿಹೋಗಿದೆ. ಆ ಪ್ರಕೋಪದಲ್ಲಿ ನನ್ನ ಸರದಾರರು ನನ್ನ ಜೀವಕ್ಕೂ ಧಕ್ಕೆ ತರಲು ಹೇಸಲಿಕ್ಕಿಲ್ಲ. ಈ ಮಗುವನ್ನೂ ನಾನು ಕೊಂಡೊಯ್ದು, ಅವರ ಅಕ್ಕನತ್ತ ಕಳಿಸುವುದು ಅನಿವಾರ್ಯವೆಂದೇ ಕಾಣುತ್ತದೆ. ಇದರಿಂದ ನಿನ್ನ ದುಃಖದ ಭಾರವು ಮೇರೆ ಮೀರಿದರೂ ನೀನು ಸಹಿಸಿಕೊಳ್ಳಬೇಕಾಗುವುದು."

ಅತ್ತ ಮಗಳೆ ಗತಿ ಹಾಗಾಯಿತು. ಮಗನೂ ಅದೇ ದಾರಿ ಹಿಡಿಯಲಿದ್ದಾನೆಂಬ ವಿಚಾರದಿಂದ ಆ ಮಾತೆಯ ಹೃದಯವು ಅದೆಷ್ಟರ ಮಟ್ಟಿಗೆ




ಸೂಪರ್ ಸರ್ಫ್‌ನಿಂದ ಒಂದು ಸಲ
ಒಗೆದದ್ದಾದರೆ ಅದು ಇತರ ಯಾವುದೇ
ವಾಶಿಂಗ್ ಪೌಡರಿನಿಂದ ಒಗೆದದ್ದಕ್ಕಿಂತ
ಅಧಿಕ ಬಿಳುಪನ್ನು ಕೊಡುತ್ತದೆ!

ಸೂಪರ್ ಸರ್ಫ್ ಅಪರಿಮಿತ
ಬೆಳ್ಳಗೆ ಒಗೆಯುತ್ತದೆ

ತತ್ತರಿಸಿರಬೇಕೆಂದು ಊಹಿಸುವುದೂ ಕಷ್ಟ. ಪರುಷ ಭಾವನೆಗಳಿಂದ ಕೂಡಿದ ಗಟ್ಟಿಮನಸ್ಸಿನ ಗಂಡಸಿಗೂ ಕೂಡ ಎಳೆಯ ಮಕ್ಕಳನ್ನು ಬಲಿ ಕೊಡುವುದೆಂದರೆ ಕರುಳು ಕುದಿಯುತ್ತದೆ, ಅಂಥದ್ದು ಅನುಕಂಪೆಯ ಸಾಕಾರ ಮೂರ್ತಿಯಾದ ಆ ಸಾಧ್ವಿಯ ಮನಸ್ಥಿತಿ ಏನಾಗಿರಬೇಡ? ಆದರೂ ಆಕೆ ತನ್ನ ಗಂಡನಿಗೆ ಕೊಟ್ಟ ಉತ್ತರವೇನು? ಎಲೈ ಸಮಸ್ತ ವನಿತಾವೃಂದವೇ, ಅಗತ್ಯವಾಗಿ ಅದನ್ನು ಕೇಳಿ:

"ಮಹಾರಾಜ, ತಮ್ಮ ಜೀವಿತಾರ್ಥಕ್ಕಾಗಿ ಈ ದೇಹ-ಜೀವಗಳಿರುವಾಗ, ತಮಗೆ ಮನವೊಪ್ಪಿದ ಮಾತನ್ನು ವಿರೋಧಿಸುವುದಂತಿರಲಿ ಮನಸ್ಸಿನಲ್ಲಿ ಅಸಮಾಧಾನವನ್ನು ಕೂಡ ನಾನು ಸರ್ವಥಾ ಹಿಡಿಯಲಾರೆ. ಬದಲಾಗಿ ಇದಕ್ಕೆ ನನ್ನ ಸಂಪೂರ್ಣ ಸಹಕಾರವಿದೆ. ಸ್ತ್ರೀಗೆ ಮೊದಲು ಪತಿ; ಆ ನಂತರ ಸುತ-ಸುತೆಯರು. ನಿಮ್ಮ ಪ್ರೀತಿಯೇ ನನಗೆ ಜೀವನಾಧಾರ. ಓ! ನಿಮ್ಮ ಮನಸ್ಸಿನಲ್ಲಿ ವಿಚಾರ ಮೂಡುತ್ತಿರುವಾಗಲೇ ಅದನ್ನು ತಿಳಿದುಕೊಳ್ಳುವ ಶಕ್ತಿಯನ್ನು ದೇವರು ನನಗೆ ಕರುಣಿಸಿದ್ದರೆ, ನಾನು, ನೀವು ಅದನ್ನು ಒಡನುಡಿಯುವ ಮುಂಚೆಯೇ ನೆರವೇರಿಸಿ ಕೃತಾರ್ಥಳಾಗುತ್ತಿದ್ದೆ. ಅವಶ್ಯವಾಗಿ ಈ ಮಗುವನ್ನೂ ಕೊಂಡೊಯ್ಯಿರಿ. ಮನಸ್ಸಿನಲ್ಲಿ ನನ್ನ ಬಗ್ಗೆ ಯಾವ ವಿಕಲ್ಪವನ್ನೂ ಎಣಿಸಬೇಡಿರಿ."

ಅವಳ ದೃಢ ಮನಸ್ಸನ್ನೂ ಸದ್ಗುಣಸರ್ವಸ್ವವನ್ನೂ ಗ್ರಹಿಸಿದವನಾಗಿ ರಾಜನ ಮನಸ್ಸು ಒಳಗೊಳಗೆ ಆತ್ಯಂತಿಕ ಸಂತೋಷವನ್ನು ಅನುಭವಿಸಿತು. ಅವಳಿಗೆ ಉತ್ತರವನ್ನು ಹೇಳುವುದಕ್ಕೆ ಅವನಿಗೆ ಬಾಯಿ ಬರಲಿಲ್ಲ. ಹಿಂದಿನಂತೆ ಮುಖವನ್ನು ಕಿರಿದು ಮಾಡಿಕೊಂಡು ಅವನತ ಭಾವದಿಂದ ಹೊರಬಿದ್ದನು, ಮತ್ತು ಅದೇ ಸ್ವಾಮಿನಿಷ್ಠನನ್ನು ಕರೆದು ಗುಪ್ತವಾಗಿ ಹೇಳಬೇಕಾದದ್ದನ್ನು ಹೇಳಿದನು. ಆಗ ಆ ಸ್ವಾಮಿನಿಷ್ಠನು ಹಿಂದಿನಂತೆಯೇ ಅವಳ ಬಳಿಗೆ ಬಂದು, ತನ್ನ ಗುರುತರವಾದ ಸ್ವಾಮಿಕಾರ್ಯವನ್ನು ವಿವರಿಸಿ ಮಗುವನ್ನು ಬೇಡಿದನು. ಆ ಸುರೂಪಿ ಮಗುವನ್ನು ಅವನ ಕೈಗೆ ಒಪ್ಪಿಸು

ಗದ್ಗದಿತವಾಯಿತೆ? ಕಳದುಟಿ ಅದುರಿತೆ? ಇಲ್ಲ, ಇಲ್ಲ. ಆದರೆ ಒಂದೇ ಅದೇ ಮಾತನ್ನು ಹೇಳಿದಳು.

"ಅಪ್ಪಾ, ಈ ಕೋಮಲ ಶರೀರವನ್ನು ಅಡವಿಯ ನರಿ-ನಾಯಿಗಳ ಪಾಲಿಗೆ ಬಿಡಬೇಡ. ಇನ್ನೇನು ಬೇಕಾದರೂ ಮಾಡು."

ಯಥಾಪ್ರಕಾರ ಈ ಗಂಡು ಮಗುವೂ ತನ್ನ ಅಕ್ಕನನ್ನು ಸೇರಿತು. ಅವರಿಬ್ಬರ ಸೋದರತ್ತೆಯು ಇವನನ್ನೂ ಆದರದಿಂದ ಬರಮಾಡಿಕೊಂಡಳು. ಅದರ ಜೊತೆಗೆ ತನ್ನ ತಮ್ಮನ ಗುಪಿತವನ್ನು ಒಳಗಿರಿಸಿಕೊಂಡಳು. ತನ್ನ ಪತಿಗೆ ಯೋಗ್ಯ ಸಮಯದಲ್ಲಿ ಸಂಗತಿಯನ್ನು ಹೇಳುವುದಾಗಿಯೂ, ಆ ಮಧ್ಯೆ ಗುಟ್ಟನ್ನು ರಟ್ಟುಮಾಡುವುದಕ್ಕಾಗಿ ಒತ್ತಾಯಿಸಬಾರದೆಂದೂ ವಿನಂತಿಸಿದಳು. ಪ್ರದೀಪರಾಜನಿಗೆ ಮತ್ತೊಮ್ಮೆ ಸೋಲು ಉಂಟಾಗಿತ್ತು. ಅವಳೊಡನೆ ಮಾತನಾಡುವಾಗಲೆಲ್ಲ ಅವಳ ಮಕ್ಕಳನ್ನು 'ಬಲಿ ತೆಗೆದುಕೊಂಡ' ತನ್ನ ಬಗ್ಗೆ ಅವಳ ಹೃದಯದಲ್ಲಿ ಅನಾದರವಿದೆಯೆ ಎಂದು ಪರೀಕ್ಷಿಸುತ್ತಿದ್ದ. ಆದರೆ ಅದರ ಒಂದು ಸಣ್ಣ ಸುಳಿಯೂ ಆತನಿಗೆ ಸಿಗಲಿಲ್ಲ. ಅದೇ ಪ್ರೀತಿ, ಅದೇ ಆದರ, ಅದೇ ಮುನ್ನಿನ ನಗುಮುಖ ಎಂದಿಗಿಂತ ಹೆಚ್ಚಾದ ಕಾರ್ಯತತ್ಪರತೆ, ತನ್ನದೆನ್ನುವ ಮನಸ್ಸನ್ನು ಎತ್ತೊಗೆದು, ಪತಿಯ ಮನಸ್ಸಿನ, ವಿಚಾರಗಳ ಅರ್ಥವನ್ನು ವಿನಯದಿಂದ ಕೇಳಿ, ಪಕ್ಕಿನಿಂದ ಪಡೆದವಳಂತೆ ಅವಳ ಬಾಳ್ವೆ ಇದ್ದಿತು.

ವರುಷಗಳು ಒಂದೊಂದಾಗಿ ಉರುಳಿದವು. ಅದೀಗ ನಿಜವಾಗಿಯೂ ರಾಜನ ಬಗ್ಗೆ ನಿಂದೆಯ ಮಾತುಗಳು ಕೇಳಬರತೊಡಗಿದುವು! ಕೀಳ-ದರ್ಜೆಯ ಕನ್ಯೆಯನ್ನು ಮದುವೆಯಾಗಿ, ಕೊನೆಗೆ ಅವಳಿಂದ ಮಕ್ಕಳನ್ನು ಪಡೆದಾಗ ತನ್ನ ಉಚ್ಚವಂಶಕ್ಕೆ ಕಲಂಕ ತಟ್ಟೀತೆಂದು ಬೇಸರಗೊಂಡು ಮಕ್ಕಳನ್ನು ಈ ಲೋಕದಿಂದ ಇಲ್ಲವಾಗಿಸಿದ್ದಾನೆ, ಎಂಬುದ ಆ ಕುಹಕದ ಮಾತುಗಳ ಸಾರವಾಗಿದ್ದಿತು. ಹೆಂಡತಿಯನ್ನೂ ನೀಗುತ್ತಿದ್ದ; ಕೇವಲ ತನ್ನ ಸದ್ಗುಣ, ಸಹನೆಗಳಿಂದಾಗಿ ಆ ಸಾಧ್ವಿ ಪಾರಾಗಿದ್ದಾಳೆ— ಎಂಬುದು ಆ ಮಾತುಗಳ

# ಮೈಕ್ರೋಫೈನ್ಡ್ ಆಸ್ಪ್ರೋ

## ಅಧಿಕ ಶೀಘ್ರವಾಗಿ ಕರಗುತ್ತದೆ, ಅಧಿಕ ಶೀಘ್ರವಾಗಿ ಹೀರಲ್ಪಡುತ್ತದೆ.

ಅದ್ದರಿಂದಲೇ ಅದು ನೋವು ನಿವಾರಿಸುವ ಸಾಮಾನ್ಯ ಮಾತ್ರೆಗಳಿಗಿಂತ

**ರಡರಷ್ಟು ಹೆಚ್ಚು ಶೀಘ್ರವಾಗಿ ನೋವನ್ನು ಉಪಶಮನಗೊಳಿಸುತ್ತದೆ!**








ಆಸ್ಪ್ರೋದಲ್ಲಿ ಸೂಕ್ಷ್ಮ ಕಣಗಳು ಬಲು ವೇಗ ಹೀರಲ್ಪಡುತ್ತವೆ, ನೋವಿನ ಕೇಂದ್ರ ಸ್ಥಾನವನ್ನು ಅಧಿಕ ಶೀಘ್ರವಾಗಿ ತಲುಪುತ್ತವೆ. ನೋವನ್ನು ಬಲು ವೇಗ ಉಪಶಮನಗೊಳಿಸುತ್ತವೆ. ಈ ಗುಣ ಸಾಮಾನ್ಯ ಮಾತ್ರೆಗಳಲ್ಲಿಲ್ಲ.

ತಲೆನೋವು • ಮೈಕೈನೋವು • ಶೀತ • ಫ್ಲೂ • ಸಂದುನೋವು • ಗಂಟಲುನೋವು • ಹಲ್ಲುನೋವು—ಇವುಗಳಿಗೆ ಮೈಕ್ರೋಫೈನ್ಡ್ ಆಸ್ಪ್ರೋ ಸೇವಿಸಿರಿ.

ಪ್ರಮಾಣ: ದೊಡ್ಡವರಿಗೆ—2 ಮಾತ್ರೆಗಳು. ಅವಶ್ಯವಿದ್ದರೆ ಪುನಃ ತೆಗೆದುಕೊಳ್ಳಿರಿ. ಮಕ್ಕಳಿಗೆ—ಒಂದು ಮಾತ್ರೆ ಅಥವಾ ನಿಮ್ಮ ಡಾಕ್ಟರರ ಸಲಹೆಯ ಪ್ರಕಾರ.

## ಕೇವಲ ಆಸ್ಪ್ರೋ ಮಾತ್ರವೇ ಮೈಕ್ರೋಫೈನ್ಡ್ ಮಾಡಲಾಗಿದೆ, ನೋವನ್ನು ತೀವ್ರವಾಗಿ ನಿವಾರಿಸುವುದಕ್ಕಾಗಿ

ನಿಕೋಲಸ್ (N) ತಯಾರಿಕೆ

A G 57 KN

ದ್ದಿತು!

ತತ್ಪರಿಣಾಮವಾಗಿ, ಈ ಒಂದು ಕಾರಣದಿಂದ ರಾಜನ ಬಗ್ಗೆ ಅವರು ತೀವ್ರ ಅಸಮಾಧಾನವನ್ನು ಹೊಂದಿದ್ದರು.

ರಾಜನಿಗೆ ಇದರ ಅರಿವಿದ್ದಿತು. ಆಗ ಅವನು ತನ್ನ ಪತ್ನೀಪರೀಕ್ಷೆಯ ವಿಚಾರದಲ್ಲಿ ಮತ್ತಷ್ಟು ಮುಂದೆ ಹೋದನು. ಅದರ ಪರಿಣಾಮವು ಅವಳ ಮೇಲೆ ಏನು ಆದೀತು ಎಂಬುದರ ಗೊಡವೆಯನ್ನೂ ಆತನು ಬಿಟ್ಟನು. ತನಗೆ ಈ ರಾಣಿಯ ಬಗ್ಗೆ ಬೇಸರ ಬಂದಿದೆಯೆಂಬ ಭಾವವನ್ನು ತನ್ನ ಒಬ್ಬಿಬ್ಬರು ಸರದಾರರೆದುರು ವ್ಯಕ್ತಮಾಡಿದ್ದನು. ಮೊದಲೇ ಹರಡಿದ ಒಣಹುಲ್ಲಿಗೆ ಇದರಿಂದ ಬೆಂಕಿಯು ಕಿಡಿಯನ್ನಿಟ್ಟಂತಾಗಿಹಬ್ಬಿತು. ರಾಜನು ಕೆಲವೇ ದಿನಗಳಲ್ಲಿ ರಾಣಿಯನ್ನು ಬಿಡುತ್ತಾನೆ ಎಂದು ಜನ ಭಾವಿಸುವ ಘಟ್ಟಕ್ಕೆ ಬಂದಕೂಡಲೇ ಪ್ರದೀಪರಾಜನು ರಾಣಿಯ ಕೋಣೆಗೆ ಬಂದನು. ಅವಳಿಗೆ ಈ ಹೊಸ ವಿಚಾರಧಾರೆ ತಿಳಿದಿರಲೂಬೇಕು. ಆದರೆ ಅವಳು ಇದಾವುದನ್ನೂ ಅರಿಯದವಳಂತೆ, ಎಂದಿನಂತೆಯೆ ಪತಿಯೊಂದಿಗೆ ವರ್ತಿಸುತ್ತಿದ್ದಳು. ಅವಳ ಪ್ರೇಮಮಯ ವರ್ತನಕ್ಕೆ ಪ್ರತಿಯಾಗಿ ಆಕೆ ಈ ಹಿಂಸಾನ್ವಯ ಮಾತುಗಳನ್ನು ಕೇಳಬೇಕಾಗಿ ಬಂದಿತು:

"ಇಷ್ಟು ವರ್ಷಗಳ ವರೆಗೆ ನಿನ್ನೊಟ್ಟಿಗೆ ನಾನು ಸುಖವಾದ ದಾಂಪತ್ಯವನ್ನು ನಡೆಸಿದೆ. ಅದಕ್ಕೆ ನಿನ್ನ ಸದ್ಗುಣಗಳೂ ನನ್ನ ಮೇಲಣ ನಿನ್ನ ಪ್ರೇಮವೂ ಕಾರಣವಾದುವು. ನಮ್ಮಿಬ್ಬರ ಮಟ್ಟಿಗೆ ನಾವು ಇರುವುದಾಗಿದ್ದರೆ ಇದು ಅಡ್ಡಿಯಿದ್ದಿಲ್ಲ. ನಾವು ಎಷ್ಟೆಂದರೂ ಪ್ರಜಾಜನರಿಗಾಗಿ ಇದ್ದೇವೆ. ಮತ್ತು ನಾವು ಅವರಿಗಾಗಿ ಉತ್ತಮ ಸಂತಾನವನ್ನು ನೀಡಬೇಕಾಗುತ್ತದೆ. ದುರ್ದೈವಕ್ಕೆ ನೀನು ಒಬ್ಬ ಕೆಳಜಾತಿಯ, ಕಡು ಬಡವನ ಮಗಳೆಂಬುದು ನನ್ನ ಸರದಾರರ ಮನಸ್ಸಿನಿಂದ ಇನ್ನೂ ಹೋಗಲೊಲ್ಲದು. ಈಗ ಅವರು ಓರ್ವ ರಾಜಕುವರಿಯನ್ನು ನಾನು ಮದುವೆಯಾಗಬೇಕು ಎನ್ನುತ್ತಾರೆ. ನಮ್ಮ

# ಜನಪ್ರಿಯ ಸ್ಪರ್ಧೆ

## ಪ್ರವೇಶ ಶುಲ್ಕವಿಲ್ಲ-ನೀವು ಒಂದು ಬಹುಮಾನ ಗೆಲ್ಲಬೇಕು



ಮೊದಲನೆ ಬಹುಮಾನ : ಒಂದು ವೆಸ್ಪ ಸ್ಕೂಟರ್ ಅಥವಾ ಆಲ್ವಿನ್ ರೆಫ್ರಿಜರೇಟರ ೨ನೇ ಬಹುಮಾನ : ಒಂದು ಟೇಪ್ ರಿಕಾರ್ಡರ್ ಅಥವಾ ಆಟೋಮ್ಯಾಟಿಕ ಕ್ಯಾಮರಾ ಅಥವಾ ರೇಡಿಯೋ ಗ್ರಾಂ. ೩ನೇ ಬಹುಮಾನ (೧೦೦) ಟೋಕಿಯೋ ತಯಾರಿ ಜಪಾನ್ ೩ ಬ್ಯಾಂಡ್ ಆಲ್‌ವರ್ಲ್ಡ ಟ್ರಾನ್ಸಿಸ್ಟರ್ ಬೆಲೆ: ರೂ. ೨೭೫ ೪ನೇ ಬಹುಮಾನ (೧೦) ೩ ಬ್ಯಾಂಡ್ ಆಲ್‌ವರ್ಲ್ಡ ಟ್ರಾನ್ಸಿಸ್ಟರ್ ಬೆಲೆ : ರೂ. ೨೫೦

### ನೀವು ಮಾಡಬೇಕಾದ್ದೇನು ?

ಸಂಖ್ಯೆ ೭ (ಏಳು) ರಿಂದ ೨೨ (ಇಪ್ಪತ್ತೆರಡು) ರ ವರೆಗೆ ೧ ಸಂಖ್ಯೆಯನ್ನು ಒಂದು ಸಲ ಉಪಯೋಗಿಸಿ ಅಡ್ಡಡ್ಡವಾಗಿ, ಮೇಲಿನಿಂದ ಕೆಳಕ್ಕೆ ಮೂಲೆಯಿಂದ ಮೂಲೆಗೆ ಯಾವ ರೀತಿ ಕೂಡಿದರೂ ಒಟ್ಟು ೫೮ (ಐವತ್ತೆಂಟು) ಬರುವಂತೆ ತುಂಬಬೇಕು.

**ಪ್ರವೇಶ ಶುಲ್ಕ :** ಪ್ರವೇಶ ಶುಲ್ಕ ಇಲ್ಲ. ಇದು ಜನಪ್ರಿಯ ಸ್ಪರ್ಧೆ

**ಕಡೇ ತಾರೀಖು : ೨೫-೪-೭೩.** **ಫಲಿತಾಂಶ : ೨೮-೪-೭೩.**

ಸಹಾಯದ ನಮೂನೆ ಒಟ್ಟು ೫೪.

| | | | |
|---|---|---|---|
| ೧೦ | ೧೩ | ೧೬ | ೧೫ |
| ೧೭ | ೧೪ | ೧೧ | ೧೨ |
| ೧೯ | ೨೦ | ೯ | ೬ |
| ೮ | ೭ | ೧೮ | ೨೧ |

ಸ್ಪರ್ಧೆ ನಿಯಮಗಳು : (೧) ಎಂಟ್ರಿಗಳನ್ನು ಕಳುಹಿಸಲು ಖಾಲಿ ಕಾಗದ ಉಪಯೋಗಿಸಿ. (೨) ತಿದ್ದಿದ, ಹೊಡೆದುಹಾಕಿದ ಪ್ರವೇಶಗಳನ್ನು ಅಂಗೀಕರಿಸುವುದಿಲ್ಲ. (೩) ಪ್ರೊಮೋಟರುಗಳ ತೀರ್ಮಾನವೇ ಅಪೈರಾದದ್ದು ಹಾಗೂ ಕಾನೂನುಬದ್ಧ ಅನ್ವಯಿಸುತ್ತದೆ. (೪) ಅಧಿಕಾರಿಯುತ ಸೀಲಾದ ಉತ್ತರಕ್ಕೆ ಸರಿ ಹೋಗುವ ಉತ್ತರವೆಂದು ಪರಿಗಣಿಸಲಾಗುವುದು. (೫) ಮೊದಲನೇ ಬಹುಮಾನ : [೧] ಅಧಿಕೃತ ಉತ್ತರಕೆ ಸರಿಸಮಾನವಾಗಿರುವುದಕ್ಕೆ ಕೊಡಲಾಗುವದು. (೬) ೨ನೇ ಬಹುಮಾನವನ್ನು ೧ ಮೇಲಿನ ಮೂರು ಅಡ್ಡ ಸಾಲುಗಳು ಸರಿಸಮಾನವಾಗಿದ್ದಲ್ಲಿ ಕೊಡಲಾಗುವುದು. (೭) ೩ನೇ ಬಹುಮಾನ ಅಧಿಕೃತ ಉತ್ತರಕ್ಕೆ ಯಾವದೇ ಯಾವುದೇ ಸಾಲು, ಯಾವುದೇ ಅಂಕಿ ಎಲ್ಲಿಯೋ ಸರಿಸಮಾನವಿದ್ದಲ್ಲಿ ಕೊಡಲಾಗುವುದು. (೮) ೪ನೇ ಬಹುಮಾನ ಡ್ರಾದಲ್ಲಿ ಪ್ರೊಮೋಟರಿಗೆ ತೃಪ್ತಿಯಾದವರಿಗೆ ನೀಡಲಾಗುವುದು. (೯) ಬಹುಮಾನಿತರು ಅಂಚೆ ವೆಚ್ಚ, ಪ್ಯಾಕಿಂಗ್, ಲೈಸೆನ್ಸ್ ಫೀ ಮುಂತಾದುವುಗಳನ್ನು ಭರಿಸಬೇಕಾಗುವುದು. (೧೦) ೩ನೇ ಮತ್ತು ೪ನೇ ಬಹುಮಾನಿತರು ಈ ವೆಚ್ಚಗಳ ಜೊತೆಗೆ ಟ್ರಾನ್ಸಿಸ್ಟರು ಬೆಲೆಯ ಅರ್ಧದಷ್ಟು ಸಹ ಕೊಡಬೇಕಾಗುವುದು. ನಗದು ಬಹುಮಾನ ಇಲ್ಲ. (೧೧) ಫಲಿತಾಂಶ ಕಳುಹಿಸಲು ೪೫ ಪೈಸೆ ಸ್ಟ್ಯಾಂಪ ಕಳುಹಿಸಿರಿ. (೧೨) ನಿಮ್ಮ ವಿಳಾಸವನ್ನು ಇಂಗ್ಲೀಷ ಅಥವಾ ಹಿಂದಿಯಲ್ಲಿ ಬರೆಯಿರಿ (೧೩) ಒಂದು ಕುಟುಂಬದಲ್ಲಿ ಒಂದು ಪ್ರವೇಶ ಪತ್ರ ಕಳುಹಿಸಬಹುದು. (೧೪) ಮುಂದಕ್ಕೆ ಬೇಕಾಗುವುದರಿಂದ ನಿಯಮಗಳನ್ನು ಕತ್ತರಿಸಿ ಇಟ್ಟುಕೊಳ್ಳಿ. (೧೫) ಫಲಿತಾಂಶ ಪ್ರಕಟವಾದ ಕೂಡಲೇ ಬಹುಮಾನಿತರಿಗೆ ತಿಳಿಸಲಾಗುವದು ಮತ್ತು ಅವರು ಡಿಪಾಜಿಟ್, ಲೈಸೆನ್ಸ್ ಫೀ ಮುಂತಾದುವನ್ನು ಕೊಡಬೇಕಾಗುವದು.

Director-Contest Department

**JAPAN AGENCIES (M-58)**

P. O. Box 1194, DELHI-6

ರಾಜಗುರುಗಳೂ ಇದಕ್ಕೆ ಸಮ್ಮತಿಸಿದ್ದಾರೆ. ನನ್ನ ಅಕ್ಕನೂ ಅದೇ ಅಭಿಪ್ರಾಯದವಳಿದ್ದು, ತನ್ನ ಸೀಮೆಯ ಹತ್ತಿರದ ಓರ್ವ ಸತ್ಕುಲ ಪ್ರಸೂತೆಯನ್ನು ನನಗಾಗಿ ನೋಡಿದ್ದಾಳಂತೆ. ನಿನ್ನ ಸ್ಥಾನದಲ್ಲಿ ಬರಲಿರುವ ಅವಳಿಗಾಗಿ ನೀನು ಇಲ್ಲಿಂದ ಬಿಟ್ಟು ಹೊರಡು. ಬೇಕಾದರೆ ನಿನಗೆ ಇಂದೇ ಹಣವನ್ನು ಕೊಡುವೆನು. ಧೈರ್ಯವನ್ನು ತಂದುಕೋ. ಚಂದನೇ, ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ.— ಕೈಮೀರಿದ ಪರಿಸ್ಥಿತಿಗಾಗಿ ನೀನು ನನ್ನನ್ನು ನಿಂದಿಸುವುದಿಲ್ಲವೆಂದು ಭಾವಿಸುವೆ."

ರಾಜನಿಗೆ ಉತ್ತರ ಕೊಡುವುದಕ್ಕೆ ಚಂದನೆಯು ತಡಮಾಡಲಿಲ್ಲ, ತಡವರಿಸಲೂ ಇಲ್ಲ. "ಮಹಾರಾಜ, ನಾನು ಉಚ್ಚಕುಲದಲ್ಲಿ ಜನಿಸಿದವಳಲ್ಲ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಜನರು ಈ ಬಗ್ಗೆ ಆಡಿಕೊಳ್ಳುತ್ತಿದ್ದರೆ ಅದು ಸಹಜವೇ ಆಗಿದೆ. ಅದರಿಂದ ನಾನು ನಿಮ್ಮ ಹೆಂಡತಿಯಾಗಲು, ಕಿಂಪಾ ದಾಸಿಯಾಗಲು ಸಹಿತ ಯೋಗ್ಯಳಲ್ಲವೆಂಬುದನ್ನೂ ನಾನು ತಿಳಿದೇ ಇದ್ದೇನೆ. ಅಂಥವಳನ್ನು ಅದೇನೊ ಕರುಣೆಯಿಂದ ಮೇಲೆತ್ತಿದಿರಿ. ಆ ಉಪಕಾರಕ್ಕಾಗಿ ನನ್ನ ಮನಸ್ಸು, ವಿಚಾರಗಳನ್ನು ಸಂಪೂರ್ಣವಾಗಿ ನಿಮಗೆ ಅಧೀನಗೊಳಿಸಿದೆ. ನನ್ನ ಯೋಗ್ಯತೆ ಇದ್ದಷ್ಟು ಈ ದೇಹ, ಜೀವಗಳನ್ನು ನಿಮ್ಮ ಪಾದಸೇವೆಯಲ್ಲಿ ಅರ್ಪಿಸಿದೆ. ಇರುವಷ್ಟು ಕಾಲ ನಾನು ನಿಮ್ಮ ಪಾದಸೇವಕಿ ಎಂಬ ಭಾವನೆಯಿಂದಲೇ ವರ್ತಿಸಿದೆನೆಂಬುದಕ್ಕೆ ಪರಮಾತ್ಮನೇ ಸಾಕ್ಷಿಯಾಗಿದ್ದಾನೆ. ಇಷ್ಟು ದಿನ ನೀವು ನನ್ನನ್ನು ಕೈಹಿಡಿದು ಮೇಲೆತ್ತಿದ್ದಕ್ಕಾಗಿ ನಾನು ನನ್ನ ಋಣವನ್ನು ವ್ಯಕ್ತಪಡಿಸಿಯೇನಲ್ಲದೆ ಅದು ಕಳೆದುಹೋಯಿತಲ್ಲಾ ಎಂದು ವ್ಯಸನಪಡುವವಳಲ್ಲ. ನಿಮ್ಮಂಥ ಪತಿಯನ್ನು ಕೆಲ ದಿನಗಳ ಮಟ್ಟಿಗಾದರೂ ಪಡೆದಿದ್ದರೆ ನಾನು ಧನ್ಯಳೆಂದೇ ಭಾವಿಸುತ್ತಿದ್ದೆ. ಅಂಥದು ಈ ಅರಮನೆಯಲ್ಲಿ, ನಿಮ್ಮ ಪ್ರೇಮರಕ್ಷಣೆಯಲ್ಲಿ ಇಷ್ಟು ವರ್ಷಗಳನ್ನು ಕಳೆದಿದ್ದೇನೆ. ಈಗ ಸಂತೋಷದಿಂದ ನನ್ನ ತಂದೆಯ ಮನೆಗೆ ಹೋಗುತ್ತೇನೆ. ನಾನು ಇಲ್ಲಿ ಕಳೆದಂಥವೇ ಸುಖದ ದಿನಗಳನ್ನು ಅನುಭವಿಸಲು ಓರ್ವ ಸುಯೋಗ್ಯ ಕನ್ಯೆಯನ್ನು ದಯಪಾಲಿಸಲೆಂದು ದೇವರಲ್ಲಿ ಪ್ರಾರ್ಥಿಸುವೆ. ನನಗೆ ಉದರಭರಣಕ್ಕಾಗಿ ಹಣವನ್ನು ಕೊಡಬೇಕೆನ್ನುತ್ತೀರಿ. ಆದರೆ ನೀವು ನನ್ನ ತಂದೆಯ ಮನೆಯಿಂದ ನನ್ನನ್ನು ಕರೆದುಕೊಂಡು ಹೋಗಲು ಬಂದಾಗ ಏನನ್ನೂ ತರಲಿಲ್ಲ. ಆಗ ಧರಿಸಿದ ಬಟ್ಟೆಗಳು ಕೂಡ ನಿಮ್ಮವೇ. ತಂದುದೆಂದರೆ ನಿಮ್ಮ ಮೇಲಿನ ಪ್ರೀತಿ ಹಾಗೂ ಸೇವಾಬುದ್ಧಿಯನ್ನು. ಬಿಡಲಾಗದೆ ಬೆನ್ನು ಹತ್ತಿ ಬಂದುದೆಂದರೆ ಬಡತನ. ಕಾರಣ ನನಗೆ ಇನ್ನೇನೂ ಬೇಡ. ಪತಿಯ ಆಶ್ರಯವೇ ಸತಿಗೆ ಮುಖ್ಯ. ನನ್ನ ಯೋಗ್ಯತೆಗೆ ಮೀರಿದ ಆ ಆಶ್ರಯವನ್ನು ನಾನು ಹೊಂದಿದನೆಂದು ಅದರಿಂದ ಚ್ಯುತೆಯಾಗಬೇಕಾದುದಕ್ಕೆ ನಾನು ಯಾರನ್ನೂ ನಿಂದಿಸುವುದಿಲ್ಲ. ಪತಿಯ ಆಶ್ರಯ ತಪ್ಪಿದ ಮೇಲೆ ಮಕ್ಕಳನ್ನು ಸ್ತ್ರೀ ಅವಲಂಬಿಸಬೇಕು. ಮಕ್ಕಳು— ಹೂಂ... ಆ ಭಾಗ್ಯ ನನಗಿಲ್ಲ. ಇಂತಹ ಸ್ಥಿತಿಯಲ್ಲಿ ಹೆಣ್ಣಿಗೆ ತವರು ಮನೆಯೇ ಗತಿ. ನನ್ನ ಮನೆಗೆ, ನನ್ನ ಮೊದಲಿನ ಸ್ಥಾನಕ್ಕೆ ಹೋಗಲು ನನಗೆಲ್ಲಿಯ ಸಂಕೋಚ? ನನಗೆ ಉದರಭರಣದ ಹಣ ಬೇಡ. ಇಲ್ಲಿ ನನ್ನದೆನ್ನುವುದನ್ನು ಏನೂ ತಂದಿರಲಿಲ್ಲ. ಈ ವಸ್ತ್ರ, ಈ ಅಲಂಕಾರಗಳು ಇವಾವುವೂ ನನ್ನವಲ್ಲ. ನಿಮ್ಮ ಹೃದಯದಲ್ಲಿ ಅಲ್ಪ ಸ್ಥಾನ, ಆಶ್ರಯ ಇತ್ತೆಂದು ತಾತ್ಕಾಲಿಕವಾಗಿ ಈ ನಿಮ್ಮ ಸೊತ್ತನ್ನು ನನ್ನದೆಂಬಂತೆ ಧರಿಸಿದೆ. ಆ ಸ್ಥಾನ, ಆ ಆಶ್ರಯ ತಪ್ಪಿದ ಮೇಲೆ ಇವೆಲ್ಲ ಇನ್ನೇತಕ್ಕೆ? ಇಕೊಳ್ಳಿ, ನೀವು ತೊಡಿಸಿದ ರತ್ನಮುಂಗುರ. ಇದು ನೀವು ನನ್ನ ಮೊದಲ ಗರ್ಭಧಾರಣೆಯ ಕಾಲದಲ್ಲಿ ಮಾಡಿಸಿ ತೊಡಿಸಿದ್ದ ಕಂಠಾಭರಣ. ಉಳಿದೆಲ್ಲ ವಸ್ತ್ರ, ಒಡವೆ, ಅಲಂಕಾರಗಳು ಆಯಾ ಸ್ಥಾನಗಳಲ್ಲೇ ಇವೆ. ನಾನು ತೊಟ್ಟಿರುವ ಈ ವಸ್ತ್ರಗಳನ್ನೂ ನಾನು ತೆಗೆದು ಇರಿಸಬೇಕು. ಆದರೆ ಮಹಾರಾಜ, ಇಲ್ಲಿಗೆ ಬರುವ ಮುಂಚೆ ಸಂಗಡ ನಾನು ತಂದಿದ್ದ ಸೀರೆ ತೀರ ಹಳೆಯದು, ಅಲ್ಲಲ್ಲಿ ಹರಿದಿದೆ. ನಿಮ್ಮ ಮಕ್ಕಳು ಆಶ್ರಯಿಸಿದ್ದ ಈ ಉದರವನ್ನು ಮುಚ್ಚಲು ಅದು ಅಸಮರ್ಥವಾಗಿದ್ದು, ನಿಮ್ಮ ಪ್ರಜಾಜನರು ನೋಡಿಯಾರೆಂಬ ಸಂಕೋಚ ನನ್ನನ್ನು ಬಾಧಿಸುತ್ತದೆ. ಕಾರಣ ನಿಮ್ಮಿಂದ ಬೇಡುವು

ದೇವರೆ ಈ ದೇಹವನ್ನು ಮುಚ್ಚಲು ಒಂದು ಸಾದಾ ಸೀರೆ. ಅಷ್ಟನ್ನು ಕರುಣಿಸಬೇಕು. ಈಗಲೇ ನನ್ನ ತಂದೆಯ ಮನೆಗೆ ಹೋಗಲು ಸಿದ್ಧಳಿದ್ದೇನೆ."

ಪ್ರದೀಪರಾಜನಿಗೆ ತನ್ನ ಕಣ್ಣೀರನ್ನು ತಡೆಯಲಾಗದೇ ಆತನು ಒದ್ದಾಡಿದನು. ಆವನು ಧೀಮಂತನಿದ್ದನೆಂದೇ ಆ ಅಶ್ರುಪ್ರವಾಹವನ್ನು ತಡೆದುಕೊಳ್ಳಲು ಸಮರ್ಥನಾದನು. ಅಲ್ಲಿ ಹೆಚ್ಚು ಹೊತ್ತು ನಿಲ್ಲದೇ, ಅವಳಿಗೆ ಒಂದು ಸೀರೆಯನ್ನು ಕೊಡಲು ಮುಖ್ಯ ಚೇಟಿಗೆ ಹೇಳಿದವನೆ ಅರಮನೆಯಿಂದ ಹೊರಬಿದ್ದನು. ತನ್ನ ಪ್ರೇಮಲ ಪತ್ನಿಯನ್ನು ಇದಕ್ಕೂ ಹೆಚ್ಚು ಪರೀಕ್ಷಿಸದೆ ಇಲ್ಲಿಗೇ ಈ ನಾಟಕಕ್ಕೆ ತೆರೆಯನ್ನೆಳೆಯೋಣವೆ ಎನ್ನುವಷ್ಟು ಅವನ ಮನಸ್ಸು ಅವಳ ಮಾತಿನಿಂದ ಮರುಗಿಹೋಗಿತ್ತು.

ಆದರೆ ಹಾಗೇನೂ ಮಾಡದೇ, ಅದೇ ತನ್ನ ಮುನ್ನಿನ ಸ್ವಾಮಿನಿಷ್ಠನನ್ನು ಕರೆದು ತನ್ನ ಅಕ್ಕನ ಬಳಿಗೆ ಅವನನ್ನು ಕಳುಹಿಸಿ, ಸಮಸ್ತ ವೈಭವ ಆಡಂಬರಗಳಿಂದ ತನ್ನ ಇಬ್ಬರೂ ಮಕ್ಕಳೊಂದಿಗೆ, ಹಾಗೂ ಅವಳ ಗಂಡನೊಂದಿಗೆ ಹೊರಟು ಬರಬೇಕೆಂದೂ ಗುಟ್ಟನ್ನು ಆಗೂ ಬಿಟ್ಟುಕೊಡಬಾರದೆಂದೂ ಸಂದೇಶವನ್ನು ಕಳುಹಿದನು.

ಅಷ್ಟು ಹೇಳಿ ಕಳುಹಿ ಅರಮನೆಗೆ ಬರುವಷ್ಟರಲ್ಲಿ ಇತ್ತ ಚಂದನೆಯು ಸಾದಾ ಸೀರೆಯನ್ನುಟ್ಟು, ಅಂಥದೇ ಕುಪ್ಪಸ ತೊಟ್ಟು, ತನ್ನ ಹಳೆಯ ಎರಡು ಅರಿವೆಗಳನ್ನು ಮಡಿಚಿ ಹಿಡಿದುಕೊಂಡು ಹೊರಹೊರಡಲು ಸಿದ್ಧಳಾಗಿ ನಿಂತಿದ್ದಳು. ಅರಮನೆಯ ಪರಿವಾರವೆಲ್ಲ ತಮ್ಮ ಕಣ್ಣೀರಿನಿಂದ ಅವಳ ಪಾದಗಳನ್ನು ತೊಳೆಯುತ್ತಲಿದ್ದರು. ಬಹು ಕಷ್ಟದಿಂದ ಅವರಿಂದ ಬಿಡಿಸಿಕೊಂಡು, ಸಾಂತ್ವನ ವಚನವನ್ನು ಹೇಳಿ ಆಕೆ ಹೊರಬಿದ್ದಳು. ಮಹಾದ್ವಾರದ ಬಳಿ ಅನೇಕ ಜನ ಸರದಾರರೂ, ಸಾಮಾನ್ಯ ನಾಗರಿಕರೂ ಅವಳ ದರ್ಶನಕ್ಕಾಗಿ ಕಾದು ನಿಂತಿದ್ದರು. ಬರಿಗಾಲಿನಿಂದ, ಬರಿಗಾಲಿನಿಂದ ಮೆಲ್ಲನೆ ಅಡಿಯಿಡುತ್ತ ಸಾಗಿದ ಆ ನಿರಾಭರಣ ದೇವತೆಯನ್ನು ಕಂಡು, ತಮ್ಮ ರಾಜ್ಯದ ಶೋಭಾಲಕ್ಷ್ಮಿಯೇ ಹೊರಹೊರಟಳೆಂದು ನೆರೆದಿದ್ದ ಜನಸ್ತೋಮವು ಸಂತಾಪದಿಂದ ಕುದಿಯಿತು. ಶೋಕನಿರ್ಭರವನ್ನು ತಡೆಯಲಾರದೇ, ಕಣ್ಣಿಂದ ನೀರನ್ನು ಸುರಿಸುತ್ತ ಅವರೆಲ್ಲ ಅವಳನ್ನು ಹಿಂಬಾಲಿಸಿದರು.

ಆಕೆಯು ಇನಿತೂ ಅಳಲಿಲ್ಲ. ಆದರೆ ಜನತೆಯ ಈ ಪ್ರೇಮ ಪ್ರದರ್ಶನದಿಂದ ಶಾಲೀನತೆ ತಾನೇ ತಾನಾಗಿ ಮೈವೆತ್ತು ಬಂದು, ಆಕೆಯು ತಗ್ಗಿಸಿದ ತಲೆಯನ್ನು ಮನೆಯವರೆಗೂ ಮೇಲೆತ್ತಗೊಡಲಿಲ್ಲ.

ಆಗ ಸೂರ್ಯಾಸ್ತ ಸಮಯವಾಗಿತ್ತು.

ತನ್ನ ಮನೆಯ ಹತ್ತಿರ ನೆರೆದ ಗೌಜಿಯನ್ನು ಕೇಳಿ ಅವಳ ಮುದಿ ತಂದೆಯು ಕೋಲನ್ನೂರುತ್ತ ಹೊರಬಂದನು. ಹುಬ್ಬಿನ ಮೇಲೆ ಕೈಯನ್ನಿರಿಸಿ ತನ್ನ ಮಂದ ದೃಷ್ಟಿಯನ್ನು ಸುತ್ತಲೂ ಹರಿಯಿಸಿದನು. ಮಗಳು ಹತ್ತಿರ ಬಂದು ನಮಸ್ಕರಿಸಿದಾಗಲೇ ಆವನಿಗೆ ಅದರ ಕಲ್ಪನೆ ಬಂದದ್ದು. ಆ ಸ್ವರೂಪದಲ್ಲಿ ಅವಳನ್ನು ಕಂಡೊಡನೆ ತಬ್ಬಿಕೊಂಡು ಗೋಗರೆದನು. ಈ ೧೭ ವರ್ಷಗಳ ಅವಧಿಯಲ್ಲಿ ಅವನ ಶ್ರವಣ ಶಕ್ತಿ ಇಂಗಿ ಹೋಗಿದ್ದಿತು. ಹೀಗೇಕಾಯಿತೆಂದು ಆವನು ಕೇಳುವ ಅಗತ್ಯವೂ ಉಳಿಯದೇ ಅವಳ ವೇಷ, ಮುಖದ ಭಾವ ಸ್ವಯಂವೇದ್ಯವಾಗಿದ್ದಿತು.

ಇತ್ತ ಚಂದನೆಯು ತನ್ನ ತಂದೆಯಿಂದ ಬಿಡಿಸಿಕೊಂಡು ತನ್ನ ಸಂಗಡ ಬಂದಿದ್ದ ದಾಸಿಯರು, ಸರದಾರರು, ಜನಸಾಮಾನ್ಯರು ಇವರತ್ತ ತಿರುಗಿದಳು. ಆಹಾ! ಅವಳ ಮುಖದ ಮೇಲೆ ಅದೆಂತಹ ಶಾಂತವಾದ ಕಳೆ! ಪತಿಯಿಂದ ಪರಿತ್ಯಕ್ತೆಯಾದೆನೆಂದು ಅವನ ಮೇಲೆ ಮೂಡಿದ ಕೋಪದ ಛಾಯೆ ರವಷ್ಟೂ ಇರಬಾರದೆ ? ಇಲ್ಲ, ಬದಲಾಗಿ ತನ್ನ ಸ್ವಸ್ಥಾನಕ್ಕೆ ತಾನು ಹಿಂದಿರುಗಿದೆನೆಂಬ ನಿಶ್ಚಿಂತಭಾವದ ಸಮಾಧಾನವೇ ಅಲ್ಲಿ ನೋಡುವವರಿಗೆ ಕಾಣುತ್ತಿದ್ದಿತು. ಮೆಲ್ಲನೆಯ ದನಿಯಲ್ಲಿ ಆಕೆ ಅವರೆಲ್ಲರಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸಿದಳು. ತನ್ನ ಸಂಗಡಲೇ ಉಳಿವೆನೆಂದು ಹಟ ಹಿಡಿದಿದ್ದ ಭಾವನಾಪರರಿಗೆ, ಹಾಗೆ ಮಾಡುವುದು ವ್ಯಾವಹಾರಿಕವಲ್ಲವೆಂದು ಸಂತಯಿಸಿದಳು. ಕೊನೆಯದಾಗಿ [illegible] ಪ್ರಾರ್ಥಿಸಿದಳು :

# ಲಾಭ ಇಮ್ಮಡಿ!

1

ಆಯ್ದ ವರ್ಜೀನಿಯಾ
ಹೊಗೆಸೊಪ್ಪುಗಳು!
ನೈಪುಣ್ಯದಿಂದ ಮಾಡಿದ
ಮಿಶ್ರಣ! ಸೌಮ್ಯ
ಹಾಗೂ ಸುಖದಾಯಕ
ಧೂಮ್ರಪಾನ- ಲಕ್ಷೋಪಲಕ್ಷ
ಜನರ ಅಚ್ಚುಮೆಚ್ಚು!

2

'ಭಾರತೀಯ. ನೂರಕ್ಕೆ ನೂರು ಪಾಲು
ಭಾರತೀಯ. ನಿಮ್ಮ ಪನಾಮಾ
ಅಮೂಲ್ಯ ವಿದೇಶೀ ವಿನಿಮಯ
ವನ್ನು ಉಳಿಸಲು ಸಹಾಯ
ಮಾಡುತ್ತದೆ—ಇದಕ್ಕೆ
ವಿರುದ್ಧವಾಗಿ, ಅಧಿಕ ಪ್ರಮಾಣದಲ್ಲಿ
ಭಾರತದಲ್ಲಿ ವಿದೇಶೀಯರು
ತಯಾರಿಸುವ ಸಿಗರೇಟುಗಳೆಲ್ಲ
ವಿದೇಶೀ ವಿನಿಮಯವನ್ನು
ದುರ್ವ್ಯಯ ಮಾಡುತ್ತವೆ.




# ಪನಾಮಾ

ಗೋಲ್ಡನ್ ಟೊಬೇಕೋ ತಯಾರಿಕೆ

GT (P) 708 KAN

"ಮಾನ್ಯರೇ, ನನ್ನ ಪತಿಯು ನನಗೆ ಅನ್ಯಾಯ ಬಗೆದರೆಂದು ಭಾವಿಸಿ, ಅವರನ್ನು—ನಿಮ್ಮ ರಾಜನನ್ನು, ದಯವಿಟ್ಟು ಜರೆಯಬೇಡಿ. ನನ್ನ ಮೇಲೆ ವಾತ್ಸಲ್ಯವಿದ್ದುದಾದರೆ ಇದೊಂದು ಮಾತನ್ನು ನಡೆಯಿಸಿರೆಂದು ಸೆರಗೊಡ್ಡಿ ಬೇಡುವೆ."

ಆ ಮಾತಿನಿಂದ ಮೂಕವಿಸ್ಮಿತರಾಗಿ, ಶೋಕಾಕುಲರಾಗಿ ಜನರು ರಾಜಧಾನಿಗೆ ಮರಳಿದರು. ಮೇಲಿನ ಗವಾಕ್ಷದಲ್ಲಿ ನಿಂತು ರಾಜನು ಅವರು ಬರುವುದನ್ನೇ ನೋಡುತ್ತಲಿದ್ದನು. ತನ್ನ ಬಗ್ಗೆ ಸಾತ್ವಿಕ ಸಂತಾಪದಿಂದ ಕೂಡಿದ ಅವರನ್ನು ಕಾಣುವುದಕ್ಕೆ ಅಂಥ ಪ್ರಬಲ ರಾಜನೂ ಹೆದರಿ, ತನ್ನ ನಿವಾಸಕ್ಕೆ ಹಿಂತಿರುಗಿದನು.

ಇತ್ತ ಅವನ ಅಕ್ಕ ತನ್ನ ಪತಿಗೆ, ತನ್ನಲ್ಲಿದ್ದ ಹೆಣ್ಣು ಹುಡಿಗೆಯನ್ನು ತನ್ನ ತಮ್ಮನಿಗೆ ಮದುವೆ ಮಾಡಿಕೊಡುವುದಾಗಿಯೂ ಅದಕ್ಕಾಗಿ ದಿಬ್ಬಣವನ್ನು ಹೊರಡಿಸಬೇಕೆಂದೂ ಕೇಳಿಕೊಂಡಳು. ಪ್ರದೀಪನು ತನ್ನ ಮೊದಲ ಹೆಂಡತಿಯನ್ನು ಬಿಟ್ಟಿರುವ ಸುದ್ದಿ ಅವನಿಗೂ ತಿಳಿದಿದ್ದಿತು. ಮದುವೆಯ ಕಾಲದಲ್ಲಿ ಹುಡಿಗೆಯ ಕುಲ, ಗೋತ್ರಗಳು ತಿಳಿವುವೆಂದು ಎಣಿಸಿದನು. ಒಳ್ಳೇ ಉತ್ಸವದಿಂದ ದಿಬ್ಬಣದ ಸಿದ್ಧತೆಯನ್ನು ಮಾಡಿಕೊಂಡು ಶುಭ ಮುಹೂರ್ತವನ್ನು ನೋಡಿ ಈ ಕಡೆಗೆ ಪ್ರಯಾಣವನ್ನು ಬೆಳಿಸಿ, ಪ್ರದೀಪನಲ್ಲಿಗೆ ಶರವೇಗದ ಪರಿಕಾರರನ್ನು ಅಟ್ಟಿದನು.

ದಿಬ್ಬಣವು ವಿಜೃಂಭಣೆಯಿಂದ ಹೊರಟಿದ್ದ ಸುದ್ದಿ ಊರ ಜನರಿಗೂ ತಿಳಿಯಿತು. ರಾಜನ ಆಜ್ಞೆಯ ಮೇರೆಗೆ ರಾಜಧಾನಿಯ ಶೃಂಗಾರಕ್ಕೆ ಮತ್ತೊಮ್ಮೆ ಜನ ಸಿದ್ಧರಾದರು. ಆದರೆ ಅರಮನೆಯನ್ನು ನೋಡಿಕೊಳ್ಳುವವರಾರು? ಈ ನಿಮಿತ್ತದಿಂದ ರಾಜನು ಮತ್ತೊಮ್ಮೆ ತನ್ನ ಪತ್ನಿಯನ್ನು ಪರೀಕ್ಷಿಸುವ ಹಂಚಿಕೆ ಹಾಕಿದನು ಮತ್ತು ಅವಳನ್ನು ಕರೆಕಳುಹಿದನು. ಕರೆಕಳುಹಿದರೆ ಬರಲಾರಳೇ? ಪತಿಯು ಮೇಲಣ ಸಿಟ್ಟಿನಿಂದ ಇಲ್ಲವೆಂದರೆ, ಆಳುವ ರಾಜನ ಆಜ್ಞೆಯೆಂದಾದರೂ ಆಕೆ ಬರಬೇಕಲ್ಲವೇ? ಆದರೆ ಚಂದನೆಯು ಅದು ತನ್ನ ಪತಿಯ ಆಜ್ಞೆಯೆಂದೇ ಭಾವಿಸಿ ಬಂದಳು. ಅದೇ ವಿನೀತ ಭಾವ. ಅದೇ ಸೌಮ್ಯ, ಸ್ನಿಗ್ಧ ಮುಖಮಾಟ. ಅದೇ ಮೊದಲಿನ ಸೇವಾತತ್ಪರತೆ ಅವಳ ಕಣ್ಣುಗಳಲ್ಲಿ ಕಾಣುತ್ತಿದ್ದಿತು.

ರಾಜನು ಹೇಳಿದನು:

"ಚಂದನೇ, ನಾಳೆ ಸಂಜೆಗೆ ನನ್ನ ಭಾವನು ನಾನು ಮದುವೆಯಾಗಲಿರುವ ಕನ್ಯೆಯನ್ನು ಕರೆದುಕೊಂಡು ಬರುವವನಿದ್ದಾನೆ. ಅದೇ ರಾತ್ರಿ ಭೂರಿಭೋಜನದ ಸಮಾರಂಭವೆಂದು ಗೊತ್ತು ಮಾಡಿದೆ. ಅದಕ್ಕೆ ತಕ್ಕ ವ್ಯವಸ್ಥೆ ಮಾಡಲು ಈ ಅರಮನೆಯಲ್ಲಿ ಯಾರೂ ಇಲ್ಲ. ಅವರು ಬಂದರೆ ಎದುರುಗೊಳ್ಳುವವರೂ ಇಲ್ಲ. ಕಾರಣ ಹಿಂದಿನ ದಾವುದನ್ನೂ ವಿಕಲ್ಪವಾಗಿ ಎಣಿಸದೆ ನೀನು ಆ ಹೊಣೆಯನ್ನು ಹೊರಬೇಕೆಂದು ಕೇಳಿಕೊಳ್ಳುವೆ. ನೀನೇ ಅದಕ್ಕೆ ಸಮರ್ಥಳಲ್ಲದೆ, ನನ್ನ ಆಪ್ತ ಜನರಲ್ಲಿ ಯಾರೂ ಇಲ್ಲ."

ಇಷ್ಟು ವಿನಯದಿಂದ ಇವರು ಕೇಳಿಕೊಳ್ಳುವ ಕಾರಣವೇ ಇರಲಿಲ್ಲ ಎಂದು ಮನದಲ್ಲಂದು ಕೊಂಡು ಆಕೆ ಇಷ್ಟೇ ಹೇಳಿದಳು: "ಮಹಾರಾಜ, ಅಗತ್ಯವಾಗಿ ಮಾಡುತ್ತೇನೆ."

ಆಗ ರಾಜನು ಅರಮನೆಯ ಮುಖ್ಯ ಪ್ರತೀಹಾರಿಯನ್ನು ಕರೆದು, ಮೂರು ದಿನಗಳ ಮಟ್ಟಿಗೆ ಎಲ್ಲರೂ ಚಂದನೆಯ ಹೇಳಿಕೆಯಂತೆ ನಡೆದು, ಕೆಲಸವನ್ನು ಪೂರೈಸಬೇಕೆಂದು ಅಪ್ಪಣೆ ಮಾಡಿದನು.

ಕೂಡಲೇ ಚಂದನೆಯು ಕೆಲಸಕ್ಕೆ ಅಣಿಯಾದಳು. ಅರಮನೆಯ ಸಂಗಮವರೀ ಕಲ್ಲಿನ ನೆಲ, ಕಂಬಗಳನ್ನು ಸ್ವಚ್ಛಗೊಳಿಸುವುದನ್ನು ಮೊದಲು ಮಾಡಿಕೊಂಡು, ಭೋಜನದ ಸಲಕರಣೆಯ ವರೆಗೂ ಸಿದ್ಧತೆಗಳಿಗೆ ತೊಡಗಿದಳು. ಬರುವ ಪ್ರತಿಯೊರ್ವ ಅತಿಥಿಗೂ ಒಂದೊಂದು ಕೋಣೆಯನ್ನು ಗೊತ್ತುಪಡಿಸಿ, ರತ್ನಕಂಬಳಿಗಳನ್ನು ಹಾಸಿಸಿ, ಇತರ ಪ್ರಸಾಧನಗಳನ್ನು ಅಣಿಗೊಳಿಸಿ ಶೃಂಗರಿಸಿದಳು. ಇಷ್ಟೆಲ್ಲ ತಿಳುವಳಿಕೆಯುಳ್ಳವಳೂ ಅಧಿಕಾರಿಣಿಯೂ ಆಗಿದ್ದರೂ ಕೂಡ ಆಕೆ ಮಾತ್ರ ತನ್ನ ಸಾದಾ ಬಟ್ಟೆಗಳನ್ನೇ ಧರಿಸಿಕೊಂಡು ಇದ್ದಳು.

ಮರುದಿನ ಬಂತು. ಸಂಜೆಯೂ ಆಯಿತು. ಪ್ರದೀಪರಾಜನ ಭಾವನೂ ಅಕ್ಕನೂ ವಧುವೂ

ಅವಳ ತಮ್ಮನೂ ಇತರ ಪರಿವಾರದವರೂ ಅರಮನೆಗೆ ಬಂದರು. ವಾದ್ಯಗಳು ಹಿತವಾದ ಧ್ವನಿಯಿಂದ ಸದ್ದು ಮಾಡುತ್ತಲಿದ್ದವು. ಪುರಜನರ ಕಣ್ಣಿಗೆ ವಿಶೇಷ ಹಬ್ಬದೂಟವಿತ್ತೆಂದು ಬೇರೆ ಹೇಳಬೇಕಾಗಿಲ್ಲ. ತಮ್ಮ ರಾಜನ ೧೫ ವರ್ಷದ ಭಾವೀ ಪತ್ನಿಯನ್ನು ನೋಡಿ, "ಚಿಂತೆಯಿಲ್ಲ. ನಮ್ಮ ರಾಜರು ಮೊದಲ ಹೆಂಡತಿಯನ್ನು ಬಿಟ್ಟು ತಪ್ಪು ಮಾಡಿದರೂ, ಅವಳಿಗಿಂತ ಸುರೂಪಿಯೂ ಕೋಮಲೆಯೂ ಆದವಳನ್ನು ಆಯ್ದಿದ್ದಾರೆ," ಎಂದುಕೊಂಡರು!

ರಾಜನೂ, ತುಸು ಅಂತರದಲ್ಲಿ ನಿಂತ ಚಂದನೆಯೂ ಹೆಣ್ಣಿನವರನ್ನು ಬರಮಾಡಿಕೊಂಡರು. ರಾಜನು ತನ್ನ ಭಾವ–ಅಕ್ಕನವರೊಂದಿಗೆ ಮಾತನಾಡುತ್ತಿದ್ದನು. ಚಂದನೆಯು ಮೊದಲು ಅದರ ಭಾವದಿಂದ ವಂದಿಸಿ, ಅನಂತರ ಕನ್ಯೆಯ ಕೈ ಹಿಡಿದುಕೊಂಡು, ಕುಶಲ ಪ್ರಶ್ನೆಗಳನ್ನು ಕೇಳುತ್ತ ಮುಂದೆ ಸಾಗಿದಳು. ಅವಳ ತಮ್ಮನ ಮುದ್ದು ಮುಖವನ್ನು ನೋಡಿಯಂತೂ ಅವಳ ಅನುಕಂಪ ಉಕ್ಕೇರಿ, ಅಪರಿಚಿತನಾದ ಅವನನ್ನು ಒಂದು ಕ್ಷಣ ಮುದ್ದಾಡಿದಳು. ಎಲ್ಲರನ್ನೂ ಅವರವರ ಕೋಣೆಗಳಿಗೆ ಕಳಿಸಿ, ಅವರ ಉಪಚಾರಗಳ ವ್ಯವಸ್ಥೆ ಸರಿಯಾಗಿದ್ದ ಬಗ್ಗೆ ಚಂದನೆಯು ಖಾತ್ರಿ ಮಾಡಿಕೊಂಡಳು. ಎಲ್ಲರೂ ಅವಳ ನಿರಾಡಂಬರ ವೇಷವನ್ನು ನೋಡಿ, ಈ 'ಸೇವಕಿ' ಅದೆಷ್ಟು ಚಾಕಚಕ್ಯದಿಂದ ಕೆಲಸಮಾಡುತ್ತಿದ್ದಾಳೆ ಎಂದು ಅಚ್ಚರಿಪಟ್ಟರು.

ರಾಜನು, ತನ್ನ ಭಾವೀ 'ಪತ್ನಿ' ಹಾಗೂ ಅವಳ ತಮ್ಮನ ಯೋಗಕ್ಷೇಮಕ್ಕೆ ಹೆಚ್ಚು ಲಕ್ಷ್ಯ ಕೊಡಬೇಕೆಂದು ಚಂದನೆಗೆ ವಿಧಿಸಿದ್ದನು. ಚಂದನೆಯು ಅವರ ಕೋಣೆಗೆ ಹೋದಾಗ, ಅಲ್ಲಿಂದ ಬಿಟ್ಟು ಎದ್ದು ಬರಲು ಅವಳ ಕಾಲುಗಳೇ ಏಳಲಿಲ್ಲ. ಕುಶಲ ಪ್ರಶ್ನೆಗಳನ್ನು ಕೇಳಿ ಮುಗಿದರೂ, ಅವಳು ಅವರ ಮುಖಗಳನ್ನು ನೋಡುತ್ತ ನಿಂತಳು.

ಭೋಜನ ಸಮಾರಂಭದ ವೇಳೆ ಸಮೀಪಿಸಿತು. ಎಲ್ಲವೂ ಸರಿಯಾಗಿದೆಯೆಂದು ನೋಡಿಕೊಂಡು ಚಂದನೆಯು ಎಲ್ಲರನ್ನೂ ಕರೆಯಹೇಳಿದಳು. ಬೀಗರೂ ಸರದಾರ ಪ್ರಮುಖರೂ ಬಂದು ಕುಳಿತ ಕರೆದುಕೊಂಡು ಬಂದಳು.

ಚಂದನೆಯು ಆಕೆ ತನ್ನ ಸವತಿ ಎಂಬ ಭಾವವನ್ನು ಎಳ್ಳಷ್ಟೂ ತರದೇ, ಮೊದಲಿಗಿಂತ ಹೆಚ್ಚು ಉತ್ಸಾಹಭರಿತೆಯಾಗಿ ರಾಜನಿಗೆ ಕಂಡಳು; ಆಗ ಅವನು ಎಲ್ಲರ ಸಮಕ್ಷಮವಾಗಿ ಕೇಳಿದನು.

"ಚಂದನಾ, ನಿನಗೆ ಈ ವಧುವು ಮೆಚ್ಚಿಕೆಯಾದಳಷ್ಟೆ."

ಚಂದನೆಯು ವಧುವಿನ ಆಸನದ ಬದಿಯಲ್ಲಿ ನಿಂತಿದ್ದವಳು, ಮೃದುವಾಗಿ ಅವಳ ಭುಜವನ್ನು ತಡವುತ್ತ ಉತ್ತರ ಕೊಟ್ಟಳು:

"ಮಹಾರಾಜ, ಸೌಂದರ್ಯ, ಹಾಗೂ ಗಾಂಭೀರ್ಯದಲ್ಲಿ ಇವಳಿಗಿಂತಲೂ ಮಿಗಿಲಾದ ವಧುವನ್ನು ನಾನು ಎಲ್ಲಿಯೂ ನೋಡಿಲ್ಲ. ನನಗಂತೂ ಅವಳು ಅಲ್ಪ ಅವಧಿಯಲ್ಲಿ ಪ್ರೀತ್ಯಾಸ್ಪದಳಾಗಿಬಿಟ್ಟಳು. ಇವಳೊಂದಿಗೆ ನಿಮ್ಮ ಜೀವನವು ಖಂಡಿತವಾಗಿಯೂ ಸುಖಮಯವಾಗುವುದು. ನನ್ನದಿಷ್ಟೇ ವಿನಂತಿ ಇದೆ. ಈಕೆ ಸುಕೋಮಲೆ, ಉಚ್ಚಕುಲಪ್ರಸೂತಳು. ಅವ



"ಇವರೇ ಸ್ವಾಮಿ, ನಮ್ಮೂರಿನ ಯುವಕ

*Statement about ownership and other particulars about newspaper* **Kasturi**, *to be published in the first issue every year after the last day of February.*

**FORM IV**

*( See Rule 8 )*

| | | |
|---|---|---|
| 1. Place of publication | .. | HUBLI |
| 2. Periodicity of its publication | : | Monthly |
| 3. Printer's name | .. | B. G. Guttal |
| Whether citizen of India? | .. | Yes |
| If foreigner, state the country of origin | .. | — |
| Address | .. | Post Box No. 30, Hubli-20 |
| 4. Publisher's name | .. | B. G. Guttal |
| Whether citizen of India? | .. | Yes |
| If foreigner, state the country of origin | .. | — |
| Address | .. | Post Box No. 30, Hubli-20 |
| 5. Editor's name | .. | R. R. Diwakar |
| Whether citizen of India? | .. | Yes |
| If foreigner, state the country of origin | .. | — |
| Address | .. | Post Box No. 30, Hubli-20 |
| 6. Names and addresses of individuals who own the newspaper and partners or share-holders holding more than one percent of the total capital. | .. | Loka Shikshana Trust, Hubli R. R. Diwakar sole trustee. |

I, B. G. Guttal, hereby declare that the particulars given above are true to the best of my knowledge and belief.

Hubli
Dated 1-3-1973

B. G. Guttal
Signature of Publisher

ಳನ್ನು ಹಿತದಿಂದ ನಡೆಸಿಕೊಳ್ಳಬೇಕಲ್ಲದೆ, ಚೇಷ್ಟೆಗಾಗಿಯಾದರೂ ಅವಳಿಗೆ ಹಿಂಸೆ ಕೊಟ್ಟರೆ ಆಕೆ ತಾಳಿಕೊಳ್ಳಲಾರಳು."

ರಾಜನು ಅವಳ ಮನದಿಂಗಿತವನ್ನು ಅರಿತನು. ಅವಳ ಮಾತಿನ ಹಿಂದಿರುವ ಸದ್ಭಾವವು ಅವನ ಮನಸ್ಸನ್ನು ಸೂರೆಗೊಂಡಿತು. ತನ್ನ ಆನಂದವನ್ನು ತಡೆದುಕೊಳ್ಳಲಾರದೇ ಆತನು ತನ್ನ ಆಸನದಿಂದ ಮೇಲೆದ್ದು, "ಚಂದನಾ, ಚಂದನಾ, ನಿನಗೆ ನಾನು ಬಹಳ ತೊಂದರೆಯನ್ನು ಕೊಟ್ಟೆ. ನೀನು ನಿಷ್ಠಾವಂತಳೂ ಪ್ರೇಮಲ ಸ್ವಭಾವದವಳೂ ಮಹಾ ಸಾಧ್ವಿಯೂ ಇರುವುದನ್ನು ಅರಿತೂ ನನಗೆ ನಿನ್ನ ಪರೀಕ್ಷೆ ಮಾಡಬೇಕೆನ್ನುವ ದುರ್ಬುದ್ಧಿ ಹೊಕ್ಕಿತು. ನಿನ್ನನ್ನು ಬಹುವಾಗಿ ಹಿಂಸಿಸಿದೆ. ನಿನ್ನ ಎಳೆಯ ಮಕ್ಕಳನ್ನು ನಿನ್ನಿಂದ ಕಸಿದುಕೊಂಡೆ. ನಿನ್ನನ್ನು ಮನೆ ಬಿಟ್ಟು ಹೊರಗೆ ಹಾಕಿದೆ. ಆದರೂ ನಿನ್ನ ಸಹನೆಯು ಒಂದಿನಿತೂ ಕಡಿಮೆಯಾಗಲಿಲ್ಲ. ನನಗಾಗಿ ನೀನು ಜೀವನದಂತೆ ನಿನ್ನ ದೇಹವನ್ನು ಪೊರೆದೆ. ಹೆಂಡತಿಗೆ ನಾನು ಹಿಂಸೆ ಕೊಟ್ಟು ಅನ್ಯಾಯ ಮಾಡಿದಷ್ಟು ಇನ್ನಾವ ಗಂಡನೂ ತನ್ನವಳಿಗೆ ಮಾಡಲಾರ. ಈ ಎಲ್ಲ ಜನರ ಸಮಕ್ಷಮವೇ ನಾನು ನನ್ನ ತಪ್ಪನ್ನು ಒಪ್ಪಿ, ನಿನ್ನ ಕ್ಷಮೆ ಕೇಳುವೆ."

ಚಂದನೆಯ ಮುಖವು ಕೆಂಪೇರಿತು. ನಾಚಿಕೆ, ಸಂಕೋಚಗಳು ಮಿತಿ ಮೀರಿ ಅವಳು ಮೂಕಮುಖಿಯಾದಳು. ತಾನು ಎಲ್ಲಿರುವೆನೆಂಬುದರ ಪರಿವೆಯೂ ಅವಳಿಗಿಲ್ಲವಾಯಿತು.

ಪ್ರದೀಪನು ತನ್ನ ಆಸನದಿಂದ ಅವಳ ಹತ್ತಿರ ಬಂದು ಆಲಿಂಗಿಸಿ, "ನಿನ್ನ ಪರೀಕ್ಷೆಯಲ್ಲಿ ನಾನು ಸೋತೆ. ನೀನೊಬ್ಬಳೇ ನನ್ನ ಪತ್ನಿಯಲ್ಲದೆ, ಇನ್ನಾರೂ ಆ ಸ್ಥಾನಕ್ಕೆ ಬರಲಾರರು. ಈ ವಧು ಇನ್ನಾರೂ ಅಲ್ಲದೆ, ನಿನ್ನ ಹಿರಿಯ ಮಗಳು, ಇವನೇ ನಿನ್ನ ಸುಕುಮಾರನು! ನನ್ನ ಅಪೇಕ್ಷೆಯ ಮೇರೆಗೆ ನನ್ನ ಅಕ್ಕನು ಈ ಗುಟ್ಟನ್ನು ಕಾಯ್ದುಕೊಂಡು ಬಂದಳು. ಇದುವರೆಗೆ ಈ ವಿಷಯ ತಿಳಿಸದಿದ್ದುದಕ್ಕಾಗಿ ನನ್ನ ಭಾವ ನನ್ನನ್ನು ಕ್ಷಮಿಸಬೇಕು. ನನ್ನ ಪುರಪ್ರಮುಖರು, ನನ್ನೀ ಪತ್ನಿಯನ್ನೂ ಈ ಮಕ್ಕಳನ್ನೂ ಸ್ವೀಕರಿಸುವರೆಂದು ತಿಳಿದಿದ್ದೇನೆ."

ಆಹಾ! ಚಂದನೆಯ ಮಸ್ತಕದ ಮೇಲೆ ಅಮೃತವರ್ಷವನ್ನೇ ಕರೆದಂತಾಗಿ ಅದರ ಭಾರಕ್ಕೆ ಆಕೆ ಮೂರ್ಛಿತೆಯಾದಳು. ಶೀತೋಪಚಾರಗಳಿಂದ ಆಕೆ ಎಚ್ಚತ್ತ ಮೇಲೆ ತನ್ನ ಮಕ್ಕಳಿಬ್ಬರನ್ನೂ ಆಲಿಂಗಿಸಿ, ಮುದ್ದಿಟ್ಟು ಅವರೆಲ್ಲರೊಂದಿಗೆ ತನ್ನ ಪತಿಯ ಕಾಲುಗಳನ್ನೂ ಮುಟ್ಟಿ ನಮಸ್ಕರಿಸಿದಳು. ದಾಸಿಯರು ಅವಳನ್ನು ಒಳಗೆ ಕರೆದೊಯ್ದು ಉಗುಬಗೆಯಿಂದ ಸಡಗರದಿಂದ ಅವಳನ್ನು ಸಿಂಗರಿಸಿ ಕರೆತಂದರು. ಭೂರಿಭೋಜನವು ಅತ್ಯಂತ ಸಂಭ್ರಮದಿಂದ ನೆರವೇರಿತೆಂದು ಬೇರೆ ಹೇಳಬೇಕಾಗಿಲ್ಲ. ಪ್ರದೀಪ–ಚಂದನೆಯರು ಮುಂದಿನ ತಮ್ಮ ಆಯುಷ್ಯವನ್ನು ಅತ್ಯಂತಿಕ ಸುಖದಿಂದ ಕಳೆದರೆಂದು ನಾವು ಹೇಳುವ ಅಗತ್ಯವೂ ಉಳಿಯಲಿಲ್ಲವಷ್ಟೆ! ✡



This Magazine owned by the Loka Shikshana Trust, Hublī, is printed & published by B. G. Guttal at the Samyukta Karnatak Press, Koppikar Road, Hubli.

Representatives: Bombay: V, S. Mani, Phone: 472794; Calcutta: H. Muzamdar 68/1 Dhakuria Station Road Phone: 46-4238. Madras: P. M. Srinivasan, Phone: 33748; New Dehli P. R. Chopra, Phone: 225130.

KASTURI PRICE: RE 1-00 Regd No. BG 131
Registered with the Registrar of Newspapers for India under No. 3633/57

# ಉತ್ತಮ ಬಿಸ್ಕತ್ತಿಗೆ ಮತ್ತೊಂದು ಹೆಸರು-ಕ್ವಾಲಿಟಿ !

ಉತ್ತಮ ಬಿಸ್ಕತ್ತುಗಳು ತಿನ್ನಲು ರುಚಿ, ಮಾಡುವುದು ಕಷ್ಟ.
ಆದರೆ ನಾವು ಕಷ್ಟಕ್ಕೆ ಸಿದ್ಧ. ಪದಾರ್ಥಗಳ ಆಯ್ಕೆಗೆ, ಬಿಸ್ಕತ್ ತಯಾರಿಕೆಯ ಪರಿಣಿತೆಗೆ,
ಪ್ರತಿಯೊಂದಕ್ಕೂ ಕಷ್ಟ ಪಡುತ್ತೇವೆ. ಆದುದರಿಂದಲೇ ಕ್ವಾಲಿಟಿ ಬಿಸ್ಕತ್ತುಗಳು
ಯಾವಾಗಲೂ ರುಚಿಯಾಗಿ, ಶುಚಿಯಾಗಿ, ಸತ್ವಪೂರ್ಣವಾಗಿರುತ್ತವೆ.

ಕ್ವಾಲಿಟಿಸ್ ಗ್ಲೂಕೋಸ್, ಗೋಲ್ಡನ್ ಮತ್ತು
ಟೀಟೈಂ ಬಿಸ್ಕತ್ತುಗಳು




ಕ್ವಾಲಿಟಿ ಫುಡ್ ಪ್ರಾಡಕ್ಟ್ಸ